ಹಂಸ ಸಾಹಿತ್ಯ ಮಾಲೆ—೬

# ಬಿಸಿಲುಗುದುರೆ

ಡಾ. ಎಂ. ಶ್ರೀನಿವಾಸ

ಹಂಸ ಲಿಮಿಟೆಡ್ — ಪ್ರಕಾಶಕರು — ಮೈಸೂರು

# ಅರಿಕೆ

'ಬಿಸಿಲುಗುದುರೆ' ನನ್ನ ನಾಲ್ಕನೆಯ ಕಾದಂಬರಿ. ಸಾಮಾನ್ಯ ಸಂಸಾರದ ಸಾಮಾನ್ಯ ಜೀವನದ ಏರುಪೇರುಗಳನ್ನು ಚಿತ್ರಿಸಲು ಇಲ್ಲಿ ಪ್ರಯತ್ನಿಸಿದ್ದೇನೆ. ಸಂತಾನ ಸಮಸ್ಯೆಯ ಪರಿಹಾರ, ಸಮಾಜೋದ್ಧಾರ, ಸಾಹಿತ್ಯರಂಗದಲ್ಲೊಂದು ನೂತನ ಪ್ರಯೋಗ—ಇವು ಯಾವುವೂ ಈ ಕೃತಿಯ ಉದ್ದೇಶವಲ್ಲ. ಕಥಾ ಕುತೂಹಲವುಳ್ಳ ಕೆಲವು ಮಂದಿ ಸಾಮಾನ್ಯ ಓದುಗರಿಗಾದರೂ ಇದು ರುಚಿಸಿದರೆ ಸಾಕು. ನನ್ನ ಲೇಖನಿಯ ಶ್ರಮ ಸಾರ್ಥಕವಾಗುತ್ತದೆ.

ಈ ಕೃತಿಯನ್ನು ಮುದ್ದಾಗಿ ಮುದ್ರಿಸಿ, ತಮ್ಮ ಸಾಹಿತ್ಯಮಾಲೆಯಲ್ಲಿ ಪೋಣಿಸಿಕೊಂಡಿರುವ ಹಂಸ ಲಿಮಿಟೆಡ್ ಸಂಸ್ಥೆಯವರಿಗೆ ನಾನು ತುಂಬ ಕೃತಜ್ಞನಾಗಿದ್ದೇನೆ

ರಾ. ವೆಂ. ಶ್ರೀನಿವಾಸ

# ಬಿಸಿಲುಗುದುರೆ

## ೧

"ಶಶಿ ನೀನು ಅಕ್ಕಾಂತೆ, ನಾನು ನರ್ಸಂತೆ."

"ರಮೇಶು ?"

"ರಮೇಶು ಅಣ್ಣ, ಅವನು ನನ್ನ ಕರಕೊಂಡು ಬರಬೇಕು. ನಾನು ಗಾಡೀಲಿ ಬರ್‍ತೀನಂತೆ, ನಂಗೆ ಮಗು ಆಗುತ್ತಂತೆ, ಈ ಆಟ ಆಡೋಣ ?"

ಆರು ವರುಷದ ಸರಸು ನಾಲ್ಕು ವರುಷದ ಶಶಿಗೆ ಹೇಳಿದಳು. ತಾನು ಹುಟ್ಟಿ ಇನ್ನೂ ನಾಲ್ಕು ವರುಷ ಕಳೆಯದ ಪುಟ್ಟ ಹುಡುಗಿ ಶಶಿ, ತಾಯಿಯಾಗಲು 'ಹ್ಞು ಆಗಲಿ' ಎಂದು ಸಂತೋಷದಿಂದ ಒಪ್ಪಿ ಕೊಂಡಳು.

ಆಟ ಮೊದಲಾಯಿತು.

ಮೈಸೂರು ನಗರದ ಲಕ್ಷ್ಮೀಪುರಂ ಬಡಾವಣೆಯಲ್ಲಿ ಗುಲಾಬಿ ಬಣ್ಣದ ದೊಡ್ಡ ಬಂಗಲೆ. ಅದಕ್ಕೆ ವಿಶಾಲವಾದ ಕಾಂಪೌಂಡು; ಕಾಂಪೌಂಡಿನಲ್ಲಿ ಸುವ್ಯವಸ್ಥಿತವಾದ ಸುಂದರವಾದ ಹೂದೋಟ; ಅಲ್ಲಲ್ಲಿ ಹಣ್ಣಿನ ಗಿಡಗಳು, ಎಡಪಕ್ಕದಲ್ಲಿ ತೂಗುಮಣೆಯ ಮಾವಿನ ಮರ, ಬಲ ಪಕ್ಕದಲ್ಲಿ ಕೆಂಪು ಹೂ ಗೊಂಚಲುಗಳಿಂದ ತುಂಬಿರುವ ಲತಾ ಮಂದಿರ; ಬಲಗಡೆ, ಈ ಮಕ್ಕಳ ಮುತ್ತಾತನ ಕಾಲದಲ್ಲಿ ಚೆನ್ನಾಗಿದ್ದ ವಿಕ್ಟೋರಿಯಾ ಗಾಡಿಯ ಮನೆ. ಇಂಥ ದೊಡ್ಡ ಬಂಗಲೆಯಲ್ಲಿಯೂ ರಾಮುಸ್ವಾಮಿಯ ಕೊಟಡಿಯ ಹತ್ತಿರವಲ್ಲಿಯೇ ಆ ಮೂವರೂ ಸೇರಿ ಆಟ ಶುರು ಮಾಡಿದರು. ಅವರಿಗೆ ಈ ಜಾಗವೇ ಅನುಕೂಲವಾಗಿತ್ತು. ಅವನಿಗೆ ದೊಡ್ಡ ಪರೀಕ್ಷೆ ಇದೆ, ಅವನ ಓದಿಗೆ ತಮ್ಮಿಂದ ಅಡಚಣೆ ಆಗುತ್ತದೆ ಎಂಬುದು ಅವರಿ ಗೇನು ಗೊತ್ತು? ನಿರಾತಂಕವಾಗಿ ಆಟ ಆರಂಭವಾಯಿತು.

"ಎಂಥ ಮಗೂನೆ ?" ಶಶಿ ಕುತೂಹಲದಿಂದ ಕೇಳಿದಳು.

"ಹೆಣ್ಣು ಮಗು"

"ಇಲ್ಲ ಕಣಮ್ಮ, ಗಂಡು" ಎಂದು ರಮೇಶು ವಿರೋಧಿಸಿದ.

"ಇಲ್ಲಪ್ಪ ಹೆಣ್ಣು ಮಗು"

"ಇಲ್ಲಮ್ಮ ಗಂಡು ಮಗು; ಅಕ್ಕಂಗೆ ಗಂಡು ಮಗು ಅಲ್ವಾ ಆಗಿರೋದು ?" ಎಂದು ಆ ಆರು ವರುಷದ ಗಂಡು ಬಲವಾಗಿ ವಿರೋಧಿಸಿದ. ಶಶಿ ಏನೂ ಮಾತಾಡದೆ ಇಬ್ಬರ ಜಗಳ ನೋಡುತ್ತಿದ್ದಳು.

ಸರಸು ಹೇಳಿದಳು: "ಹೆಣ್ಣು ಮಗು"

ರಮೇಶು ವಿರೋಧಿಸಿದ: "ಇಲ್ಲ ಗಂಡು ಮಗು"

"ಹೆಣ್ಣು ಮಗು"

"ಉಹ್ನು ಗಂಡು ಮಗು"

"ಉಹ್ನು ಹೆಣ್ಣು ಮಗು"

ಗಲಾಟೆ ಜೋರಾಯಿತು.

"ಏ ಯಾರೇ ಅದು ?" ಎಂದು ಕೂಗಿ ಮನೆಯ ಮಾಲೀಕ ಮಾಧವರಾಯರು ಹೊರಗೆ ಬಂದರು.

"ಏನ್ರೊ ಅದು ಹುಚ್ಚುಹುಚ್ಚು ಆಟ, ಥೂ ಕತ್ತೆಗಳ!" ಎಂದು ಗರ್ಜಿಸಿದರು. ರಾಮಸ್ವಾಮಿಯ ಕೋಣೆಯ ಕಿಟಕಿಯ ಹತ್ತಿರ ಕುಳಿತಿದ್ದ ಮೂವರು ಮೊಮ್ಮಕ್ಕಳೂ ಎದ್ದು ಮೂರು ಮೂರು ಗಜ ದೂರ ಸರಿದರು. ಶಶಿ ಅಲ್ಲಿ ನಿಲ್ಲಲಾರದೆ ಒಳಗೆ ಓಡಿಹೋದಳು.

"ಅವರಿಗೆ ಪರೀಕ್ಷೆ ನಡೀತಾ ಇದೆ. ನೀವಲ್ಲಿ ಸೇರಿಕೊಂಡು ಗಲಾಟೆ ಮಾಡ್ತಾ ಇದೀರ, ಕತ್ತೆಗಳ! ಬಿಸಿಲು ಬೇರೆ—ತಣ್ಣಗೆ ಒಳಗಡೆ ಇರೋದು ಬಿಟ್ಟು....ರಾಮಸ್ವಾಮಿಗಳೇ" ಮಾಧವರಾಯರು ಹುಡುಗರನ್ನು ಗದರಿಸಿಕೊಂಡು ರಾಮಸ್ವಾಮಿಯ ಕೋಣೆಯ ಕಡೆ ತಿರುಗಿದರು.

"ರಾಮಸ್ವಾಮಿಗಳೇ"—ಮುಂದಕ್ಕೆ ಹಾಕಿದ್ದ ಬಾಗಿಲನ್ನು ಬಲಗೈಯಲ್ಲಿ ಮುಟ್ಟಿ ಕೂಗಿದರು; ಬಾಗಿಲು ತೆರೆದುಕೊಂಡಿತು.

ಚರಿತ್ರೆಯ ಪುಸ್ತಕವನ್ನು ಹಿಡಿದಿದ್ದ ರಾಮಸ್ವಾಮಿ "ಆ್ಞ ಏನ್ ಸಾರ್" ಎಂದು ನೆಟ್ಟಗೆ ಕುಳಿತ.

"ಏನು, ಹುಡುಗರ ಗಲಾಟೆ ಕೇಳಿಸ್ತಾ ಇಲ್ಲಿಲ್ವೆ? ನೀವು ಹೀಗೆ

ಸುಮ್ನೆ ಇದ್ದುಬಿಟ್ರೆ ಅವು ನಾಳೆ ನಿಮ್ಮ ಕೋಣೆ ಒಳಕ್ಕೇ ಬಂದು ಬಿಡುತ್ವೆ. ಗದರಿಸಬಾರ್ದೆ?"

"ಪರವಾಯಿಲ್ಲ. ನಾನು ಓದ್ತಾ ಇರಲಿಲ್ಲ, ಈಗ ಶುರುಮಾಡಿದೆ."

"ರೆಸ್ಟ್ ತೊಗೋತಾ ಇದ್ದರೊ?"

"ಏನಿಲ್ಲ, ಎರಡು ಗಂಟೆಗೆ ಬಂದೆ ಕಾಲೇಜಿಂದ. ಹಾಗೇ ಒಂದು ಕಾಲು ಗಂಟೆ ಸುಮ್ನೆ ಕೂತುಕೊಂಡಿದ್ದೆ"

"ಇವತ್ತು ಏನಿತ್ತು?"

"ಕನ್ನಡ"

"ಹೇಗೆ ಮಾಡಿದೀರಿ?"

"ಪರವಾಯಿಲ್ಲ, ಚೆನ್ನಾಗಿ ಮಾಡಿದೀನಿ. ಎಷ್ಟಾದರೂ ಕನ್ನಡತಾನೆ"

"ಅಯ್ಯೊ ಹಾಗನ್ಬೇಡಿ. ಅದೇನ್ಕಷ್ಟಾಂತ ಅದರಲ್ಲೇ ಫೇಲಾಗಿರೋ ರೆಷ್ಟು ಜನ ಇಲ್ಲ, ನಮ್ಮ ಸೀತೂ ಗಂಡ ಹಾಗೇ ಬಿ.ಎ.ಲಿ ಒಂದೊರ್ಷ ಡುಮ್ಕಿ ಹೊಡೆದದ್ದು."

"ಇಲ್ಲ ಇಲ್ಲ, ನಾನು ಚೆನ್ನಾಗಿ ಮಾಡಿದೀನಿ."

"ನಾಳೆ ಏನು?"

"ನಾಳೆ ಏನೂ ಇಲ್ಲ, ನಾಡಿದ್ದು ಉಂಟು"

"ಇನ್ನೂ ಎಷ್ಟು ಪೇಪರ್ಸ್ ಆಗಬೇಕು?"

"ಒಂಬತ್ತು"

"ಅಬ್ಬ! ಇನ್ನೂ ಒಂಬತ್ತಿದೆಯೆ? ಸರಿಯಪ್ಪ, ಇನ್ನೂ ಒಂಬತ್ತು ದಿನ ನಡೆಯುತ್ತೆ ಅನ್ನಿ—ಒಂಬತ್ತು ತಿಂಗಳು!" ರಾಯರು ನಕ್ಕರು. ರಾಮಸ್ವಾಮಿಗೂ ನಗು ಬಂತು.

"ಎಲ್ಲಿ, ಇನ್ನೂ ಹನ್ನೆರಡು ದಿನ ಆಗುತ್ತೆ. ಯಾಕೇಂದ್ರೆ, ನಮಗೆ ಮಧ್ಯೆ ಮೂರು ದಿನ ರಜ ಬರುತ್ತೆ."

"ಓ. ಹಾಗಾದರೆ ಊರು ಕಾಣೋದು ಇನ್ನೂ ಹದಿನೈದು ದಿನ ಅನ್ನಿ"

"ಹ್ಞು ಆಗುತ್ತೆ. ಮುಂದಿನ ಸೋಮವಾರ ಅಲ್ಲ, ಅದರ ಮುಂದಿನ

ಸೋಮವಾರ ಪರೀಕ್ಷೆ ಮುಗಿಯುತ್ತೆ. ನಾನು ಬುಧವಾರ ಹೋಗೋಣಾಂತಿದೀನಿ".

"ಏನು ಹೋಗ್ತಾ ಹೊಳೆನರಸೀಪುರದಲ್ಲಿ ಇಳೀತೀರೋ, ಇಲ್ಲ...."

"ಇಲ್ಲ. ಡೈರೆಕ್ಟಾಗಿ ಹಾಸನಕ್ಕೇ ಹೋಗ್ತೀನಿ"

"ಯಾಕೆ? ಇಳಿದು ಒಂದೆರಡು ದಿನ ಜೊತೇಲಿ ಆನಂದವಾಗಿ ಕಾಲ ಕಳೆದು...."

"ಇಲ್ಲ ಈ ಸಲ ಇಳಿಯೊಲ್ಲ."

ಹೊಳೆನರಸೀಪುರದ ಮಾತು ಬಂದಕೂಡಲೆ ರಾಮುಸ್ವಾಮಿಯ ಗಮನ ಪುಸ್ತಕದ ಕಡೆ ಹೋಯಿತು. ರಾಯರ ಮಾತಿನ ಕಡೆ ಆಸಕ್ತಿ ಕಡಮೆಯಾಯಿತು. ರಾಯರು ಎಷ್ಟೋ ಬಾರಿ ಮಾಡಿದಂತೆ "ಸರಿ ಡಿಸ್ಟರ್ಬ್ ಮಾಡ್ದೆ, ಓದ್ಕೊಳ್ಳಿ, ಓದ್ಕೊಳ್ಳಿ" ಎನ್ನುತ್ತ ಬಾಗಿಲನ್ನು ಮುಂದಕ್ಕೆ ಎಳೆದುಕೊಂಡರು.

ರಾಮುಸ್ವಾಮಿಗೆ ಬೆಳಗಿನಿಂದ ನಾಲ್ಕು ಬಾರಿ ಹೊಳೆನರಸೀಪುರದ ನೆನಪಾಗಿತ್ತು. ಈಗ ರಾಯರು ಐದನೆಯ ಬಾರಿ ಜ್ಞಾಪಿಸಿದರು. ಅವರು ಅನೇಕ ಬಾರಿ ಹಾಗೆ ಜ್ಞಾಪಿಸಿದ್ದರು. 'ಆನಂದವಾಗಿ ಕಾಲ ಕಳೆಯೋದು' ಎಂಬ ಮಾತು ಹಲವು ಬಾರಿ ಅವರ ಬಾಯಿಂದ ಬಂದಿತ್ತು. ಆದರೆ ರಾಮುಸ್ವಾಮಿಗೆ ಅದರಿಂದ ಆನಂದವುಂಟಾಗಿರಲಿಲ್ಲ.

ಮದುವೆ ಆಗಿ ಮೂರು ವರ್ಷ ಆಯಿತು. ಆ ಮೂರು ವರ್ಷದಲ್ಲಿ ಏನೇನೋ ನಡೆದುಹೋಯಿತು; ಆಗಬಾರದ್ದು ಆಗಿಹೋಯಿತು. ಹೆಂಡತಿ ಗೌರಿಯ ನೆನಪಾದಾಗಲೆಲ್ಲ ಆ ಘಟನೆಗಳ ನೆನಪಾಗುತ್ತಿತ್ತು.

ತಂದೆ ರಂಗಣ್ಣನವರು ಮಗನ ಮದುವೆ ಗೊತ್ತುಮಾಡಿ ಕಾಗದ ಬರೆದಾಗ ಮಗ ಬೆಂಗಳೂರಿನಲ್ಲಿ ಓದುತ್ತಿದ್ದ; ತುಳಸೀತೋಟದ ಗಲ್ಲಿಯೊಂದರಲ್ಲಿ ಒಂದು ಪುಟ್ಟ ಕೋಣೆಯಲ್ಲಿ ತನ್ನ ಸ್ನೇಹಿತ ನಾರಾಯಣಮೂರ್ತಿಯೊಡನೆ ವಾಸಿಸುತ್ತಿದ್ದ. ನಾರಾಯಣಮೂರ್ತಿ ರಾಮುಸ್ವಾಮಿಗಿಂತ ಒಂದು ವರ್ಷ ದೊಡ್ಡವನು, ವಿವಾಹಿತ. ಅವನು ತನಗಿಂತ ಅನುಭವಶಾಲಿ ಎಂದು ರಾಮುಸ್ವಾಮಿ ನಂಬಿದ್ದ. ಎಲ್ಲ ವಿಷಯಗಳಲ್ಲಿಯೂ

ಅವನ ಸಲಹೆ ಇವನಿಗೆ ಅಗತ್ಯವಾಗಿ ಬೇಕಾಗಿತ್ತು. ರಾಮುಸ್ವಾಮಿ ಎಷ್ಟೋ ವಿಷಯಗಳನ್ನು ನಾರಾಯಣಮೂರ್ತಿಯಿಂದ ಕಲಿತಿದ್ದ.

ಬೆಂಗಳೂರಿಗೆ ಮೊದಲು ಬಾರಿ ಬಂದುದು ನಾರಾಯಣಮೂರ್ತಿ ಯೊಡನೆಯೆ. ಇಬ್ಬರೂ ಒಟ್ಟಿಗೆ ವಾಸಮಾಡಬೇಕೆಂದು ಸಲಹೆಮಾಡಿ ದುದೂ, ತುಳಸೀತೋಟದ ಗಲ್ಲಿಯೊಂದರಲ್ಲಿ ಚಿಕ್ಕಕೋಣೆಯನ್ನು ಬಾಡಿಗೆಗೆ ಗೊತ್ತುಮಾಡಿದುದೂ, ಎರಡು ದಿನ ಹೋಟಲ ಊಟಮಾಡಿ ಆಮೇಲೆ ಅದು ದುಭಾರಿ, ಅಡಿಗೆ ಮಾಡಿಕೊಳ್ಳೋಣ ಎಂದು ಸಲಹೆ ಮಾಡಿದುದೂ, ಅದಕ್ಕೆ ಬೇಕಾದ ಒಂದು ಒಲೆ, ಅಲ್ಯೂಮಿನಿಯಂ ತಪ್ಪಲೆ, ಡಬರಿ, ಒಂದು ಡಬ್ಬ ಇದ್ದಲು ಇತ್ಯಾದಿ ಕೊಂಡುಕೊಂಡುದೂ ನಾರಾಯಣ ಮೂರ್ತಿಯೇ. ರಾಮುಸ್ವಾಮಿ ಸ್ವತಃ ಯೋಚಿಸಿ ಸ್ವಂತ ಅಭಿಪ್ರಾಯ ವನ್ನು ಕೊಡುವ ಗೋಜಿಗೇ ಮೊದಲಿಂದಲೂ ಹೋದವನಲ್ಲ. ಮಾತೆ ತ್ತಿದರೆ 'ಏನಪ್ಪ, ಏನಂತೀಯ, ಏನುಮಾಡಲಿ ಹೇಳು' ಎಂದು ನಾರಾಯಣಮೂರ್ತಿಯನ್ನೊ, ತಂದೆಯನ್ನೊ, ತಾಯಿಯನ್ನೊ, ಹತ್ತಿರದ ನಂಟರಿಷ್ಟರನ್ನೊ ಕೇಳುವ ಸ್ವಭಾವ ಅವನ ಹುಟ್ಟುಗುಣ ವಾಗಿಬಿಟ್ಟಿತ್ತು. ಆದರೆ ಮದುವೆಯಾದ ಮೇಲೆ ನಡೆದ ಕೆಲವು ಘಟನೆ ಗಳಿಂದ 'ಥೂ, ಯಾರ ಮಾತೂ ಕೇಳಬಾರದು' ಎನ್ನಿಸಿಬಿಟ್ಟಿತ್ತು ; ತಾನೇ ಸ್ವತಃ ಆಲೋಚಿಸಿ ತೀರ್ಮಾನಕ್ಕೆ ಬರಲು ಪ್ರಯತ್ನಿಸುತ್ತಿದ್ದ; ಅನೇಕ ಬಾರಿ ಹಾಗೆ ಮಾಡಿದ್ದ. ಆದರೆ ಅವರಿಂದಲೂ ಅವನ ಮನಸ್ಸಿಗೆ ಹಿತ ವಾಗಿರಲಿಲ್ಲ. ತಾನೊಂದು ರೀತಿ ಹೇಳಿದರೆ, ಅದೊಂದು ರೀತಿ ಅರ್ಥವಾಗಿ ಅನಾಹುತವಾಗಿಬಿಟ್ಟಿತ್ತು.

ಹೆಣ್ಣನ್ನು ನೋಡದೆಯೇ ಮದುವೆಗೆ ಒಪ್ಪಿ ಕಾಗದ ಬರೆಯುವ ಸ್ಥಿತಿ ಮಗನಿಗೆ ಬಂದುಬಿಟ್ಟಿತ್ತು. ರಂಗಣ್ಣನವರು ಬರುವ ಜ್ಯೇಷ್ಠ ಶುದ್ಧ ತದಿಗೆ ಮುಹೂರ್ತ ಇಡಿಸಿದ್ದೇನೆ. ಹುಡುಗಿ ತುಂಬಾ ಚೆನ್ನಾಗಿದ್ದಾಳೆ. ನಿಮ್ಮಮ್ಮನೂ ಒಪ್ಪಿದ್ದಾಳೆ. ನೀನೂ ಒಪ್ಪಿ ಕಾಗದ ಬರೆದರೆ ಎಲ್ಲಾ ಏರ್ಪಾಟು ಮಾಡಿಕೊಳ್ಳುತ್ತೇವೆ, ಎಂದು ಬರೆದಿದ್ದರು. ಕಾಗದವನ್ನು ಮೊದಲು ರಾಮುಸ್ವಾಮಿಯೇ ಓದಿಕೊಂಡ. ಆದರೆ ಅದರ ಬಗ್ಗೆ

ಆಲೋಚಿಸಲು ಮತ್ತು ಉತ್ತರ ಕೊಡಲು ನಾರಾಯಣಮೂರ್ತಿಯ ನೆರವು ಅವನಿಗೆ ಅಗತ್ಯವಾಗಿತ್ತು.

ನಾರಾಯಣಮೂರ್ತಿ ಕಾಗದ ನೋಡಿದ.

"ನೋಡಪ್ಪ ರಾಮಣ್ಣಾ! ಹ್ಯಾಗಿದೆ ಭವಿಷ್ಯ!" ಎಂದು ಕಣ್ಣರಳಿಸಿ ಗೊಳ್ಳನೆ ನಕ್ಕ.

ನಿಜ. ಭವಿಷ್ಯ ನಿಜವಾಗಿತ್ತು.

ಹಿಂದಿನ ದಿನ ನಾರಾಯಣಮೂರ್ತಿ ರಾಮಸ್ವಾಮಿಯನ್ನು ಮಲ್ಲೇಶ್ವರಕ್ಕೆ ಕರೆದುಕೊಂಡು ಹೋಗಿದ್ದ. ಮಲ್ಲೇಶ್ವರದಲ್ಲಿ ಅನಂತ ಪಂಡಿತರ ಮನೆಗೆ ಇಬ್ಬರೂ ಹೋಗಿದ್ದರು. ರೈತ ಹನುಮಂತನ ಕಾಗದ ವನ್ನು ತಂದಿದ್ದ ದೂರದ ಸೋದರಳಿಯ ನಾರಾಯಣಮೂರ್ತಿಯನ್ನು ಪಂಡಿತರು ಆದರದಿಂದ ಸ್ವಾಗತಿಸಿದರು. ಜೊತೆಯಲ್ಲಿ ಗೆಳೆಯನಿಗೂ ಸ್ವಾಗತ, ಬಿಸಿಬಿಸಿ ಕಾಫಿ ದೊರೆಯಿತು. ಅನಂತಪಂಡಿತರು ಬಹಳ ಚೆನ್ನಾಗಿ ಭವಿಷ್ಯ ಹೇಳುತ್ತಾರೆ, ಎಂದು ನಾರಾಯಣಮೂರ್ತಿ ಮೊದಲೇ ಹೇಳಿದ್ದ. ಅದನ್ನೇ ಕುರಿತು ಇಬ್ಬರೂ ಮಾತಾಡುತ್ತ ಪಂಡಿತರ ಮನೆ ಯನ್ನು ಪ್ರವೇಶಿಸಿದ್ದರು. ಪಂಡಿತರು ನಾರಾಯಣಮೂರ್ತಿಯೊಡನೆ ಊರಿನ ಸಮಾಚಾರ ಕುರಿತು ಮಾತನಾಡಿದರು. ಆ ಮಾತು ಈ ಮಾತು ನಡೆದು, ಪಂಡಿತರು ತಮ್ಮ ನಿತ್ಯದ ಕಸಬಿಗೆ ಬಂದರು. ನಾರಾಯಣ ಮೂರ್ತಿಯ ಕೈ ನೋಡಿ ಭವಿಷ್ಯ ನುಡಿದದ್ದಾಯಿತು. ಅವನ ಒತ್ತಾಯದ ಮೇಲೆ ರಾಮಸ್ವಾಮಿ ಪಂಡಿತರ ಮುಂದೆ ಅಂಗೈ ಚಾಚಿದ. ಪಂಡಿತರು ಕೈ ನೋಡಿ ಮೊದಲು "ಭಲಾಪ್ಪ! ಇನ್ನು ಮೂರು ತಿಂಗಳಲ್ಲೇ ನಿನಗೆ ಮದುವೆ ಆಗಿಬಿಡುತ್ತೆ" ಎಂದರು. ಆಸ್ತಿಪಾಸ್ತಿ ಬೆಳಸೋ ಯೋಗ್ಯತೆ ಇಲ್ಲದಿದ್ದರೂ ಇದ್ದುದನ್ನು ಹಾಳುಮಾಡದೆ ಉಳಿಸಿಕೊಳ್ಳುವ ಯೋಗ ಇದೆ. ಮಕ್ಕಳು ಮರಿ ಅಷ್ಟಕಷ್ಟೆ, ಎಂದು ಏನೇನೋ ಹೇಳಿದರು. ರಾಮ ಸ್ವಾಮಿಗೆ ಇವುಗಳ ಕಡೆ ಗಮನವೇ ಇರಲಿಲ್ಲ. "ಈ ಸಲ ಪರೀಕ್ಷೇಲಿ ಏನಾಗುತ್ತೆ?" ಎಂದು ಬಹಳ ಮುತುವರ್ಜಿಯಿಂದ ಕೇಳಿದ. ಪಂಡಿತರು ಮತ್ತೊಮ್ಮೆ ಕೈಯನ್ನು ಪರಿಶೀಲಿಸಿ "ಪಾಸಾಗುತ್ತೆ" ಎಂದರು.

ನಾರಾಯಣಮೂರ್ತಿ "ನಡೀ ರಾಮಣ್ಣ ಹಾಗಾದರೆ ಕಾಫಿ ತಿಂಡೀಗೆ" ಎಂದು ಎದ್ದ.

ತಂದೆ ಬರೆದಿದ್ದ ಕಾಗದ ಪಂಡಿತರ ಭವಿಷ್ಯವನ್ನು ನಿಜ ಮಾಡಿತ್ತು.

"ಇದೇನು ಮೂರ್ತಿ ಆಶ್ಚರ್ಯ!" ಎಂದು ಬೆರಗಾದ ರಾಮಸ್ವಾಮಿ.

"ನೋಡು ಮತ್ತೆ ಭವಿಷ್ಯ ಹೇಗಿದೆ!" ಎಂದ ನಾರಾಯಣಮೂರ್ತಿ ಪಂಡಿತರ ಪ್ರಭಾವವನ್ನು ಪ್ರಶಂಸಿಸುತ್ತ.

ರಾಮಸ್ವಾಮಿಗೆ ಹುಡುಗಿಯನ್ನು ನೋಡಬೇಕೆನ್ನಿಸಿತು.

"ಈಗೇನು ಬರೀಲಿ ಕಾಗದಾನ ಮೂರ್ತಿ?" ಎಂದು ಕೇಳಿದ.

"ಏನು ಬರೀತೀಯ 'ಓ. ಎಸ್.' ಅಂತ ಬರಿ. ಶಿರಸ್ತೇದಾರರ ಮಗಳು ಅಂತಾರೆ. ಮನೆ ಮಠ ಚೆನ್ನಾಗಿರಬಹುದು. ಇಬ್ಬರೇ ಹೆಣ್ಣು ಮಕ್ಕಳು ಅಂತ ಬೇರೆ ಹೇಳ್ತಾರೆ, ಅನುಕೂಲವಾಗಿರಬಹುದು. ಬೇಕಾದರೆ ಪಂಡಿತರ ಮನೆಗೆ ಹೋಗೋಣ. ಈ ವಿಷಯ ತಿಳಿಸಿ, ಸಂಬಂಧ ಅನುಕೂಲವೆ ಇಲ್ಲವೆ ಅಂತ ಕೇಳೋಣ...."

"ಅದೆಲ್ಲ ಸರಿ ಮೂರ್ತಿ, ಆದರೆ ನಾನು ಹುಡುಗೀನ್ನ ನೋಡ ಬೇಡವೆ?"

"ನೋಡಬೇಕು. ಆದರೆ ನಿಮ್ಮಪ್ಪ ನೋಡಿ ಒಪ್ಪಿಕೊಂಡು ಲಗ್ನಾನೇ ನಿಶ್ಚಯ ಮಾಡಿರೋವಾಗ ನೀನು ಹುಡುಗೀನ ನೋಡ ಬೇಕೂಂತ ರಾಗ ಎಳೆದರೆ?"

"ಸರಿ. ಹಾಗಾದರೆ ಹುಡುಗೀನ ನೋಡಬೇಕಾಗಿಲ್ಲ ಅಂತೀಯ."

"ನೋಡೇ ನೋಡ್ತೀಯಲ್ಲ ಆಮೇಲೆ."

"ಅದು ಸರಿ. ಮದುವೆಗೆ ಮುಂಚೆ ಹುಡುಗೀನ್ನ...."

"ನಿಮ್ಮಪ್ಪ ಒಪ್ಪಿದರೆ ಹಾಗೆ ಬರಿಯಪ್ಪ, ಹುಡುಗೀನ ನೋಡಿದ ಮೇಲೆ ಲಗ್ನ ನಿಶ್ಚಯ ಮಾಡೋಣ ಅಂತ"

"ಛೆ ಛೆ, ಅದೆಲ್ಲಿ ಸಾಧ್ಯ. ಆಮೇಲೆ ನಮ್ಮಪ್ಪ ಮನೆ ಬಿಟ್ಟೇ ಓಡಿ ಹೋಗಿಬಿಡ್ತಾರೆ. ಅವರ ವಿಷಯ ಗೊತ್ತಿದ್ದೂ ನೀನು ಹೀಗೆ ಹೇಳ್ತೀಯಲ್ಲ ಮೂರ್ತಿ?"

"ಸರಿ ಮತ್ತೆ, ಎಲ್ಲ ಭಾರಾನೂ ನಿಮ್ಮಪ್ಪನ ಮೇಲೆ ಹಾಕಿ ಸುಮ್ಮನೆ ಒಪ್ಪಿಕೊ"

"ಅಲ್ಲ ಹುಡುಗಿ ಹೇಗಿದೆಯೋ ಅಂತ"

"ಹಾಗಾದರೆ ನಡಿ, ಪಂಡಿತರ ಮನೇಗೆ ಹೋಗಿಬರೋಣ; ಅವರು ಸೂಕ್ಷ್ಮವಾಗಿ ಹೇಳೇ ಹೇಳ್ತಾರೆ. ಅದೂ ಅಲ್ಲವೆ ಹೆತ್ತ ತಂದೆಗೆ ತನ್ನ ಸೊಸೆ ಚೆನ್ನಾಗಿರಬೇಕು, ಅನ್ನೋ ಆಸೆ ಇರೋದಿಲ್ಲವೆ? ಇದ್ದೇ ಇರುತ್ತೆ. ಅವರು ನೋಡಿರ್ತಾರೆ. ಕಾಗದದಲ್ಲೇ ಬರ್ದಿದಾರೆ, ಹುಡುಗಿ ತುಂಬ ಚೆನ್ನಾಗಿದಾಳೆ ಅಂತ. ಆದ್ದರಿಂದ ನೀನು ಒಪ್ಪಿ ಕಾಗದ ಬರೀಬಹುದಪ್ಪ"

"ನೀನು ಹ್ಯಾಗೆ ಮಾಡಿದಿ ?"

"ನಂದೇನು. ಮನೇ ಹೆಣ್ಣು, ಅಕ್ಕನ ಮಗಳು; ಆದ್ದರಿಂದ ನಾನು ಮದುವೇಗೋಸ್ಕರ ಹುಡುಗೀನ್ನ ನೋಡಲೇ ಬೇಕಾಗಿರಲಿಲ್ಲ."

"ಹಾಗಾದರೆ ನೀನು ಹುಡುಗೀನ ನೋಡಲೇ ಇಲ್ಲವೆ ?"

"ಇಲ್ಲ."

"ಮೊದಲೇ ನೋಡಿದ್ಯಲ್ಲ ?"

"ಹೌದು. ಮೊದಲೇ ನೋಡಿದ್ದೆ. ಆದರೆ ಮದುವೆ ಅಂತ ನಿಶ್ಚಯಮಾಡಿದಾಗ, ನಾನು ಹುಡುಗಿ ಹೇಗಿದಾಳೆ ಅನ್ನೋದನ್ನ ನೋಡ ಲಿಲ್ಲ. ಎಲ್ಲ ಭಾರಾನೂ ನಮ್ಮಮ್ಮನ ಮೇಲೆ ಹಾಕಿ ಒಪ್ಪಿಕೊಂಡೆ. ಆಗ ನಾನೂ ನಿನ್ನ ಹಾಗೇ ದೂರ ಇದ್ದೆ—ದಾವಣಗೆರೇಲಿ. ನಮ್ಮ ತಂದೆ ಲಗ್ನ ಇಡಿಸಿ ಕಾಗದ ಬರೆದರು. ನಾನು ಸುಮ್ಮನೆ 'ಓ. ಎಸ್.' ಅಂತ ಉತ್ತರ ಬರೆದೆ."

"ನನಗೂ ಹಾಗೇ ಮಾಡೂಂತೀಯ ?"

"ಮತ್ತಿನ್ನ್ಯಾಗೆ ಮಾಡ್ತೀಯ ಹೇಳು, ಈ ಪರಿಸ್ಥಿತೀಲಿ. ಬೇಡ ಅಂದರೆ ಅಪ್ಪನಿಗೆ ಕೋಪ ಬರುತ್ತೆ. ಅವರು ಎಲ್ಲರ ಹಾಗಲ್ಲ; ಕಾದ ಕೆಂಡ ಆಗಿ ಬಿಡ್ತಾರೆ. ನಿಮ್ಮಮ್ಮನೂ ಹುಡುಗೀನ ಒಪ್ಪಿದಾರೇಂತ ಬೇರೆ ಬರೆದಿ ದಾರೆ. ನೀನು ಹಿಂದೇಟು ಹಾಕಿದರೆ ಅವರಿಗೂ ಅಸಮಾಧಾನವಾಗ ಬಹುದು; ಆದ್ದರಿಂದ ನೋಡು, ಯೋಚನೆಮಾಡು........"

"ಏನೋಪ್ಪ, ನನಗೊಂದೂ ಹೊಳೆಯೋದಿಲ್ಲ. ಎಲ್ಲ ನೀ ಹೇಳಿದ ಹಾಗೆ........ಈಗೇನು ಮಾಡೋಣ ಹೇಳು, ನೀನೇ"

ನಾರಾಯಣಮೂರ್ತಿ ತೆರೆದಿದ್ದ ಫಿಸಿಕ್ಸ್ ಪುಸ್ತಕವನ್ನು ಮುಚ್ಚಿ ಗೂಡಿನೊಳಗಿಟ್ಟು, ವಾಪಸು ಬಂದು ಚಾಪೆಯ ಮೇಲೆ ಕುಳಿತುಕೊಂಡ.

"ನೋಡು ರಾಮಣ್ಣ, ನಾ ಹೇಳಿದ್ಹಾಗೆ ಮಾಡು. ಇವತ್ತು ಸಾಯಂಕಾಲ ಕಾಲೇಜು ಮುಗಿಸಿಕೊಂಡು ಇಬ್ಬರೂ ಪಂಡಿತರ ಮನೆಗೆ ಹೋಗೋಣ. ಈ ವಿಷಯ ತಿಳಿಸೋಣ. ಅವರು ಲೆಕ್ಕಾಚಾರ ಹಾಕಿ ಹುಡುಗಿ ಹೇಗಿದಾಳೆ ಅನ್ನೋದನ್ನ ಹೇಳಿಬಿಡ್ತಾರೆ.

"ಅದ್ಹ್ಯಾಗೆ ಸಾಧ್ಯ ಮೂರ್ತಿ?"

"ನೋಡು, ಸಾಧ್ಯ. ನಾನು ಎಷ್ಟೋ ಸಲ ಕೇಳಿದೀನಿ. ಯಾಕೆ ನಿನಗೆ ಈ ವಿಷಯ ಗೊತ್ತಿಲ್ಲವೆ? ಏನಾದರೂ ಸಾಮಾನು ಕಳೆದು ಹೋದರೆ ಶಾಸ್ತ್ರ ಕೇಳೊಲ್ಲವೆ ಎಷ್ಟೋ ಜನ! ಚೆನ್ನಾಗಿ ಶಾಸ್ತ್ರ ಹೇಳೋರಿಗೆ ಆ ಸಾಮಾನು ಕದ್ದೋರು ಯಾರು, ಅವರು ಹೇಗಿದಾರೆ ಅನ್ನೋದೆಲ್ಲ ಗೊತ್ತಾಗುತ್ತೆ ಅವರು ಹೇಳಿಬಿಡ್ತಾರೆ, ಕದ್ದೋರು ಹೀಗಿದಾರೇಂತ...."

"ಹೌದು ಹೌದು. ನಮ್ಮೂರಲ್ಲಿ ರಂಗಾಜೋಯಿಸರು ಹೇಳ್ತಾರೆ. ನಮ್ಮ ಹಸು ಕಳೆದುಹೋಗಿದ್ದಾಗ ಅವರು ಹೇಳಿದ್ದು ನೆನಪಿದೆ. ಕಪ್ಪಗೆ ತೆಳ್ಳಗೆ ಉದ್ದಕ್ಕಿರೋ ಆಸಾಮಿ ಹೊಡಕೊಂಡ್ಹೋಗಿದಾನೆ, ದಕ್ಷಿಣದಿಕ್ಕಿಗೆ ಹೋದರೆ ಸಿಕ್ಕಬಹುದು ಅಂತ ಹೇಳಿದರು. ಆಮೇಲೆ ನಮ್ಮ ಪಕ್ಕದ ಮನೆ ಬಸವ ಮೂಡಲ ಹಳ್ಳಿಕಡೆಗೆ ಹೋಗಿ ಹುಡುಕಿದ. ನಾವಿಗರ ಕರಿಯ ನಮ್ಮ ಹಸೂನ ಕದ್ದು ತನ್ನ ಮನೇ ಒಳಗೆ ಕಟ್ಟಿಹಾಕ್ಕೊಂಡಿದ್ದ. ಹೌದು, ನಿಜ ಹೇಳಿಬಿಡ್ತಾರೆ."

"ಹಾಗೇನೇ ಇದೂ. ನಮ್ಮ ಪಂಡಿತರಂಥೋರು ಸರಿಯಾಗಿ ಹೇಳಿ ಬಿಡ್ತಾರೆ."

ಪಂಡಿತರು ಸರಿಯಾಗಿಯೇ ಹೇಳಿದರು. ಆ ದಿನ ಸಂಜೆ ಕಾಲೇಜು ಮುಗಿಸಿಕೊಂಡು ಇಬ್ಬರೂ ಪಂಡಿತರ ಮನೆಗೆ ಹೋದರು. ಪಂಡಿತರು ಏನೇನೋ ಲೆಕ್ಕಾಚಾರ ಮಾಡಿ, ಹುಡುಗಿ ತೆಳ್ಳಗೆ ಬೆಳ್ಳಗೆ ಚೆನ್ನಾಗಿದಾಳೆ, ಎಂದರು.

ನಾರಾಯಣಮೂರ್ತಿ "ಈ ಸಂಬಂಧ ಮಾಡಬಹುದೆ ?" ಎಂದ.

ಪಂಡಿತರು "ಪರವಾಯಿಲ್ಲ, ಚೆನ್ನಾಗಿದೆ. ಮಾಡಬಹುದು" ಎಂದರು.

ಮೂರು ತಿಂಗಳನಂತರ ಈ ಸಂಬಂಧ ನಡೆಯಿತು. ಆ ಸಮಾರಂಭ ನಡೆದು ಮೂರು ವರುಷಗಳು ಉರುಳಿದುವು. ಈ ಮೂರು ವರುಷಗಳಲ್ಲಿ ಏನೇನೋ ನಡೆದುಹೋಯಿತು.

ಈ ಸಂಬಂಧದಿಂದ ತಾಯಿ ಹೋದಳು. ಪಾಪ, ಆಕೆಗೆ ಅದೇ ದೊಡ್ಡ ಕೊರಗಾಗಿತ್ತು. ಹುಡುಗಿಯೇನೋ ಚೆನ್ನಾಗಿದ್ದಳು. ಆದರೆ ಊರಿಗೆ ಬಂದಿದ್ದ ಭವಿಷ್ಯ ಚೂಡಾಮಣಿ ಅನಂತ ಕೃಷ್ಣಶಾಸ್ತ್ರಿಗಳು 'ಸಂತಾನವಿಲ್ಲ' ಎಂದುಬಿಟ್ಟರು. ಅವರು ಅಷ್ಟು ನಿರ್ಧಾರವಾಗಿ ಹೇಳುತ್ತಿರಲಿಲ್ಲ. ಸೀತಮ್ಮನೇ ಬಲವಂತವಾಗಿ 'ನನಗೆ ಎಷ್ಟು ಮೊಮ್ಮಕ್ಕಳು ಹೇಳಿ, ಇರೋನು ಒಬ್ಬನೇ ಮಗ, ಆದ್ದರಿಂದ ತಿಳೀಬೇಕು ಅನ್ನೋ ಹಂಬಲ' ಎಂದು ಬೇಡಿಕೊಂಡಳು. ಶಾಸ್ತ್ರಿಗಳು ಹೇಳಬೇಕಾಯಿತು. ಅವರ ಲೆಕ್ಕಾಚಾರದಂತೆ ಗೌರಿ ತಾಯಿ ಆಗುವಂತಿರಲಿಲ್ಲ.

ಸೀತಮ್ಮ ಶಾಸ್ತ್ರಿಗಳನ್ನು ಆ ವಿಷಯವಾಗಿ ಕೇಳುತ್ತಿರಲಿಲ್ಲ. ಮಗನ ಮದುವೆ ಆಗಿ ಇನ್ನೂ ಕೇವಲ ಆರು ತಿಂಗಳು ಕಳೆದಿತ್ತು. ಆದರೂ ಆ ವಿಷಯವಾಗಿ ಅವರನ್ನು ಕೇಳಬೇಕು, ಎನ್ನಿಸಿತ್ತು. ಏಕೆಂದರೆ ತಿಮ್ಮನಹಳ್ಳಿಯ ತಿಪ್ಪಾಭಟ್ಟರು ಮದುವೆಗೆ ಮುಂಚೆ ಗೌರಿಯ ಜಾತಕ ನೋಡಿದಾಗ 'ಸಂತಾನ ಸಂಪತ್ತು ಅಷ್ಟಕ್ಕಷ್ಟೆ' ಎಂದು ಹೇಳಿದ್ದರು. ಇದನ್ನು ಕೇಳಿದ ಸೀತಮ್ಮ ಮನೆಗೆ ಬಂದು 'ಈ ಸಂಬಂಧ ಬೇಡ ಅಂದರೆ' ಎಂದಳು. ಆದರೆ ರಂಗಣ್ಣನವರು ಈ ಮಾತು ಕೇಳುವಹಾಗಿರಲಿಲ್ಲ. ಅವರ ಸ್ನೇಹಿತ ನರಸಿಂಹಯ್ಯನವರು ಶಿರಸ್ತೇದಾರ್ ಶಾಮಣ್ಣನವರ ವಿಷಯವನ್ನೆಲ್ಲ ಹೇಳಿದ್ದರು. "ಬಹಳ ಒಳ್ಳೆ ಮನುಷ್ಯರು. ಹಸುವಿನಂಥ ಸ್ವಭಾವ. ಅವರ ಮನೆ ಸಂಬಂಧ ಮಾಡಬೇಕು. ಆಸ್ತಿ ಪಾಸ್ತಿ ಚೆನ್ನಾಗಿರೋದ್ರಿಂದ ಎಲ್ಲ ಚೆನ್ನಾಗಿ ಮಾಡ್ತಾರೆ. ಅವರಿಗೆ ಮುಖ್ಯ, ಓದೋ ಹುಡುಗ ಸಿಕ್ಕಬೇಕು. ತಮಗಂತೂ ಗಂಡು ಮಕ್ಕಳಿಲ್ಲ,

ತಮ್ಮ ಅಳಿಯನನ್ನೇ ಮಗ ಅಂತ ತಿಳಿದುಕೊಂಡು ತುಂಬ ಓದಿಸೋಣ, ಎಂತ ಆಸೆ ಅವರಿಗೆ" ಎಂದು ಏನೇನೋ ಹೇಳಿ ರಂಗಣ್ಣನವರ ಮನ ಸೆಳೆದಿದ್ದರು.

ಪೇಟೆ ಬೀದಿಯ ಮಂಡ್ಯದ ವೆಂಕಟಪ್ಪಶೆಟ್ಟಿಯ ಅಂಗಡಿಯ ಮುಂದೆ ಕುಳಿತು ಈ ಮಾತೆಲ್ಲ ನಡೆಯಿತು. ರಂಗಣ್ಣನವರು ಒಪ್ಪಿದ್ದು ತಿಳಿದ ಕೂಡಲೆ ನರಸಿಂಹಯ್ಯನವರು ಒಂದು ಹೆಜ್ಜೆ ಮುಂದೆ ಹಾಕಿ ರಂಗಣ್ಣನವರ ಮನೆಗೇ ಬಂದುಬಿಟ್ಟರು. ಎಂದೂ ಅಷ್ಟು ಸಲಿಗೆಯಿಂದ ಮಾತಾಡದಿದ್ದವರು ಅಂದು 'ಏನು ಸೀತಮ್ಮನೋರೆ, ಹೋಳಿಗೆ ಎಬ್ಬಿಸಿ ಬಿಟ್ಟಿರಲ್ಲ!' ಎಂದು ನಕ್ಕರು. ನರಸಿಂಹಯ್ಯನವರಿಂದ, ತನ್ನ ಗಂಡನಿಂದ ಎಲ್ಲ ಸಮಾಚಾರ ತಿಳಿದ ಮೇಲೆ ಸೀತಮ್ಮನಿಗೆ ತುಂಬ ಆನಂದ ವಾಯಿತು.

ನರಸಿಂಹಯ್ಯನವರು ತಮ್ಮ ಕೋಟಿನ ಒಳಜೇಬಿನಿಂದ ಗೌರಿಯ ಜಾತಕ ತೆಗೆದು, "ನೋಡಿ, ಹುಡುಗಿಯ ಜಾತಕ ಕಳಿಸಿದಾರೆ. ಅವರು ತೋರಿಸಿದಾರಂತೆ. ಜಾತಕ ಬಹಳ ಚೆನ್ನಾಗಿ ಕೂಡುತ್ತಂತೆ. ಅದೇನೋ ಮೂವತ್ತೋ ಮೂವತ್ತೆರಡು ಗುಣಾನೋ ಕೂಡಿ ಬರುತ್ತೆ. ಅಷ್ಟೊಂದು ಗುಣ ಕೂಡಿ ಬರೋದು ಬಹಳ ಅಪರೂಪ ಅಂತಾರಂತೆ. ಅದೂ ಅಲ್ದೆ, ಈ ಸಂಬಂಧದಲ್ಲಿ ಹುಡುಗ ಹುಡುಗಿ ಕೋತಿ ಕೋತಿಮರಿ ಇದ್ದ ಹಾಗೆ ಇರ್ತಾರೆ, ಅಂತ ಶಾಸ್ತ್ರದಲ್ಲಿ ಹೇಳಿದೆಯಂತೆ. ಹಾಗಂದರೆ ಕೋತಿ ಕೋತಿ ಮರೀನ ಹ್ಯಾಗೆ ಅಪ್ಪಿಕೊಂಡೇ ಓಡಾಡ್ತಾ ಇರುತ್ತೋ ಹಾಗೆ ಒಬ್ಬರ ನ್ನೊಬ್ಬರು ಎಡಬಿಡದೆ ಹೊಂದಿಕೊಂಡು ಇರ್ತಾರೇಂತ" ಎಂದು ಏನೇನೋ ಹೇಳಿದರು.

ಇದೆಲ್ಲ ಕೇಳಿ ಸೀತಮ್ಮನಿಗೆ ಬಹಳ ಸಂತೋಷವಾಯಿತು.

ನರಸಿಂಹಯ್ಯನವರು ಗೌರಿಯ ಜಾತಕವನ್ನು ರಂಗಣ್ಣನವರ ಕೈಯಲ್ಲಿಡುತ್ತ "ನೀವೂ ಬೇಕಾದರೆ ಯಾರಿಗಾದರೂ ತೋರಿಸಿ ನೋಡಿ" ಅಂದರು.

ಅವರು ಹೇಳಿದಂತೆ ಸೀತಮ್ಮ ಜಾತಕವನ್ನು ತೋರಿಸಿದಳು.

ತಿಮ್ಮನಹಳ್ಳಿಯ ತಿಪ್ಪಾಭಟ್ಟರು, "ಪರವಾಯಿಲ್ಲ ಮಾಡಬಹುದು" ಎಂದರೇ ಹೊರತು, ಎಲ್ಲ ಗುಣಗಳೂ ಕೂಡುತ್ತೆ. ಗಂಡ ಹೆಂಡತಿ ಕೋತಿ ಕೋತಿ ಮರಿ ಇದ್ದಹಾಗೆ ಇರ್ತಾರೆ, ಅಂತ ಏನೇನೋ ಹೇಳಲಿಲ್ಲ. ಸೀತಮ್ಮ ಕೇಳದಿದ್ದರೂ ಅವರು ಒಂದು ವಿಷಯ ತಿಳಿಸೇಬಿಟ್ಟರು: "ಸಂತಾನ ಸಂಪತ್ತು ಅಷ್ಟಕ್ಕಷ್ಟೇ" ಎಂದು ಮುಖಸೊಟ್ಟ ಮಾಡಿ ಜಾತಕ ವನ್ನು ಸೀತಮ್ಮನ ಕೈಯಲ್ಲಿಟ್ಟರು. ಸೀತಮ್ಮನಿಗೆ ಸಮಾಧಾನವಾಗಲಿಲ್ಲ.

"ಮಾಡ್ಕೋಬಹುದೊ, ಮಾಡ್ಕೋಬಹುದೊ, ಏನಭ್ಯಂತರ ವಿಲ್ಲವೊ ?" ಎಂದು ಮೂರುನಾಲ್ಕು ಸಲ ಕೇಳಿದಳು.

ಭಟ್ಟರು "ಆಗಬಹುದು. ಏನಭ್ಯಂತರವಿಲ್ಲ" ಎಂದರು.

ಆದರೂ ಸೀತಮ್ಮನಿಗೆ ಸಮಾಧಾನವಾಗಲಿಲ್ಲ. ಮನೆಗೆ ಬಂದು ಗಂಡನ ಮುಂದೆ ಎಲ್ಲ ಹೇಳಿದಳು. ಗಂಡ ಕೇಳಲಿಲ್ಲ.

"ಈ ಭವಿಷ್ಯಾನ್ನೆಲ್ಲ ನಂಬಿ ಕೂತರೆ ಆಯ್ತು, ಸುಮ್ನಿರು ನಿಂಗೊತ್ತಾ ಗೊಲ್ಲ. ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡರು ಅಂದಹಾಗೆ. ಇಂಥ ಒಳ್ಳೆ ಬೀಗರು ಸಿಕ್ಕಿರೋವಾಗ ಬಿಡಬಾರದು. ನಾಳೆ ಬಿ.ಎ ಓದಿಸ ಬೇಕು; ಆಮೇಲೆ ಲಾಯರ್ ಪರೀಕ್ಷೆಗೆ ಹೋಗಬಹುದು. ಎಲ್ಲ ನಮ್ಮ ಕೈಲಿ ಸಾಧ್ಯವೆ. ಅಂಥ ಬೀಗರು ಸಿಕ್ಕಿದರೆ ಮುಂದೆ ಅನುಕೂಲ ಇಲ್ಲವೆ. ಏನೇನೋ ಹೇಳ್ಕೊಂಡು ಎಲ್ಲ ಹಾಳುಮಾಡಬೇಡ, ಸುಮ್ಮನೆ ಕೂತ್ಕೊ" ಎಂದು ಗದರಿಸಿಕೊಂಡರು.

ಸರಿ, ಮದುವೆ ನಡೆದು ಹೋಯಿತು. ಸೀತಮ್ಮ ಸುಮ್ಮನೆ ಕೂತುಕೊಂಡಳು. ಆದರೆ ಅವಳ ಮನಸ್ಸು ಸುಮ್ಮನಿರಲಿಲ್ಲ. ಅದೇ ಕೊರಗಿನಲ್ಲಿ ಸೊರಗತೊಡಗಿತು. ನಿಷೇಕಪ್ರಸ್ತವಾಗಿ ಸೊಸೆ ಇನ್ನೂ ಮನೆಗೇ ಬಂದಿರಲಿಲ್ಲ. ಮೊಮ್ಮಕ್ಕಳಿಲ್ಲವೆಂಬ ಕೊರಗಿನಲ್ಲಿ ಸೀತಮ್ಮ ಕಣ್ಣುಮುಚ್ಚಿದಳು! ಆದರೆ ಎಷ್ಟೋ ಜನಕ್ಕೆ ಈ ಕಾರಣ ಗೊತ್ತಾಗಲಿಲ್ಲ.

ಸೀತಮ್ಮನಿಗೆ ವಯಸ್ಸೇನೂ ಕಡಮೆ ಆಗಿರಲಿಲ್ಲ. ಅರುವತ್ತರ ಹತ್ತಿರ ಬಂದಿತ್ತು. ಆಕೆಗೆ ನಲವತ್ತು ತುಂಬಿದಾಗ ರಾಮುಸ್ವಾಮಿ ಹುಟ್ಟಿದ್ದು; ರಂಗಣ್ಣನವರಿಗೆ ಆಗ ನಲವತ್ತಾರು ವರುಷ.

ಡಾಕ್ಟರ್ ಸಿದ್ದಲಿಂಗಪ್ಪನವರು ವಿಷಮಶೀತಜ್ವರ ಎಂದರು. ಸೀತಮ್ಮನಿಗೆ ಮೇಲೆ ಆ ಜ್ವರ ಬಂದುದೂ ನಿಜ. ಆದರೆ ಒಳಗೆ ಇನ್ನೊಂದು ಜ್ವರ ಇದ್ದುದೂ ನಿಜ.

ರಾಮಸ್ವಾಮಿ ಈ ವಿಷಯವನ್ನು ತನ್ನ ಆಪ್ತ ಗೆಳೆಯ ನಂಜುಂಡ ಸ್ವಾಮಿಗೆ ತಿಳಿಸಿದಾಗ ಅವನು "ಛೆ ಇದಕ್ಕೆಲ್ಲ ಇಷ್ಟೊಂದು ಯೋಚನೆ ಮಾಡಿದರೆ ಹೇಗೆ! ಇನ್ನೂ ಸೊಸೇನೇ ಮನೆಗೆ ಬಂದಿಲ್ಲ, ಮೊಮ್ಮಕ್ಕಳಾಗ ಲಿಲ್ಲ ಅಂತ ಗೋಳಾಡಿದರೆ ಏನು ಹೇಳೋದು! ವಿಚಿತ್ರ! ನಾನೆಲ್ಲೂ ಕಂಡಿರಲಿಲ್ಲಪ್ಪ ಇಂಥವರನ್ನ" ಎಂದುಬಿಟ್ಟ.

ರಾಮಸ್ವಾಮಿಗೂ ಒಮ್ಮೊಮ್ಮೆ ಅದು ವಿಚಿತ್ರವಾಗಿ ಕಾಣುತ್ತಿತ್ತು. ಆದರೆ ಒಬ್ಬನೇ ಮಗನನ್ನು ಹೆತ್ತ ತನ್ನ ತಂದೆ ತಾಯಿಗಳ ಇಷ್ಟ ನೆರ ವೇರುವುದಿಲ್ಲವೆಂದು ತೋರಿದಾಗ ತುಂಬ ವ್ಯಥೆಯಾಗುತ್ತಿತ್ತು. ತಾಯಿ ಜ್ವರದಿಂದ ನರಳುತ್ತಿದ್ದಾಗ ತನ್ನನ್ನು ಹತ್ತಿರ ಕರೆದು ಹೇಳಿದ ಮಾತನ್ನು ನೆನಸಿಕೊಂಡಾಗಲಂತೂ ರಾಮಸ್ವಾಮಿಗೆ ನಂಜುಂಡಸ್ವಾಮಿ ಹೇಳಿದಂಥ ವಿವೇಕದ ಮಾತು ಕಿವಿಗೆ ಬೀಳುತ್ತಿರಲಿಲ್ಲ.

ಅಂದು ಆಗತಾನೇ ಡಾಕ್ಟರು ಒಂದು ಇಂಜಕ್ಷನ್ ಕೊಟ್ಟು "ಮಾತಾಡಬೇಡಿ, ಸುಮ್ಮನೆ ಮಲಗಿಕೊಳ್ಳಿ" ಎಂದು ಹೇಳಿ ಹೋಗಿದ್ದರು. ಆದರೆ ಸೀತಮ್ಮ ಮಾತು ಹೆಚ್ಚುಮಾಡಿದಳು.

"ರಾಮಣ್ಣ ಬಾ ಇಲ್ಲಿ" ಎಂದು ಮಗನನ್ನು ಕರೆದಳು.

ರಾಮಸ್ವಾಮಿ ತಾಯಿಯ ಹತ್ತಿರಕ್ಕೆ ಹೋಗಿ ಹಾಸಿಗೆಯ ಮೇಲೆ ಕುಳಿತ.

"ರಾಮಣ್ಣ, ನನ್ನನ್ನು ಹೀಗೇ ಕಳಿಸಿಬಿಡ್ತೀಯಾ?" ಎಂದು ಕೇಳಿ ದಳು. 'ಕಳಿಸಿಬಿಡ್ತೀಯ' ಎಂಬ ಮಾತು ನಡುಗಿತು. ಕಣ್ಣಿನ ತುಂಬ ಕಂಬನಿ ತುಂಬಿತ್ತು. ತಳದಲ್ಲೆಲ್ಲೋ ಇದ್ದ ಕಪ್ಪುಗುಡ್ಡೆ ಮಗನನ್ನು ದಿಟ್ಟಿಸಿ ನೋಡಿತು.

ತಾಯಿಯ ಮಾತು ಕೇಳಿ ಮಗನಿಗೆ ಏನೇನೋ ನೆನಪಿಗೆ ಬಂತು.

"ಯಾಕಮ್ಮಾ ಹೀಗೆಲ್ಲಾ ಮಾತಾಡ್ತೀಯ?" ಎಂದ.

"ಇನ್ನೇನು ಮಾಡಲಪ್ಪ. ನನಗೆ ಆ ಭಾಗ್ಯಕೊಡಲಿಲ್ಲ, ದೇವರು." ಎರಡು ಕಣ್ಣಿನ ಕೊನೆಗಳಲ್ಲಿಯೂ ಕಂಬನಿ ಇಳಿದುವು. ಬಲಗಡೆ ಕುಳಿತಿದ್ದ ಮಗನ ಕಡೆ ತಿರುಗಿದಾಗ ಇನ್ನೊಂದು ಕಂಬನಿ ಬಲಗಣ್ಣಿನಿಂದ ಜಾರಿ ಬಲಗಿವಿಯೊಳಕ್ಕೆ ಬಿತ್ತು. ತಾಯಿ ತನ್ನ ದುಃಖವನ್ನು ತಡೆಯಲಾರದೆ ಎರಡು ಕಣ್ಣುಗಳನ್ನೂ ಮುಚ್ಚಿ ಹಿಂಡಿದಳು. ಆಗ ರಾಮುಸ್ವಾಮಿಯ ಹೃದಯ ಕಿವುಚಿದಂತಾಯಿತು. ಅವನ ಕಣ್ಣುಗಳಿಂದಲೂ ಕಂಬನಿ ಸುರಿಯಿತು.

"ಅಳಬೇಡಮ್ಮ ನೀನು" ಎಂದು ಮಗ ಸಮಾಧಾನಮಾಡಿದ. ಪಕ್ಕದಲ್ಲಿ ಬಿದ್ದಿದ್ದ ಟವಲಿನಿಂದ ಎರಡು ಕಣ್ಣುಗಳನ್ನೂ ಒರಸಿದ.

"ಅಮ್ಮ, ನೀನು ಅತ್ತರೆ ನನಗೂ ಅಳು ಬರುತ್ತೆ. ಅಳಬೇಡ ಸುಮ್ಮನೆ. ಬದುಕಿದ್ದರೆ ಎಲ್ಲ ನೋಡ್ತೀಯೆ. ಸುಮ್ಮನೆ ಯಾಕೆ ನಿರಾಸೆ ಪಡ್ತೀಯೆ" ಎಂದ.

"ಅಯ್ಯೋ, ಬ್ಯಾಡಪ್ಪ. ನಾಸಿರೋದು ಬ್ಯಾಡ. ಇನ್ನು ಆ ಸುಖ ಬೇರೆ ನೋಡು ಅಂತೀಯ? ಒಬ್ಬನೇ ಮಗ. ಏನೋ ಮುದಿವಯಸ್ಸಿನಲ್ಲಿ ಮೊಮ್ಮಗು ಎತ್ತಿಕೊಂಡು ಆಡಿಸೋಣ ಅನ್ನಿಸಿತ್ತು. ಆದರೆ ಈ ಸಂಬಂಧ—ನಾನು ಬ್ಯಾಡಾಂತ ಬಡಕೊಂಡೆ ಕೇಳಲಿಲ್ಲ."

ರಾಮುಸ್ವಾಮಿ ತಾಯಿಯನ್ನು ತಡೆದು "ಅಮ್ಮ, ನೀನು ಹೀಗೆಲ್ಲ ಮಾತಾಡಿದರೆ ನಂಗೆ ಸಿಟ್ಟು ಬರುತ್ತೆ. ಯಾರೋ ಜೋಯಿಸರು ಹೇಳಿದ ಮಾತು ಕಟ್ಟಿಕೊಂಡು ನೀನು ಹೀಗೆಲ್ಲ ಅನ್ನಬಾರದು. ಯಾರಾದರೂ ಇದನ್ನು ಕೇಳಿದರೆ ನಕ್ಕಾರು; ಸಾಕು ಸುಮ್ನಿರು; ಇನ್ನೂ ಸೊಸೆ ಮನೇಗೇ ಬಂದಿಲ್ಲ" ಎಂದ.

ರಾಮುಸ್ವಾಮಿ ತಾಯಿಯೊಡನೆ ಇಷ್ಟು ಗಡುಸಾಗಿ ಎಂದೂ ಮಾತಾಡಿರಲಿಲ್ಲ. ತಾಯಿ ಕಾಯಿಲೆ ಬಿದ್ದಮೇಲೆ, ಆಕೆಯ ಶುಶ್ರೂಷೆಯಲ್ಲಿ ಹಣ್ಣಾದ ಇವನು ಬದಲಾಯಿಸಿಬಿಟ್ಟಿದ್ದ. ಆದರೂ ತಾಯಿ ದೇವರು ಎಂಬ ಅಭಿಪ್ರಾಯವನ್ನಿಟ್ಟುಕೊಂಡಿದ್ದ ಮಗ ಇಷ್ಟು ಗಡುಸಾಗಿ ಮಾತಾಡುತ್ತಿರಲಿಲ್ಲ. ತನ್ನ ಸೊಸೆ 'ಬಂಜೆ ಬಂಜೆ' ಎಂದು ಹೇಳಿ ಹೇಳಿ ಕೊರಗುತ್ತಿದ್ದ

ಆಕೆಯನ್ನು ಕಂಡು ಆಗಾಗ ಅವನ ತಾಳ್ಮೆ ಮಾಯವಾಗುತ್ತಿತ್ತು; ವಿಧೇಯತೆ ಮೇರೆ ಮೀರುತ್ತಿತ್ತು. ಒಂದೆರಡು ಬಾರಿ ಎದುರುವಾದಿಸಿ "ಥೂ ಸಿಂಗೊತ್ತಿಲ್ಲ, ಸುಮ್ಮನಿರು" ಎಂದು ಗದರಿಸಿಕೊಂಡಿದ್ದ. ಹೆಂಡತಿ ಇನ್ನೂ ಮನೆಗೆ ಬಾರದಿದ್ದರೂ, ಹೆಂಡತಿಯನ್ನು ಇನ್ನೂ ಕಣ್ಣಾರ ಸರಿಯಾಗಿ ನೋಡದಿದ್ದರೂ ಅವನು ತನ್ನ ತಾಯಿಯಿಂದ ಈ ಮಾತು ಕೇಳಬೇಕಾಯಿತು: ''ಸರಿಯಪ್ಪ, ಇನ್ನು ನಿನಗೆ ನಾವ್ಯಾಕೆ ಹೇಳು. ನಮ್ಮ ಕೆಲಸ ಮುಗೀತು. ರೆಕ್ಕೆ ಬಲಿತಮೇಲೆ ತಾಯಿಯ ಚಿಂತೆ ಯಾಕೆ" ಎಂದು ಆಕೆ ಗಳಗಳನೆ ಅತ್ತುಬಿಟ್ಟಿದ್ದಳು. ಹಾಗೆ ಎದುರುವಾದಿಸಿ ಅಭ್ಯಾಸವಿಲ್ಲದ ಮಗ ರಾಮಸ್ವಾಮಿಗೆ ಆ ಮಾತು ಕೇಳಿ ತುಂಬ ದುಃಖವಾಯಿತು; ಅಳುವೇ ಬಂದುಬಿಟ್ಟಿತು. ಇದ್ದಕ್ಕಿದ್ದಂತೆಯೇ "ಅಮ್ಮಾ ನಂತಪ್ಪಾಯ್ತು, ಕ್ಷಮಿಸು. ಇನ್ಮೇಲೆ ನಾನು ಹಾಗನ್ನಲ್ಲ" ಎಂದು ಕೂಗಿ ಹೇಳಿದ.

"ಅಮ್ಮಾ ನೀನು ಹೀಗೆಲ್ಲ ಕೊರಗಬೇಡಮ್ಮ; ಡಾಕ್ಟರು ಹೇಳಿದಾರೆ, ಮಾತಾಡ್ಬೇಡಾಂತ. ಸುಮ್ಮನೆ ಮಲಕ್ಕೋ. ಇದೆಲ್ಲ ಯೋಚನೆ ಮಾಡ್ಬೇಡ. ನೀನು ಆರೋಗ್ಯವಾಗಿದ್ದರೆ ಎಲ್ಲ ಒಳ್ಳೇದಾಗುತ್ತೆ. ದೇವರು ಒಳ್ಳೇದು ಮಾಡ್ತಾನೆ"ಎಂದು ಸಮಾಧಾನದ ಮಾತಾಡಿದ.

ತಾಯಿ ಗೋಡೆಯ ಕಡೆಗೆ ತಿರುಗಿ ಹೇಳಿದಳು: "ಏನು ಒಳ್ಳೇದು ಮಾಡ್ತಾನೋಪ್ಪ. ನನಗೇನೊ ನಂಬಿಕೆ ಇಲ್ಲ—ಎಲ್ಲಾರೂ ಹಾಗೇ ಹೇಳ್ತಾರೆ...."

"ಈಗಲೇ ನೀನು ಹೀಗೆ ಹೇಳಿದರೆ ಹ್ಯಾಗಮ್ಮ. ಇನ್ನೂ ಮನೇಗೇ ಬಂದಿಲ್ಲವಲ್ಲ?"

"ಅಯ್ಯೋ ಮನೇಗೆ ಬಂದರೇನು, ಬಿಟ್ಟರೇನು. ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ" ಎಂದು ಹೇಳಿ ತಾಯಿ ನಿಟ್ಟುಸಿರುಬಿಟ್ಟಳು.

ರಾಮಸ್ವಾಮಿಗೆ ಈ ಮಾತು ಕೇಳಿ ಕೋಪ ದುಃಖ ಎರಡೂ ಒಟ್ಟಿಗೆ ಬಂತು. ಆದರೆ ಮತ್ತೊಮ್ಮೆ ಕೆರಳಿ ಮಾತಾಡಿ, ಕಾಯಿಲೆಯ ತಾಯಿಯನ್ನು ನೋಯಿಸಲು ಮನಸ್ಸಾಗಲಿಲ್ಲ. ಸುಮ್ಮನೆ ಎದ್ದು ಹೊರಗೆ ಹೊರಟುಹೋದ.

ಆದಾದ ಒಂದು ವಾರದೊಳಗಾಗಿ ತಾಯಿಯನ್ನು ಶ್ಮಶಾನಕ್ಕೆ

ಸಾಗಿಸಿದ್ದಾಯಿತು. ತವರಿನಲ್ಲಿ ತಂದೆ ಒಬ್ಬರೇ ಉಳಿದರು. ತಾಯಿ ಹೋದ ಮೇಲೆ ತಂದೆಯ ಮನಸ್ಸು ಬದಲಾಯಿಸಿತು. ಯಾವ ಕೆಲಸ ದಲ್ಲಿಯೂ ಅವರಿಗೆ ಉತ್ಸಾಹವಿರಲಿಲ್ಲ. ಗಂಡ ಹೆಂಡತಿ ಅಷ್ಟು ವರುಷ ಸಂಸಾರ ನಡಸಿದ ಆ ಮನೆಯಲ್ಲಿ, ಒಬ್ಬಂಟಿಗರಾಗಿ ಅನ್ನ ಬೇಯಿಸಿ ಕೊಂಡು ದಿನ ತಳ್ಳುವುದು ಅವರಿಗೆ ಬಹಳ ಕಷ್ಟವಾಯಿತು. ಮದುವೆ ಮಾಡಿದರೆ, ಮಗನ ಮಾವ ಅಳಿಯನ ಓದಿಗೆ ಸಹಾಯಮಾಡುತ್ತಾರೆ ಎಂದು ನಂಬಿಕೊಂಡಿದ್ದ ಅವರಿಗೆ ನಿರಾಸೆ ಆಯಿತು. ಲಗ್ನವಾದ ಆರುತಿಂಗಳ ಲ್ಲಿಯೇ ಇಬ್ಬರಿಗೂ ಮನಸ್ತಾಪವಾಯಿತು. ಮಗನ ಬಿ. ಎ. ಓದಿಗೆ ತಂದೆಯೇ ತನ್ನ ಪೆನ್ಷನ್ ಕಳಿಸಬೇಕಾಯಿತು. ಎಂದೂ ಯಾರಿಗೂ ಬಾಡಿಗೆಗೆ ಕೊಡದಿದ್ದ ಮನೆಯನ್ನು ಎರಡು ಭಾಗ ಮಾಡಿಸಿ ಒಂದು ಭಾಗದಲ್ಲಿ ತಾನಿದ್ದುಕೊಂಡು ಇನ್ನೊಂದು ಭಾಗವನ್ನು ಬಾಡಿಗೆಗೆ ಕೊಡ ಬೇಕಾಯಿತು. ಬಂದ ಬಾಡಿಗೆ ಹತ್ತು ರೂಪಾಯಿಗಳನ್ನು ತನ್ನ ಪೆನ್ಷನ್ ಮೂವತ್ತು ರೂಪಾಯಿಯೊಡನೆ ಪ್ರತಿ ತಿಂಗಳ ಆರನೆಯ ತಾರೀಕು ಮಗನಿಗೆ ಕಳಿಸಬೇಕಾಯಿತು. ಭತ್ತದ ದುಡ್ಡನ್ನು ಬ್ಯಾಂಕಿನಲ್ಲಿಟ್ಟು ಅದರಿಂದ ತನ್ನ ಎರಡು ಹೊತ್ತು ಅನ್ನ ನೀರು ಕಳೆಯಬೇಕಾಯಿತು. ಇಂಥ ಕಷ್ಟದ ಓದು ಮಗನಿಗೆ ಬೇಕಾಗಿರಲಿಲ್ಲ. 'ಇಂಟರ್‌ಮೀಡಿಯೆಟೇ ಸಾಕು. ಮುಂದೆ ಓದುವುದು ಬೇಡ. ನಾನು ಬಂದುಬಿಡುತ್ತೇನೆ' ಎಂದು ರಾಮಸ್ವಾಮಿ, ಮೈಸೂರಿಗೆ ಹೋದ ಮೂರನೆಯ ದಿನವೇ ಕಾಗದ ಹಾಕಿದ. ರಂಗಣ್ಣನವರು 'ಉಹ್ಞು, ಅದಾಗದು ನೀನು ಓದಲೇಬೇಕು' ಎಂದು ಉತ್ತರ ಬರೆದರು. ರಾಮಸ್ವಾಮಿ, ಒಂದು ತಿಂಗಳು ಬೇರೆ ರೂಮಿನಲ್ಲಿ ಬಾಡಿಗೆ ಇದ್ದು ಹೋಟೆಲ ಊಟಮಾಡಿ ಕಳೆದ. ಆದರೆ ಬಹಳ ಬೇಗ ಅವನ ಕಷ್ಟ ಪರಿಹಾರವಾಯಿತು.

ಲಕ್ಷ್ಮೀಪುರಂನಲ್ಲಿರುವ ರಂಗನಹಳ್ಳಿಯ ಜೋಡೀದಾರ್ ಮಾಧವರಾಯರು ಯಾರಾದರೂ ಒಬ್ಬ ಓದುವ ಹುಡುಗನಿಗೆ ಬಿಟ್ಟಿ ರೂಮು ಕೊಡುವ ಪದ್ಧತಿ ಇಟ್ಟುಕೊಂಡಿದ್ದರು. ರಂಗಣ್ಣನವರ ಸ್ನೇಹಿತ ಅಚ್ಚಂಭಟ್ಟರು ಮೈಸೂರಿಗೆ ಬಂದಿದ್ದಾಗ ರಾಮಸ್ವಾಮಿಯನ್ನು ಮಾಧವ

ರಾಯರಿಗೆ ಪರಿಚಯಮಾಡಿಸಿದರು. ಅವರ ಬಂಗಲೆಯ ರೂಮು ಖಾಲಿ ಇರುವ ಸಮಯದಲ್ಲಿಯೇ ಭಟ್ಟರು ರಾಮಸ್ವಾಮಿಯನ್ನು ಮಾಧವ ರಾಯರ ಮನೆಗೆ ಕರೆದುಕೊಂಡು ಹೋದರು. ಮಾಧವರಾಯರ ಬಂಗಲೆಯ ರೂಮು ಖಾಲಿ ಇರುವುದೇ ಅಪರೂಪ. ಎರಡು ವರುಷ, ಅಥವಾ ಮೂರು ವರುಷ, ಅಥವಾ ನಾಲ್ಕು ವರುಷಕ್ಕೊಮ್ಮೆ ಅದು ಖಾಲಿ ಆಗುತ್ತದೆ. ಆದರೆ ತಕ್ಷಣವೆ ಭರ್ತಿಯಾಗಿಬಿಡುತ್ತದೆ. ಅಲ್ಲಿಗೆ ಬಂದ ಹುಡುಗರು ಒಂದು ವರುಷವೂ ಫೇಲಾಗದೆ ಎಲ್ಲ ತರಗತಿಗಳನ್ನೂ ಮುಗಿಸಿ ಡಿಗ್ರಿ ಪಡೆದು ಹೋಗುತ್ತಿದ್ದರು. ಅದುವರೆಗೆ ಆಗಲೆ ಎಂಟು ಹುಡುಗರು ಆ ಕೋಣೆಯಲ್ಲಿ ಓದಿ ಪದವೀಧರರಾಗಿದ್ದರು. ಗೌನ್ ಮತ್ತು ಹುಡ್ ಹಾಕಿಕೊಂಡು ಕಾನ್ವೊಕೇಷನ್‌ನಲ್ಲಿ ತೆಗಸಿಕೊಂಡ ಆ ಎಂಟು ಹುಡುಗರ ಫೋಟೊಗಳನ್ನು ಆ ರೂಮಿನಲ್ಲಿ ಗೋಡೆಯ ಮೇಲೆ ಸಾಲಾಗಿ ಹಾಕಿತ್ತು. ಹೊಸದಾಗಿ ಆ ಕೋಣೆಗೆ ಬರುವ ವಿದ್ಯಾರ್ಥಿಗೆ ಉತ್ಸಾಹವನ್ನು ತುಂಬುವ ಸಲುವಾಗಿ ರಾಯರು ಈ ಏರ್ಪಾಟು ಮಾಡಿದ್ದರು. ಮೊದಮೊದಲು ಅವರು ಪ್ರತಿಯೊಬ್ಬ ವಿದ್ಯಾರ್ಥಿಯೊಡನೆಯೂ "ಪಾಸ್ ಮಾಡಿದಿ. ಬಹಳ ಸಂತೋಷ ಆಯಿತಪ್ಪ. ನಿನ್ನ ನೆನಪಿಗೋಸ್ಕರ ಒಂದು ಕಾನ್‌ವೊಕೇಷನ್ ಫೋಟೊ ಕೊಟ್ಟು ಹೋಗು; ನಿನ್ನ ಕೋಣೇಲಿ ಹಾಕಿರ್‍ತೀನಿ; ಈ ದಿನ ರಾತ್ರಿ ನಮ್ಮನೇಗೆ ಊಟಕ್ಕೆ ಬಂದುಬಿಡು" ಎಂದು ಹೇಳುತ್ತಿದ್ದರು. ನಾಲ್ಕು ಮಂದಿಯ ಫೋಟೊಗಳನ್ನು ಗೋಡೆಯ ಮೇಲೆ ಹಾಕಿದ ಮೇಲೆ ರಾಯರು ಹಾಗೆ ಕೇಳುವ ಅಗತ್ಯ ಬರಲಿಲ್ಲ, ಆ ಹುಡುಗರೇ ತಮ್ಮ ಫೋಟೊ ಸಹ ಆ ಗೋಡೆಯ ಮೇಲಿರಬೇಕೆಂಬ ಆಸೆಯಿಂದ ತಮ್ಮ ಹೆಸರು, ಡಿಗ್ರಿ ಮತ್ತು ತಾರೀಕು ಎಲ್ಲ ಬರೆದ ಫೋಟೊಗಳನ್ನು ತಂದು ರಾಯರ ಮನೆಗೆ ಕೊಟ್ಟು, ರಾತ್ರಿ ಅವರ ಮನೆಯಲ್ಲಿಯೇ ಊಟ ಮಾಡಿ ಹೋಗುತ್ತಿದ್ದರು. ರಾಯರು ಅವುಗಳನ್ನು ಕ್ರಮವಾಗಿ ಗೋಡೆಯ ಮೇಲೆ ಹಾಕಿಸಿದ್ದರು. ಈ ಫೋಟೊಗಳು ಕೋಣೆಗೆ ಹೊಸದಾಗಿ ಬಂದಿರುವ ವಿದ್ಯಾರ್ಥಿಗೆ ತುಂಬ ಉತ್ಸಾಹ ನೀಡುತ್ತಿದ್ದುದು ನಿಜ. ಕೋಣೆಯನ್ನು ಪ್ರವೇಶಿಸಿದ ರಾಮಸ್ವಾಮಿಗೂ ಆ ಫೋಟೊಗಳನ್ನು ನೋಡಿ

ಹಾಗನ್ನಿಸಿತು. ನನ್ನ ಫೋಟೋ ಸಹ ಈ ಸಾಲಿನಲ್ಲಿ ಬರಬೇಕು. ನಾನು ಇವರಿಗಿಂತಲೂ ಚೆನ್ನಾಗಿ ಓದಿ ಉತ್ತಮ ದರ್ಜೆಯಲ್ಲಿ ತೇರ್ಗಡೆಯಾಗಬೇಕು, ಎಂಬ ಆಸೆಯಾಯಿತು. ಅಚ್ಚಂಭಟ್ಟರ ಒಂದೇ ಮಾತಿಗೆ ರಾಯರು ಒಪ್ಪಿಬಿಟ್ಟರು. ಅವರು ಅಷ್ಟು ಸಲೀಸಾಗಿ ಯಾರಿಗೂ ಮಾತು ಕೊಟ್ಟಿರಲಿಲ್ಲ. ರಂಗಣ್ಣನವರ ಕಷ್ಟ ತಾಪತ್ರಯಗಳನ್ನು ಹೇಳಿದಾಗ, ಮಾಧವರಾಯರ ಮನಸ್ಸು ಕರಗಿತು. ಭಟ್ಟರು ಏಕೊ ಇವನ ಮದುವೆಯ ಪ್ರಸ್ತಾಪವನ್ನೇ ಎತ್ತಲಿಲ್ಲ. ಮದುವೆ ಆಗಿದೆ ಎಂದರೆ ರಾಯರು ಕೋಣೆ ಕೊಡುತ್ತಿರಲಿಲ್ಲವೊ, ಏನೊ. ಅಥವಾ ಇನ್ನೇನು ಮಾತು ಬೆಳೆಯುತ್ತಿತ್ತೊ, ಏನೊ! ಅಂತೂ ಭಟ್ಟರು ಆ ವಿಷಯ ಎತ್ತಲಿಲ್ಲ. ರಾಮಸ್ವಾಮಿ ಯಾವ ಮಾತನ್ನೂ ಆಡಲಿಲ್ಲ. ಸುಮ್ಮನಿದ್ದ.

ರಾಯರು, "ಯಾವತ್ತು ಬರ್ತೀರಿ?" ಎಂದು ಕೇಳಿದರು. "ನಾಳೇನೇ ಬಂದುಬಿಡ್ತೀನಿ" ಎಂದು ರಾಮಸ್ವಾಮಿ ವಿನಯದಿಂದ ನುಡಿದ.........

"ಹೌದು ನೋಡಿ. ತಡ ಮಾಡಿದರೆ ಯಾರಾದರೂ ಬಂದು ಪೀಡಿಸ್ತಾರೆ. ಆಮೇಲೆ ಇನ್ಯಾರಿಗಾದರೂ ಮಾತು ಕೊಡಬೇಕಾಗುತ್ತೆ, ಅದಕ್ಕೇ ನಾನು ಈಗಲೂ ರಾತ್ರಿ ಒಂದೆರಡು ಗಂಟೆ ರೂಮಿನ ದೀಪ ಹಾಕೇ ಇರ್ತೀನಿ........ಖಾಲಿ ಇಲ್ಲ ಅಂತ ತಿಳಿಕೊಳ್ಳಿ ಅಂತ" ಎಂದು ನಕ್ಕರು.

"ಇಲ್ಲ ಇಲ್ಲ, ನನಗೆ ನೆಲೆಯೇ ಇಲ್ಲ, ನಾಳೇನೇ ಬಂದ್ಬಿಡ್ತೀನಿ."

"ಯಾಕೆ ಹೋಟಲಿಲ್ಲವೆ?"

"ಇಲ್ಲ, ಮೊನ್ನೆ ಫಸ್ಟಿಗೆ ಹೋಟಲು ಬಿಟ್ಟುಬಿಟ್ಟೆ, ನನ್ನ ಸ್ನೇಹಿತ ಹಾಸ್ಟೆಲಿನಲ್ಲಿದಾನೆ. ಅವನ ರೂಮಿನಲ್ಲಿ ಟ್ರಂಕು ಹಾಸಿಗೆ ಇಟ್ಟಿದೀನಿ. ಹಾಸ್ಟೆಲು ಮ್ಯಾನೇಜರು ತುಂಬ ಒಳ್ಳೆಯವರು. ರೂಮು ನೋಡ್ಕೊಳ್ಳೋವರೆಗೂ ಇರಪ್ಪ ಪರವಾಯಿಲ್ಲ, ಆದರೆ ಹೆಚ್ಚು ಹೊತ್ತು ಅಲ್ಲೇ ಇರಬೇಡ, ಅಂದಿದಾರೆ. ಊಟ ಅಯ್ಯರ್ ಹೋಟಲಿನಲ್ಲಿ ಮಾಡ್ತಾ ಇದೀನಿ, ಆದ್ರಿಂದ ನಾಳೇನೇ ಬಂದ್ಬಿಡ್ತೀನಿ."

"ಓ ಸರಿ" ಎಂದರು ರಾಯರು.

ಅಚ್ಚಂಭಟ್ಟರು "ಅಯ್ತಲ್ಲಪ್ಪ ಕೆಲಸ" ಎಂದು ನಸ್ಯದ ಕೈ ಜಾಡಿಸಿಕೊಂಡು ಮೇಲೆದ್ದರು.

ರಾಮುಸ್ವಾಮಿ ಎದ್ದು "ತುಂಬ ಉಪಕಾರ ಆಯಿತು ಭಟ್ಟರೆ" ಎಂದು ಕೃತಜ್ಞತೆಯನ್ನು ಸೂಚಿಸಿದ. ಅಚ್ಚಂಭಟ್ಟರು "ರಾಯರಿಗೆ ಹೇಳು, ನನಗಲ್ಲ. ನಾನೇನು ಮಾಡಬಲ್ಲೆ. ಎಲ್ಲ ರಾಯರು" ಎಂದು ರಾಯರ ಕಡೆ ಕೈ ತೋರಿಸಿದರು.

ರಾಮುಸ್ವಾಮಿ "ಇಬ್ಬರಿಗೂ" ಎಂದ.

ರಾಯರು "ಸಂತೋಷಪ್ಪ, ನಾಳೇನೇ ಬಂದ್ಬಿಡಿ." ಎಂದರು.

ರಾಮುಸ್ವಾಮಿ ಮಾರನೆಯ ದಿನವೇ ಮಾಧವರಾಯರ ಬಂಗಲೆಯ ರೂಮನ್ನು ಸೇರಿದ. ಅಂದಿನಿಂದ ಅವನಿಗೆ ರೂಮಿನ ಬಾಡಿಗೆ ಐದು ರೂಪಾಯಿ ಉಳಿಯಿತು. ಎರಡು ಹೊತ್ತು ಊಟಕ್ಕೆ ಮಾತ್ರ ಅವನು ಅಯ್ಯರ್ ಹೋಟಲಿಗೆ ಹೋಗಬೇಕಾಗಿತ್ತು. ಕಾಫಿ ಒಳ್ಳೆಯದಲ್ಲ ಎಂದು ಅದನ್ನು ಬಿಟ್ಟುಬಿಟ್ಟಿದ್ದ. ಅರ್ಧ ಪಾವು ಹಾಲು ತರಿಸಿಕೊಂಡು ಅದಕ್ಕೆ ಸಕ್ಕರೆ ಹಾಕಿ ಮುಚ್ಚಿಟ್ಟಿರುತ್ತಿದ್ದ. ಕಾಲೇಜು ಮುಗಿಸಿಕೊಂಡು ಬಂದ ಕೂಡಲೆ ಆ ಹಾಲನ್ನು ಕುಡಿದು ಹೊರಗೆ ಒಂದು ಸುತ್ತು ಹೋಗಿ ಬರುತ್ತಿದ್ದ. ಬೆಳಗ್ಗೆ ಹತ್ತು ಗಂಟೆಗೇ ಊಟಕ್ಕೆ ಹೋಗಬೇಕಾಗಿದ್ದುದರಿಂದ ಬೆಳಗಿನ ಹೊತ್ತು ಏನನ್ನೂ ಸೇವಿಸುತ್ತಿರಲಿಲ್ಲ. ಈ ಬದಲಾವಣೆಯಿಂದಲೂ ರಾಮುಸ್ವಾಮಿಗೆ ತಿಂಗಳಿಗೆ ಐದಾರು ರೂಪಾಯಿ ಉಳಿಯತೊಡಗಿತು. ಎರಡು ತಿಂಗಳು ನೋಡಿ ತಂದೆಗೆ ಕಾಗದ ಬರೆದುಬಿಟ್ಟ. 'ನೀನು ಪೆನ್‌ಷನ್ ಮೂವತ್ತು ರೂಪಾಯಿ ಮಾತ್ರ ಕಳಿಸಿದರೆ ಸಾಕು. ಮನೆ ಬಾಡಿಗೆಯನ್ನು ನೀನೇ ಇಟ್ಟುಕೊ' ಎಂಬ ಮಗನ ಸಲಹೆ ತಂದೆಗೆ ಸರಿ, ಎನ್ನಿಸಿತು. ರಂಗಣ್ಣನವರು ಮಗ ಪರವಾಯಿಲ್ಲ, ಎಂದುಕೊಂಡರು. ಆದರೆ ಬೀಗರ ನೆನಪಾದಾಗ ಬಹಳ ಕೋಪ ಬಂತು.

'ಇಬ್ಬರೇ ಹೆಣ್ಣು ಮಕ್ಕಳು. ನಮಗೆ ಗಂಡು ಮಕ್ಕಳೇ ಇಲ್ಲ, ಈ ಮಕ್ಕಳ ಗಂಡಂದಿರೇ ನಮಗೆ ಅಳಿಯಂದಿರು, ಗಂಡು ಮಕ್ಕಳು. ಆದ್ದರಿಂದ ಓದುವ ಆಸೆ ಉಳ್ಳ ಹುಡುಗರೇ ನಮಗೆ ಬೇಕು' ಎಂದು

ಹೇಳಿದ ಗೃಹಸ್ಥರು ಈಗ 'ಅಳಿಯ ಏನಾದರೇನು' ಎನ್ನತೊಡಗಿದ್ದರು. ಅವರು ಹಾಗಾಗಲು ಸಾವಿರ ಕಾರಣಗಳುಂಟು. ಆದರೆ ರಂಗಣ್ಣನವರಿಗೆ ಅದೊಂದೂ ಸರಿ ಅಲ್ಲ ಎನ್ನಿಸಿಬಿಟ್ಟಿತ್ತು. 'ಕೆಲಸ ಆಗುವ ವರೆಗೆ ಮಾತ್ರ ಏನೇನೋ ಆಸೆ ತೋರಿಸುತ್ತಾರೆ. ಮಗಳ ಕೊರಳಿಗೆ ಮಾಂಗಲ್ಯ ಬಿದ್ದ ಕೂಡಲೆ ಹುಲಿಗಳಾಗಿಬಿಡ್ತಾರೆ ಹೆಣ್ಣಿನ ತಂದೆತಾಯಿ' ಎಂದು ರಂಗಣ್ಣ ಪದೇಪದೇ ಹೇಳತೊಡಗಿದ್ದರು.

ತಮ್ಮ ಮಗಳಿಗೆ ಮಕ್ಕಳಾಗುವುದಿಲ್ಲ. ಅವಳಿಂದ ರಂಗಣ್ಣನವರ ಮನೆ ಹಾಳಾಯಿತು, ಎಂಬ ದೂರು ಕೇಳಿದ್ದ ಶಾಮಣ್ಣನವರು ಬದಲಾಯಿಸಿಬಿಟ್ಟಿದ್ದರು. ನಿಷೇಕಪ್ರಸ್ತಕ್ಕೆ ಎರಡು ಬಾರಿ ಮುಹೂರ್ತ ಇಟ್ಟು ಕಾಗದ ಬರೆದರೆ ರಂಗಣ್ಣನವರು ಆ ವಿಷಯವನ್ನೇ ಮಗನಿಗೆ ತಿಳಿಸದೆ 'ಒಂದು ಸಾವಿರ ರೂಪಾಯಿ ಎಣಿಸಿದರೆ ಬರ್ತೇವೆ' ಎಂದು ಕಾಗದ ಹಾಕಿದ್ದರು. ಎರಡು ಬಾರಿಯೂ ರಂಗಣ್ಣನವರಿಂದ ಅದೇ ಉತ್ತರ ಹೋಗಿತ್ತು. ಹೆಂಡತಿ ನರಸಮ್ಮನವರ ದುಃಖವನ್ನು ತಡೆಯಲಾರದೆ ಮುಹೂರ್ತ ಇಡಿಸಿ ಕಾಗದ ಬರೆದ ಶಾಮಣ್ಣನವರಿಗೆ ರಂಗಣ್ಣನವರ ಉತ್ತರ ನೋಡಿ ಮೈಯೆಲ್ಲಾ ಕಿಡಿಕಿಡಿಯಾಯಿತು. ಮೊದಲನೆಯ ಬಾರಿ ಬಂದ ಕಾಗದವನ್ನು 'ಏನೋ ಹೋಗಲಿ. ಅವರ ಸ್ವಭಾವ' ಎಂದು ಆ ಕಡೆ ಎಸೆದಿದ್ದರು. ಆದರೆ ಎರಡನೆಯ ಬಾರಿ ಬಂದ ಅದೇ ಉತ್ತರವನ್ನು ನೋಡಿ ಅವರ ಕೋಪ ಮಿತಿಮೀರಿತು.

"ಬೇಕಾಗಿಲ್ಲ. ನನ್ನ ಮಗಳು ನನ್ಮನೇಲೇ ಇರ್ಲಿ. ಅವಳೇ ನನ್ನ ಮಗ ಅಂತ ತಿಳ್ಕೊಂಡು ಅವಳಿಗೇ ಓದಿಸ್ತೇನೆ. ಬಿ. ಎ. ಪಾಸ್ ಮಾಡಿಸ್ತೇನೆ; ಮದುವೇನೇ ಆಗ್ಲಿಲ್ಲ ಅಂದ್ಕೊಳ್ತೇನೆ" ಎಂದು ಹಾರಾಡಿದರು. ನರಸಮ್ಮನವರು ನಡುಮನೆಯ ಮಂಚದ ಮೇಲೆ ಕುಳಿತು ಗಳಗಳನೆ ಅಳುತ್ತಿದ್ದರು. ಆದರೆ ಪಕ್ಕದ ಮನೆಗೆ ಹೋಗಿದ್ದ ಗೌರಿ ಒಳಗೆ ಬಂದ ಕೂಡಲೆ ಶಾಮಣ್ಣನವರು ತಣ್ಣಗಾದರು. ಮಗಳು ನೊಂದುಕೊಳ್ಳುತ್ತಾಳಲ್ಲ, ಎಂದು ತಂದೆ ಇನ್ನೂ ತಾಳ್ಮೆಯನ್ನು ಉಳಿಸಿಕೊಂಡಿದ್ದರು.

ರಾಮುಸ್ವಾಮಿ ಅವರ ಮನೆಗೆ ಒಂದೇ ಒಂದು ಬಾರಿ ಹೋಗಿದ್ದ. ಅದೂ ಏತಕ್ಕೆ, ಮದುವೆಗೆ ಮಾತ್ರ. ಆಮೇಲೆ ಅವನು ಅವರ ಮನೆಗೆ ಹೋಗಲೇ ಇಲ್ಲ. ತನ್ನ ಗೌರಿಯನ್ನು ನೋಡಲೇ ಇಲ್ಲ. ಎರಡು ಮೂರು ಬಾರಿ ಹೋಗಬೇಕೆನ್ನಿಸಿತು. ಆದರೆ ಏನೇನೋ ಅಡಚಣೆಗಳು ಬಂದುವು. ದಸರಾದಲ್ಲಿ ಅವರೆಲ್ಲ ಊರಿನಲ್ಲಿರಲಿಲ್ಲ. ಯಾರದೋ ಮದುವೆಗೆ ಮೈಸೂರಿಗೆ ಹೋಗಿದ್ದರಂತೆ. ಆಗ ಹೊಸ ಅಳಿಯನನ್ನು ಕರೆಯುತ್ತಾರೆ, ಜೊತೆಯಲ್ಲಿ ಕರೆದುಕೊಂಡುಹೋಗುತ್ತಾರೆ ಎಂದು ಅಂದುಕೊಂಡಿದ್ದ; ತಾಯಿಯೂ ಹಾಗೆ ನಂಬಿದ್ದಳು. ಆದರೆ ಊರಿಂದ ಕಾಗದವೇ ಬರಲಿಲ್ಲ; ಗೌರಿ ಕನ್ನಡ ಎರಡನೆಯ ತರಗತಿಯ ವರೆಗೆ ಮಾತ್ರ ಓದಿದ್ದರಿಂದ ಹೆಂಡತಿಯ ಕ್ಷೇಮ ಸಮಾಚಾರದ ಕಾಗದವನ್ನೂ ಈ ಗಂಡ ನಿರೀಕ್ಷಿಸುವ ಹಾಗಿರಲಿಲ್ಲ. ಎರಡನೆಯ ಬಾರಿ ಹೋಗಬೇಕೆನ್ನಿಸಿದಾಗ ತಂದೆ 'ಬೇಡ' ಅಂದರು. ಅವರಿಗೆ ಜಮೀನಿನ ಕೆಲಸ ಇದ್ದುದರಿಂದ ಅವರು ಹಳ್ಳಿಗೆ ಹೋಗಿ ಅಲ್ಲೇ ಒಂದು ವಾರ ಇರಬೇಕಾಯಿತು. ಆಗ ಇವನು ಮನೆಯಲ್ಲಿ ಉಳಿಯಬೇಕಾಯಿತು. ಮೂರನೆಯ ಬಾರಿ ಹೋಗಬೇಕು ಎನ್ನಿಸುವ ಹೊತ್ತಿಗೆ ಇಬ್ಬರ ಬಾಂಧವ್ಯ ಆಗಲೆ ಹಳಸಿಬಿಟ್ಟಿತ್ತು. ಒಬ್ಬರಿಗೊಬ್ಬರು ಕಾಗದ ಒರೆಯುವುದನ್ನೂ ನಿಲ್ಲಿಸಿಬಿಟ್ಟಿದ್ದರು. ತೆಳ್ಳಗೆ ಬೆಳ್ಳಗೆ ಚೆನ್ನಾಗಿದ್ದ ಗೌರಿಯನ್ನು ನೆನಸಿಕೊಂಡಾಗ ರಾಮುಸ್ವಾಮಿಗೆ ಛೆ, ಹೋಗಬೇಕು. ಅವಳೇನು ಮಾಡಿದಳು ಪಾಪ. ಇವರಿವರ ಜಗಳದಲ್ಲಿ ನಾವ್ಯಾಕೆ ದೂರ ಇರಬೇಕು, ಎನ್ನಿಸಿತು. ಆದರೆ ತಾಯಿಯ ಮಾತು ಕೇಳಿ 'ಸರಿ, ಹೋಗಬಾರದು' ಎಂದುಕೊಂಡ. ತಾಯಿ ಸತ್ತಮೇಲಂತೂ 'ಥೂ ಹೋಗಲೇಬಾರದು' ಎಂದು ನಿರ್ಧರಿಸಿದ.

ಅಂಥವನು ಹೊಳೆನರಸೀಪುರಕ್ಕೆ ಈಗ ಹೇಗೆ ಹೋದಾನು.

ಮಾಧವರಾಯರು "ಯಾಕೆ, ಇಳಿದು ಒಂದೆರಡು ದಿನ ಆನಂದವಾಗಿ ಕಾಲಕಳೆದು...." ಎಂದಾಗ ಅವನಿಗೆ ಆನಂದವುಂಟಾಗಲಿಲ್ಲ.

ಆದರೂ 'ಇಲ್ಲ, ಈ ಸಲ ಇಳಿಯೊಲ್ಲ' ಎಂಬ ಉತ್ತರ ಅದೇಕೊ ಅವನ ಬಾಯಿಂದ ಬಂತು. ಅವನಿಗೆ ಬೆಳಗಿನಿಂದ ನಾಲ್ಕು ಬಾರಿ

ಹೊಳೆನರಸೀಪುರದ ನೆನಪಾಗಿತ್ತು. ಅದೇಕೊ ಗೌರಿ ಅವನ ಮನ ಸೆಳೆಯುತ್ತಿದ್ದಳು.

ಬೆಳಗಿನ ಜಾವ ಪರೀಕ್ಷೆಗಾಗಿ 'ರಾಮಾಶ್ವಮೇಧ' ವನ್ನು ಓದುತ್ತಿದ್ದಾಗ ಒಮ್ಮೆ ಗೌರಿಯು ನೆನಪಾಗಿತ್ತು. 'ಗರ್ಭಧಾರಣಂ' ಅಧ್ಯಾಯ ನೋಡಿದ ಕೂಡಲೆ ಅವಳು ಕಣ್ಣುಮುಂದೆ ಬಂದು ನಿಂತಳು. ಹಿಂದೆ ಆ ಅಧ್ಯಾಯವನ್ನು ಓದುವಾಗಲೂ ಒಂದೆರಡು ಬಾರಿ ಹಾಗಾಗಿತ್ತು. ಆದರೆ ಈ ಬಾರಿಯ ಹಾಗೆ ಆಗ ಆಗಿರಲಿಲ್ಲ. ಜಾನಕಿ ಇನ್ನೂ ಗರ್ಭ ಧರಿಸದ ಮುನ್ನ ಸಖಿಯೊಡನೆ ಆಡಿದ ಮಾತು 'ಮಿತ್ರೆ ನೋಡೆ! ನೋಡೆ! ನೀಡುಂ ನೀಡದ ಪಕ್ಷಿಯುಮೆನ್ನಂ ಬಂಜೆಯೆನುತೇಡಿಪಂತಿರೆನ್ನಿದಿರೊಳ್ ಪಿಳ್ಳೆಯಂ ಮುದ್ದುಗೆಯ್ದುಂ' ಗೌರಿಯ ಬಾಯಿಂದ ಬಂದಂತಾಯಿತು. ಮಕ್ಕಳಾಗಲಿಲ್ಲವೆಂದು ಕೊರಗುತ್ತಿದ್ದ ಸೀತೆಯ ಬಗ್ಗೆ ಮಾತಾಡುತ್ತಿದ್ದ ಮುದ್ದಣ ಕವಿ ತನ್ನ ಹೆಂಡತಿ ಮನೋರಮೆಯನ್ನು ಕುರಿತು 'ಪ್ರಾಣೇಶ್ವರೀ! ಇಂತು ತನಗೆ ಮಕ್ಕಳ್ ಪುಟ್ಟಿತಿಲ್ಲೆಂದೊಂದು ಪಂಬಲ್ ಪಿರಿದಾಗೆ, ಗಳಿಗೆ ಗಳಿಗೆಗೆ ಬಾಡಿ ಬೆಂಡಾಗಿ, ಮತ್ತಂ ಕಂಡರಿಸಿದ ಬೆಳ್ಮರನೊಂದು ಪಾಪೆಗೆನಗೇಕೆ, ಸಿಂಗರಮೆನಗೇತರ್ಕೆ ಭೋಜನಮೆನುತಿಪಂ ಬೇಸರಿನುಳಿದು ಆರೊಳಮೇನುಮನಾಡದೆ ನೋಡದೆ ಸಜ್ಜೆವನೆಗಾಗಿ ಪೋಪುದುಂ' ಎಂದು ನುಡಿದಾಗ, ಕವಿ ಗೌರಿಯ ಬಗ್ಗೆ ಮಾತಾಡಿದಂತಾಯಿತು. ಮುದ್ದಣ ಮನೋರಮೆಯರ ಸಂವಾದ ಸರಸ ಸಲ್ಲಾಪಗಳನ್ನು ನೆನಸಿಕೊಂಡಾಗ ಮತ್ತು ಅದನ್ನು ಕುರಿತು ಕನ್ನಡದ ಅಧ್ಯಾಪಕರು ವಿವರಿಸಿದಾಗಲೆಲ್ಲ ಗೌರಿಯ ನೆನಪಾಗುತ್ತಿತ್ತು. ಈ ನೆನಪಾದಾಗ, ತಾನು ಮಾಡುತ್ತಿರುವುದು ಸರಿಯೆ? ಮದುವೆಯಾದ ಮೇಲೆ ಹೆಂಡತಿಯ ಮುಖ ನೋಡದೆ ಹೀಗೆ ದೂರ ಇರುವುದು ನಡತೆಯೆ? ಪಾಪ, ಗೌರಿ ಹೇಗಿದ್ದಾಳೊ! ಎನ್ನಿಸಿತು.

ಜನ ಏನೆಂದಾರು?

ನಿಜ. ಜನ ಸಾವಿರಾರು ಮಾತಾಡಿದ್ದರು. ಎಲ್ಲ ರಾಮಸ್ವಾಮಿಯ ಕಿವಿಗೆ ಬಿದ್ದಿತ್ತು. ರಂಗಣ್ಣನವರು ಸೊಸೆಯನ್ನು ಮನೆಗೆ ಕರಸಿಕೊಳ್ಳಲು

ಒಂದು ಸಹಸ್ರರೂಪಾಯಿ ಕೇಳಿದರು, ಎಂಬುದು ಎಲ್ಲರಿಗೂ ತಿಳಿದಿತ್ತು. ಹಾಸನದ ಜನರೆಲ್ಲ ರಂಗಣ್ಣನವರನ್ನು ಬಯ್ಯುತ್ತಿದ್ದರು; "ಥೂ, ಈತನಿಗೆ ವಯಸ್ಸಾದಂತೆಲ್ಲ ದುಡ್ಡಿನ ಹುಚ್ಚು ಹೆಚ್ಚಾಗುತ್ತಿದೆ" ಎಂದರು.

"ರಾಮುಸ್ವಾಮಿಗೇನು ಧಾಡಿ, ವಯಸ್ಸಾಗಿದೆ. ಬಿ. ಎ. ಓದ್ತಾ ಇದಾನೆ. ಇಷ್ಟೂ ಬುದ್ಧಿಯಿಲ್ಲವೆ?" ಎಂದರು.

ಹೌದು. ರಾಮುಸ್ವಾಮಿಗೆ ಬುದ್ಧಿ ಇರಲಿಲ್ಲ, ಎಂದೇ ಹೇಳಬೇಕು. ಈಗ ಸ್ವಲ್ಪ ಬುದ್ಧಿ ಬಂದಿತ್ತು. ಗೆಳೆಯ ರಂಗಸ್ವಾಮಿಯ ಮಾತು ಕೇಳಿದ ಮೇಲಂತೂ ಅವನ ಮನಸ್ಸು ಬದಲಾಯಿಸಿತು.

ಪರೀಕ್ಷೆ ಇನ್ನೂ ಹದಿನೈದು ದಿನ ಇದೆ, ಎನ್ನುವಾಗ ಸಂಜೆ ರಾಮುಸ್ವಾಮಿ ರಂಗಸ್ವಾಮಿಯೊಡನೆ ಇಂಡಿಯನ್ ಹಿಸ್ಟ್ರಿ ನೋಟ್ಸ್ ಹಿಡಿದುಕೊಂಡು ಕುಕ್ಕರಹಳ್ಳಿ ಕೆರೆಯ ಹತ್ತಿರ ಓದಲು ಹೊರಟಿದ್ದ. ಕೆರೆಯ ದಂಡೆಯ ಮೇಲಿದ್ದ ಬೆಂಚಿನ ಮೇಲೆ ಕುಳಿತು ಇಬ್ಬರೂ ಒಂದು ಒಂದೂವರೆ ಗಂಟೆ ಓದಿದರು. ರಾಮುಸ್ವಾಮಿಗೆ ಏಕೊ ತಲೆ ನೋಯುತ್ತಿತ್ತು.

"ರಂಗಸ್ವಾಮಿ, ಇವತ್ತು ಬೆಳಗಿನಿಂದ ಯಾಕೋ ತಲೆ ನೋಯ್ತಾ ಇದೆ ಕಣೊ" ಎಂದ.

ರಂಗಸ್ವಾಮಿ, "ಯಾಕೆ, ರಾತ್ರಿ ತುಂಬ ಹೊತ್ತು ಓದ್ತಾ ಇದೀಯೇನೊ?" ಎಂದ.

"ಇಲ್ಲಪ್ಪ. ಹನ್ನೊಂದು ಗಂಟೇಗೇ ಮಲಗ್ಬಿಡ್ತೀನಿ."

"ಅಜೀರ್ಣ ಇರಬಹುದು–ಅಂದ್ಹಾಗೆ ಆಯಿಲ್‌ಬಾತ್ ತೊಗೊಂಡು ಎಷ್ಟು ದಿನ ಆಯ್ತು?"

"ಅಯ್ಯೋ, ಸುಮ್ಮನೆ ವಿಷಯ ಗೊತ್ತಿದ್ದೂ ಹೀಗೆ ಕೇಳ್ತೀಯಲ್ಲ ರಂಗಸ್ವಾಮಿ. ನಾನು ಆಯಿಲ್ ಬಾತ್ ಕಂಡು ಮೂರು ವರುಷ ಆಯ್ತು." ಎಂದು ಒಂದು ನಿಟ್ಟುಸಿರುಬಿಟ್ಟ.

ರಂಗಸ್ವಾಮಿಗೆ ಎಲ್ಲ ಗೊತ್ತಿತ್ತು. ಅವನು ಅನೇಕ ಬಾರಿ ರಾಮುಸ್ವಾಮಿಯನ್ನೇ ಛೀಮಾರಿ ಮಾಡಿದ್ದ. "ನಿನಗೆ ಬುದ್ಧಿಯಿಲ್ಲ.

ಮದುವೆಮಾಡಿಕೊಂಡು ಮೂರು ವರುಷ ಆದರೂ ಮುಖ ನೋಡದೆ ಇದ್ದರೆ ಏನನ್ನೋಣ. ಥೂ, ಚೆನ್ನಾಗಿಲ್ಲಪ್ಪ" ಎಂದು ಎರಡು ಮೂರು ಬಾರಿ ಹೇಳಿದ್ದ.

ರಾಮುಸ್ವಾಮಿಗೆ ತವರಿನಲ್ಲಿ ತಾಯಿ ಇಲ್ಲ. ತಂದೆ ಒಬ್ಬರೇ. ಅವರೂ ಅನ್ನ ನೀರು ಬೇಯಿಸಿಕೊಂಡು ಕಷ್ಟದ ಜೀವನ ನಡಸುತ್ತಿದ್ದಾರೆ. ಮಗ ಊರಿಗೆ ಹೋದಾಗ ಅವರು ಏನು ಶುಶ್ರೂಷೆ ಮಾಡಿಯಾರು. ಅವರ ಕಷ್ಟ ನೋಡಲಾರದೆ ಮಗನೇ ಅವರ ಸೇವೆ ಮಾಡಬೇಕಾಗಿತ್ತು. ಇದರಿಂದ ರಾಮುಸ್ವಾಮಿಗೆ ವಿಶ್ರಾಂತಿ, ಶಾಂತಿ ಹೇಗೆ ದೊರೆಯಬೇಕು. ಇಲ್ಲ, ಅವನು ಸುಖ ಶಾಂತಿ ಆರೈಕೆಗಳನ್ನು ಕಂಡು ಬಹಳ ಕಾಲ ವಾಗಿತ್ತು.

ಅಂದು ರಂಗಸ್ವಾಮಿ "ರಾಮುಸ್ವಾಮಿ, ಈ ಸಲ ಪರೀಕ್ಷೆ ಮುಗಿದ ಮೇಲೆ ಏನು ಮಾಡ್ತೀಯೆ ?" ಎಂದು ಕೇಳಿದ. ಅದು ಬಿ. ಎ. ಡಿಗ್ರಿ ಪರೀಕ್ಷೆ. ಅದು ಮುಗಿದ ಮೇಲೆ ಆ ವಿದ್ಯಾರ್ಥಿಯ ಓದು ಮುಗಿದಂತೆ. ಅವನು ವಿದ್ಯೆಯ ಸೋಪಾನದಲ್ಲಿ ಕೊನೆಯ ಮೆಟ್ಟಲನ್ನು ಹತ್ತಿದಂತೆ. ಅನಂತರ ಅವನು ಉದ್ಯೋಗಕ್ಕೆ ಸೇರಿ, ಗೃಹಸ್ಥನಾಗಿ, ತಂದೆಯಾಗಿ ಬಾಳಲು ಯೋಗ್ಯತೆ ಪಡೆಯುತ್ತಾನೆ; ಇದು ಎಲ್ಲರ ಅಭಿಪ್ರಾಯ. ಆದ್ದರಿಂದ ರಂಗಸ್ವಾಮಿ ಎಲ್ಲ ವಿದ್ಯಾರ್ಥಿಗಳಂತೆ ರಾಮುಸ್ವಾಮಿಗೆ ಆ ಪ್ರಶ್ನೆ ಕೇಳಿದ. ಆದರೆ ರಾಮುಸ್ವಾಮಿ ಆ ಹಳೆಯ ಉತ್ತರವನ್ನೇ ಹೇಳಿದ :

"ಊರಿಗೆ ಹೋಗುತ್ತೇನೆ"

"ಯಾವ ಊರಿಗೆ ?"

"ನಮ್ಮೂರಿಗೆ"

"ಎಂದರೆ ?"

"ಹಾಸನಕ್ಕೆ"

"ಹೊಳೆನರಸೀಪುರದಲ್ಲಿ ಇಳಿಯಲ್ವೆ?"

"ಇಲ್ಲ."

"ಆಮೇಲೆ ಹೋಗ್ತೀಯ ?"

"ಇಲ್ಲ"

"ಹೋಗೋದೇ ಇಲ್ವೆ?"

"ಹೋಗೋದೇ ಇಲ್ಲ. ಇದೇನು ರಂಗಸ್ವಾಮಿ ಹೀಗೆ ಕೇಳ್ತಾ ಇದೀಯೆ ? ನಿಂಗೊತ್ತಿಲ್ವೆ?"

"ಗೊತ್ತಿದೆ. ಆದರೆ ಒಂದೊಂದು ಸಲ ಅನ್ನಿಸುತ್ತೆ—ಹೀಗಿರೋದು ಸರಿಯೋಂತ ?"

"ನಿಂಗೇನು ಗೊತ್ತು. ಎಲ್ಲ ಚೆನ್ನಾಗಿ ಗೊತ್ತಿದ್ದರೆ ನೀನು ಹೀಗೆ ಹೇಳ್ತಾ ಇರ್ಲಿಲ್ಲ"

"ಏನೋಪ್ಪ. ನನಗೆ ಇದು ಸರಿಯಾಗಿ ಕಾಣೊಲ್ಲ. ನಾನಾಗಿದ್ದಿದ್ದರೆ ತಂದೆಗೆ ಬುದ್ಧಿ ಹೇಳ್ತಿದ್ದೆ. ಆ ಹುಡುಗೀನ್ನ ಮನೆಗೆ ಕರಸಿಕೊಂಡು ಸುಖವಾಗಿ ಸಂಸಾರ ನಡಸ್ತಿದ್ದೆ. ಈ ರೀತಿ ಕೊರಗ್ತಿರಲಿಲ್ಲ—ಅಲ್ಲ ರಾಮುಸ್ವಾಮಿ, ಅದ್ಯಾಕೆ ನೀನು ನಿಮ್ಮತ್ತೆ ಮನೆಗೆ ಹೋಗಲ್ಲ? ಹುಡುಗಿ ಚೆನ್ನಾಗಿಲ್ಲವೆ? ಅಥವಾ ಇನ್ನೇನಾದರೂ....?"—ರಂಗಸ್ವಾಮಿಗೆ ಈ ಒಡಕಿನ ಕಾರಣ ಅದುವರೆಗೂ ಗೊತ್ತಿರಲಿಲ್ಲ. ಆದ್ದರಿಂದ ಅವನು ಆ ಪ್ರಶ್ನೆ ಕೇಳಿ ಸಂಶಯ ನಿವಾರಣೆ ಮಾಡಿಕೊಳ್ಳಲು ಪ್ರಯತ್ನಿಸಿದ. ಅವರಿಬ್ಬರೂ ಎರಡು ವರುಷ ಒಂದೇ ತರಗತಿಯಲ್ಲಿ ಒಂದೇ ಬೆಂಚಿನ ಮೇಲೆ ಕುಳಿತು, ಜೊತೆಯಲ್ಲಿಯೇ ಕಾಲಕಳೆಯುತ್ತಿದ್ದುದರಿಂದ ಸಂಸಾರದ ವಿಷಯವನ್ನು ಪರಸ್ಪರ ಆಲೋಚಿಸುತ್ತಿದ್ದರು. ಆದರೆ ರಾಮುಸ್ವಾಮಿ ಹೆಂಡತಿಯನ್ನೇಕೆ ಈ ರೀತಿ ಕಾಣುತ್ತಾನೆ ಎಂಬುದು ರಂಗಸ್ವಾಮಿಗೆ ಬಗೆಹರಿದಿರಲಿಲ್ಲ.

ಒಂದು ದಿನ "ರಾಮುಸ್ವಾಮಿ, ನಿನ್ನ ಒಂದು ವಿಷಯ ಕೇಳಬೇಕೂಂತ. ಕೇಳಲಾ?" ಎಂದು ಕುತೂಹಲದಿಂದ ಕೇಳಿದ.

ಕಾರಂಜಿ ಕೆರೆಯ ದಂಡೆಯ ಮೇಲಿನ ಬೆಂಚಿನ ಮೇಲೆ ಇಬ್ಬರೂ ಕುಳಿತು ಸುಮಾರು ಒಂದು ಗಂಟೆ ಹೊತ್ತು ಮಾತಾಡಿದ್ದರು. ರಂಗಸ್ವಾಮಿ ತನ್ನ ಸಂಸಾರದ ವಿಷಯವಾಗಿ ಎಲ್ಲ ಹೇಳಿ ಮುಗಿಸಿದ್ದ. ಅವನ ತಂದೆ

ದುಡ್ಡಿನ ಆಸೆಗಾಗಿ ಸೀರ್ನಹಳ್ಳಿಯ ಶಾನುಭೋಗರ ಮೂರನೆಯ ಮಗಳನ್ನು—ಕಪ್ಪಗಿದ್ದರೂ ಚೆನ್ನಾಗಿದ್ದಾಳೆ—ಎಂದು ಹೇಳಿಕೊಂಡು 'ನೀನೂ ಒಪ್ಪಿಕೊ, ಇಂಥ ಸಂಬಂಧ ಸಿಕ್ಕೋದಿಲ್ಲ, ಕಳಕೊಳ್ತೀಯೆ' ಎಂದು ಪೀಡಿಸುತ್ತಿದ್ದ ವಿಷಯವನ್ನು ವಿಸ್ತಾರವಾಗಿ ಹೇಳಿದ್ದ. "ಏನು ಮಾಡೋದೋ ತೋಚೋದೇ ಇಲ್ಲಪ್ಪ. ನಾನೇನೊ ಹೇಳಿಬಿಟ್ಟೆ. ನನಗೆ ಈ ಮದುವೆ ಬೇಡಾಂತ. ಅದಕ್ಕೆ ನಮ್ಮ ತಂದೆ ತುಂಬ ರೇಗಿಬಿಟ್ಟಿದಾರೆ. ನಾನು ಮನೆ ಬಿಟ್ಟು ಹೊರಟ್ಹೋಗ್ತೀನಿ. ನಿನಗೆ ಮದುವೆ ಆದರೆಷ್ಟು, ಹೋದರೆಷ್ಟು! ಎಲ್ಲೋ ಕಾಲೇಜಿನಲ್ಲಿ ಯಾವುದೋ ಹುಡುಗೀನ ಕಟ್ಟಿ ಕೊಂಡಿದೀ ಅಂತ ಕಾಣುತ್ತೆ. ಹೋಗು ಬೀದೀಲಿರೋ ಭಿಕಾರೀನ ಮದುವೆ ಮಾಡ್ಕೊ, ನನಗೂ ನಿನಗೂ ಸಂಬಂಧ ಇಲ್ಲ. ನೀನ್ಯಾರು ನಾನ್ಯಾರು, ಎಂತ ಏನೇನೋ ಹೇಳಿ ಹಾರಾಡಿದರು. ತುಂಬ ಬೇಜಾ ರಾಗಿದೆ ರಾಮುಸ್ವಾಮಿ" ಎಂದು ಮನೆಯಲ್ಲಿ ನಡೆದ ಘಟನೆಯನ್ನೆಲ್ಲ ಗೆಳೆಯನ ಮುಂದೆ ವಿವರಿಸಿದ್ದ. ಆಮೇಲೆ ಗೆಳೆಯನನ್ನು ಕುರಿತು ಆ ಪ್ರಶ್ನೆ ಹಾಕಿದ್ದ.

ಅಷ್ಟು ಹೊತ್ತೂ ಸುಮ್ಮನೆ ಆಲಿಸುತ್ತಿದ್ದ ರಾಮುಸ್ವಾಮಿಗೆ ಸ್ನೇಹಿತನ ಪ್ರಶ್ನೆ ಮುಜುಗರವನ್ನುಂಟುಮಾಡಿತು. "ರಾಮುಸ್ವಾಮಿ, ನಿನ್ನ ಒಂದು ವಿಷಯ ಕೇಳಬೇಕೂಂತ. ಕೇಳಲಾ?" ಎಂದಾಗ ಏನು ಕೇಳುತ್ತಾನೋ ಎನ್ನಿಸಿತು. ಎರಡು ವರ್ಷದಿಂದ ಅವನಿಗೆ ಹೇಳದೆ ಮರೆಮಾಚಿದ್ದ ಆ ವಿಷಯವನ್ನೇ ಅವನು ಕೇಳುತ್ತಾನೇನೋ ಎಂದು ಬೆಚ್ಚಿದ. ಅರೆಮನಸ್ಸಿನಿಂದ "ಇದೇನು ಹೀಗೆ ಕೇಳ್ತೀಯೆ? ಆಗಲಿ, ಕೇಳು" ಎಂದ.

"ನೀನು ನಿನ್ನ ಹೆಂಡತೀನ ಬಿಟ್ಟುಬಿಟ್ಟಿದೀಯ?" ಎಂದು ರಂಗಸ್ವಾಮಿ ಕುತೂಹಲದಿಂದ ಕೇಳಿದ. ಗೆಳೆಯನ ಬಾಯಿಂದ ಯಾವ ಪ್ರಶ್ನೆ ಬರಬಾರದೆಂದು ಬಯಸಿದ್ದನೋ ಆ ಪ್ರಶ್ನೆ ಎದುರಿಗೆ ನಿಂತು ಉತ್ತರ ಕೇಳುತ್ತಿತ್ತು.

ಉತ್ತರ ಹೇಳಲೇಬೇಕಾಯಿತು

"ಇಲ್ಲ ಬಿಟ್ಟಿಲ್ಲ."

"ಮತ್ತೆ ಯಾಕೆ ನೀನು ಅಲ್ಲಿಗೆ ಹೋಗ್ತಾ ಇಲ್ಲ ?"

"ಯಾಕೊ''

"ಯಾಕೆ ಕಾರಣ ಹೇಳಬಾರದ ?"

ರಾಮುಸ್ವಾಮಿ ಈ ಪ್ರಶ್ನೆಗೆ ಉತ್ತರ ಕೊಡದೆ ಮೌನವಾಗಿದ್ದ.

"ಹೊತ್ತಾಯಿತು ಹೋಗೋಣ" ಎಂದು ಏಳಲನುವಾದ. ಕೆರೆಯ ನೀರು ಅಲ್ಲಾಡದೆ ಮಲಗಿತ್ತು. ದೂರದ ದೀಪಗಳು ಆ ನೀರಿನ ಕನ್ನಡಿ ಯಲ್ಲಿ ಚೆನ್ನಾಗಿ ಪ್ರತಿಬಿಂಬಿಸಿದ್ದುವು. ರಾಮುಸ್ವಾಮಿ ಹಿಂದಕ್ಕೆ ತಿರುಗಿ ದಾಗ, ರಸ್ತೆಯಲ್ಲಿ ಯಾರೂ ಇಲ್ಲ ಎಂಬುದು ಗೊತ್ತಾಯಿತು. ಗಾಳಿ ಸಂಚಾರಕ್ಕಾಗಿ ಆ ಕಡೆ ಬಂದಿದ್ದ ಜನರೆಲ್ಲ ವಾಪಸು ಹೋಗಿದ್ದರು. ಎಲ್ಲೊ ಆಗೊಂದು ಈಗೊಂದು ಮೋಟಾರು ಕಾರು ನಗರದ ಕಡೆಗೆ ಹೋಗುತ್ತಿತ್ತು.

ತಾನು ಏಳಲನುವಾದರೂ ರಂಗಸ್ವಾಮಿ ಬೆಂಚಿನ ಮೇಲೆ ಕೂತೇ ಇದ್ದ.

ರಾಮುಸ್ವಾಮಿ, "ಹೊತ್ತಾಗಲಿಲ್ವೆ. ಆಗಲೆ ಏಳೂವರೆ ಆಯ್ತೀ ನೋಪ್ಪ" ಎಂದ.

ರಂಗಸ್ವಾಮಿ "ಆಗಲಿ ಕೂತ್ಕೊ ರಾಮುಸ್ವಾಮಿ ಒಂದೈದು ನಿಮಿಷ, ತುಂಬ ಬೇಜಾರಾಗಿದೆ" ಎಂದು ರಾಮುಸ್ವಾಮಿಯ ಷರಟಿನ ತುದಿಯನ್ನು ಹಿಡಿದು ಎಳೆದ. ರಾಮುಸ್ವಾಮಿ ಕುಳಿತುಕೊಳ್ಳಲೇಬೇಕಾಯಿತು.

"ಯಾಕೆ ಕಾರಣ ಹೇಳಬಾರದ ?" ಮತ್ತೆ ರಂಗಸ್ವಾಮಿ ಅದೇ ಪ್ರಶ್ನೆ ಹಾಕಿದ. ರಾಮುಸ್ವಾಮಿ ಉತ್ತರ ಹೇಳಲೇಬೇಕಾಯಿತು.

"ನಮ್ಮ ತಂದೆಗೆ ಇಷ್ಟವಿಲ್ಲ. ತಾಯಿಗೂ ಇಷ್ಟವಿರಲಿಲ್ಲ. ಅವಳು ಸತ್ತಿದ್ದೂ ಈ ಸಂಬಂಧದಿಂದ."

"ಯಾಕೆ ?''

"ಆ ಹುಡುಗಿಗೆ ಮಕ್ಕಳಾಗೊಲ್ಲವಂತೆ''

"ಯಾರು ಹೇಳಿದರು ?''

"ಜೋಯಿಸರು''

''ನೀನು ಭವಿಷ್ಯ ನಂಬ್ತೀಯ ?''

"ಇಲ್ಲ-ಉಹ್ಞು. ಒಂದೊಂದ್ಸಲ ನಂಬಿದೀನಿ.''

"ಈ ವಿಷಯದಲ್ಲಿ ?"

"ಈ ವಿಷಯದಲ್ಲಿ ನನಗೆ ನಂಬಿಕೆ ಇಲ್ಲ. ಆದರೆ ನಮ್ಮ ತಾಯಿಗೆ ತುಂಬ ನಂಬಿಕೆ. ಅವಳು ಅದೇ ಕೊರಗಿನಲ್ಲಿ ಸತ್ತಳು.''

"ಹಾಗಾದರೆ ಈಗ ?"

''ಈಗ ಏನು ಮಾಡೂಂತೀಯ ?''

"ಈಗ ನಿಮ್ಮ ತಾಯಿ ಇಲ್ಲವಲ್ಲ ?"

"ಹೌದು. ಇಲ್ಲ."

"ಅವರ ಕತೆ ಮುಗೀತು. ಇರೋರಾದರೂ ಸುಖವಾಗಿರಬೇಡವೆ? ನಿಮ್ಮ ತಂದೆಗೆ ನೀನು ಸರಿಯಾಗಿ ಹೇಳಬೇಕು. ನೀನಾದರೂ ಒಂದೆರಡು ಬಾರಿ ಹೊಳೆನರಸೀಪುರಕ್ಕೆ ಹೋದರೆ ಎಲ್ಲ ಸರಿಹೋಗುತ್ತೆ. ಪಾಪ, ಮದುವೆಮಾಡಿಕೊಂಡು ಸುಖವಾಗಿ ಸಂಸಾರ ಮಾಡೋಣ ಎಂದು ಕೊಂಡಿದ್ದ ಆ ಹುಡುಗಿಯ ಮನಸ್ಸು ಹೇಗಿರಬೇಕು. ಛೆ, ಆ ಹುಡುಗಿ ಏನು ತಪ್ಪು ಮಾಡಿತು!''

ಈ ಮಾತು ರಾಮಸ್ವಾಮಿಯ ಮೇಲೆ ಬಲವಾದ ಪರಿಣಾಮವನ್ನುಂಟುಮಾಡಿತು. ಅವನೂ ಅನೇಕ ಬಾರಿ ಒಬ್ಬನೇ ಕುಳಿತು ಆಲೋಚಿಸಿದಾಗ ಅದೇ ರೀತಿ ಅಂದುಕೊಂಡಿದ್ದ. ಆದರೆ ಈ ವಿಷಯವನ್ನು ತಂದೆಗೆ ಹೇಳುವ ಧೈರ್ಯ ಇನ್ನೂ ಬಂದಿರಲಿಲ್ಲ.

"ನಿಜ, ರಂಗಸ್ವಾಮಿ. ನಮ್ಮ ತಂದೆಗೆ ಹೇಳಬೇಕು. ಏಳು ಹೋಗೋಣ ಹೊತ್ತಾಯ್ತು" ಎಂದು ಎದ್ದು ನಿಂತ.

ರಂಗಸ್ವಾಮಿಯ ಮಾತು ರಾಮಸ್ವಾಮಿಯ ತಲೆಯಲ್ಲಿ ಮರುದನಿಗೊಡುತ್ತಿತ್ತು. ಅವನು ಅಂದು ರಾತ್ರಿಯೆಲ್ಲ ಅದೇ ಧಾಟಿಯಲ್ಲಿ ಆಲೋಚಿಸಿದ. ರಾತ್ರಿ ಎಷ್ಟೋ ಹೊತ್ತಿನ ಮೇಲೆ ನಿದ್ದೆ ಬಂತು. ಆಗೊಂದು ಕನಸು ಬಿತ್ತು. ರಾಮಸ್ವಾಮಿ ಗೌರಿ ಯಾವುದೋ ಮನೆಯಲ್ಲಿ ಎಷ್ಟೋ ವರ್ಷಗಳಿಂದ ಸಂಸಾರ ನಡಸುತ್ತಿದ್ದಾರೆ. ರಾಮಸ್ವಾಮಿಯ

ಮನೆ ತುಂಬ ಹುಡುಗರು ತುಂಬಿದ್ದಾರೆ. ಇದ್ದಕ್ಕಿದ್ದಂತೆ ಮನೆ ಬರಿದಾ ಯಿತು. ಮತ್ತೆ ನೋಡುವಲ್ಲಿ ಮನೆ ತುಂಬ ಮಕ್ಕಳು........ಏನೇನೋ! "ಥೂ, ಕೆಟ್ಟ ಕನಸು'' ಎಂದು ರಾಮುಸ್ವಾಮಿ ಬೆಳಗ್ಗೆ ಅಂದುಕೊಂಡ. ಆದರೂ ಹೊಳೆನರಸೀಪುರದ ಗೌರಿ ಅವನ ಮನಸ್ಸನ್ನು ಕರಗಿಸಿದ್ದಳು.

ಶಿರಸ್ತೇದಾರ್ ಶಾಮಣ್ಣನವರ ಸೋದರಮಾವ ಮೈಸೂರಿಗೆ ಬಂದಿದ್ದಾಗ ರಂಗಸ್ವಾಮಿಯನ್ನು ಪತ್ತೆ ಹಚ್ಚಿ, "ಅವನು ನೀವು ತುಂಬ ಸ್ನೇಹಿತರಂತೆ. ಹೇಗಾದರೂ ಮಾಡಿ ನೀವು ಈ ಸಂಸಾರವನ್ನು ನೆಟ್ಟಗೆ ಮಾಡಬೇಕು. ದಯವಿಟ್ಟು ರಾಮುಸ್ವಾಮಿಗೆ ಹೇಳಿ. ಅವನು ಈ ಹುಡುಗೀನ್ನ ಬಿಟ್ಟುಬಿಟ್ಟನೇ ತಿಳಿದು ಹೇಳಿ. ಕಾಗದಕ್ಕೆ ಉತ್ತರವನ್ನೇ ಕೊಡೋದಿಲ್ಲ" ಎಂದು ಹೇಳಿಕೊಂಡಿದ್ದರು. ಆದ್ದರಿಂದಲೇ ರಂಗಸ್ವಾಮಿ ಕೊನೆಕೊನೆಗೆ ತುಂಬ ಆಸಕ್ತಿಯಿಂದ ಈ ವಿಷಯವನ್ನು ಕೇಳತೊಡಗಿದ್ದ. ಕೊನೆಗೂ ರಾಮಣ್ಣನವರ ಸೋದರಮಾವ ಹೇಳಿದ ಮಾತನ್ನೆಲ್ಲ ಹೇಳಿ ಬಿಟ್ಟ. ರಾಮುಸ್ವಾಮಿಯಿಂದ ತಿಳಿಯಬೇಕಾದ್ದನ್ನು ತಿಳಿದು ಹೊಳೆನರಸೀ ಪುರಕ್ಕೆ ಕಾಗದ ಹಾಕಿದ.

ರಾಮುಸ್ವಾಮಿಗೆ ಇದೊಂದೂ ತಿಳಿಯದು. ಆದರೆ ರಂಗಸ್ವಾಮಿಯ ಮಾತು ಸರಿ, ಎಂದು ಮಾತ್ರ ಅನ್ನಿಸಿತು. ಮಾವನವರ ಮೂರು ಕಾಗದ ಗಳಿಗೂ ಉತ್ತರವನ್ನೇ ಬರೆಯದಿದ್ದುದನ್ನು ನೆನಸಿಕೊಂಡಾಗಲಂತೂ ಇದುವರೆಗೆ ತಾನು ಮಾಡಿದ್ದು ಸರಿಯಲ್ಲ, ಎನ್ನಿಸಿತು.

ಕನ್ನಡದ ಅಧ್ಯಾಪಕರು ಮುದ್ದಣ ಮನೋರಮೆಯರ ಸಂವಾದ ವರ್ಣನೆಯನ್ನು ವಿವರಿಸುತ್ತ 'ನವದಂಪತಿಗಳು ಈ ಸಂವಾದವನ್ನು ಓದಲೇಬೇಕು. ಪ್ರತಿಯೊಬ್ಬರೂ ಮುದ್ದಣಮನೋರಮೆಯರಾಗಿ ರಮಿಸ ಬೇಕು. ಇಂಥ ಜೀವನವನ್ನು ಅನುಭವಿಸಬೇಕು. ಇವರು ಆದರ್ಶ ದಂಪತಿಗಳು' ಎಂದು ಹೇಳಿದ ಮಾತು ಹಿಂದಿನ ದಿನ ರಾತ್ರಿ ನೆನಪಿಗೆ ಬಂದು ಬಹಳ ತೊಂದರೆಗೀಡುಮಾಡಿತು. ರಾಮುಸ್ವಾಮಿ ತನ್ನ ನೋಟ್ಸ ನಲ್ಲಿ ಅದನ್ನು ಬರೆದುಕೊಂಡಿದ್ದ; ಅವರು ಹೇಳಿದ ಒಂದು ಪದವನ್ನೂ ಬಿಡದೆ ಬರೆದುಕೊಂಡಿದ್ದ. ಬಿ. ಎ. ಪರೀಕ್ಷೆಗಾಗಿ ಮುದ್ದಣ ಮನೋರಮೆ

ಯರ ಸಂವಾದವನ್ನು ಹತ್ತಾರು ಬಾರಿ ಓದಿದ್ದ, ಚೆನ್ನಾಗಿ ಅರ್ಥ ಮಾಡಿಕೊಂಡಿದ್ದ. ಆದರೆ ಮದುವೆ ಮಾಡಿಕೊಂಡ ಗೌರಿಯಿಂದ ದೂರವಾಗಿ ಕುಳಿತಿದ್ದ. ಇದನ್ನು ನೆನಸಿಕೊಂಡಾಗ ನಾಚಿಕೆಯಾಯಿತು. ತಾನು ಮಾಡುತ್ತಿರುವುದು ತಪ್ಪು ಎನ್ನಿಸಿತು.

ಪರೀಕ್ಷೆಗೆ ಹೋಗಿ ಕುಳಿತಾಗ ಪ್ರಶ್ನಪತ್ರಿಕೆಯಲ್ಲಿ ಅದೇ ಮೊದಲ ಪ್ರಶ್ನೆ, ಮುದ್ದಣ ಮನೋರಮೆಯರ ಸಂವಾದ ಸರಣಿಯನ್ನು ಕುರಿತದ್ದು. ಅದನ್ನು ಮೆಚ್ಚಿ, ವಿಮರ್ಶಾತ್ಮಕವಾದ ಉತ್ತರವನ್ನು ರಾಮಸ್ವಾಮಿ ಬರೆಯಬೇಕಾಗಿತ್ತು. ಬರೆದ. ಆದರೆ ಎಲ್ಲ ಮಾತೂ ಬಾಯಿಂದ ಹೊರಗೆ ಬಂದುವೇ ಹೊರತು ಹೃದಯದಿಂದ ಮೇಲೇಳಲಿಲ್ಲ. ಹೃದಯ ಬರಿದಾಗಿತ್ತು; ಆಗೊಮ್ಮೆ ಗೌರಿಯ ನೆನಪಾಯಿತು. ಎರಡನೆಯ ಪ್ರಶ್ನೆಗೆ ಉತ್ತರ ಬರೆಯುತ್ತ, ಸೀತಾದೇವಿಯ ವರ್ಣನೆಯನ್ನು ವಿವರಿಸಬೇಕಾಗಿತ್ತು. ತೆಳ್ಳಗೆಬೆಳ್ಳಗೆ ಹೊನ್ನಿನ ಬಳ್ಳಿಯಂತಿದ್ದ ಸೀತಾದೇವಿಯನ್ನು ಬಣ್ಣಿಸುವಾಗ ಮತ್ತೆ ಗೌರಿಯ ನೆನಪಾಯಿತು. ಉತ್ತರ ಬರೆಯುವಾಗ ಅವನ ಮನಸ್ಸಿನಲ್ಲಿ ಸೀತೆಗಿಂತ ಮುಂದೆ ಗೌರಿಯೇ ನಿಂತುಕೊಂಡಿದ್ದಳು.

ರಾಮಸ್ವಾಮಿಗೆ 'ನಿಜ ಪಾಪ, ಗೌರಿ ಬಹಳ ಒಳ್ಳೆ ಹುಡುಗಿ ಅಂತೆ. ಅವಳನ್ನು ನಾನು ತುಂಬ ನೋಯಿಸಿದ್ದೇನೆ. ಇನ್ನು ಸಾಕು. ಹೇಗಿದ್ದರೂ ತಾಯಿ ಹೋದಳು. ತಂದೆಗೆ ಕೈಲಾಗೋದಿಲ್ಲ. ಅವರಿಗೆ ಇನ್ನೊಮ್ಮೆ ಹೇಳಿ ನೋಡೋಣ. ಅವರು ಒಪ್ಪಿಯಾರು. ಗೌರಿಯನ್ನು ಮನೆಗೆ ಕರೆದುಕೊಂಡು ಬರೋಣ, ಭವಿಷ್ಯ ಯಾವಾಗಲೂ ನಿಜವೇ ಆಗುತ್ತದೆಯೇ? ಎಷ್ಟೋ ಸಲ ಸುಳ್ಳಾಗಿದೆ. ಲೆಕ್ಕಾಚಾರದಲ್ಲಿ ಒಂದಂಕೆ ಅದಲು ಬದಲಾದರೆ ಅವರ ಭವಿಷ್ಯವೆಲ್ಲ ಅದಲುಬದಲಾಗುತ್ತದೆ. ಈ ವಿಷಯ ಭವಿಷ್ಯ ಹೇಳೋರಿಗೆ ಗೊತ್ತಿಲ್ಲದೇ ಇರಬಹುದು. ಅವರು ತಾವು ಹೇಳುವುದೇ ಸರಿ ಎಂದು ನಂಬಿ ಹೇಳಿಬಿಡಬಹುದು. ನಾವು ಅದನ್ನೇ ನಂಬಿ ಈ ರೀತಿ ಮಾಡಿಬಿಟ್ಟರೆ ಒಂದು ಜೀವನವನ್ನೇ ಹಾಳು ಮಾಡಿದಂತಾಗುತ್ತದೆ. ಒಂದು ಸಂಸಾರವನ್ನೇ ಮುರಿದಂತಾಗುತ್ತದೆ. ಈಗ ಆಗಿರುವ ನಷ್ಟವೇ ಸಾಕು. ನಮ್ಮ ತಾಯಿ ಸತ್ತದ್ದೂ ಈ ಭವಿಷ್ಯ

ದಿಂದಲೇ. ಮನುಷ್ಯ ಭವಿಷ್ಯ ನಂಬಿ ಜೀವನ ನಡಸೋದು ಸಾಧ್ಯವೆ? ಮುಂದೆ ಏನಾದರಾಗಲಿ, ನಮ್ಮ ಕೆಲಸ ನಾವು ಮಾಡಬೇಕು. ನಮಗೆ ಯಾವುದು ಸರಿ ಎಂದು ತೋರುತ್ತದೊ, ಅದನ್ನು ನಾವು ಮಾಡಬೇಕು. ಭವಿಷ್ಯವನ್ನು ಭವಿಷ್ಯಕ್ಕೇ ಬಿಡಬೇಕು' ಎನ್ನಿಸಿತು.

ಕಿಟಕಿಯ ಹತ್ತಿರದಲ್ಲಿ ಹುಡುಗರು ಆಟ ಶುರುಮಾಡಿದಾಗ ಮಕ್ಕಳಾಗದ ಬಂಜೆ ಗೌರಿಯ ನೆನಪಾಯಿತು. ಚರಿತ್ರೆಯ ಪುಸ್ತಕ ಕೈಯಲ್ಲಿದ್ದರೂ ಮನಸ್ಸು ಎಲ್ಲೋ ಕುಳಿತು ಚಿಂತಿಸುತ್ತಿತ್ತು.

ಐದನೆಯ ಬಾರಿ ಮಾಧವರಾಯರು ಜ್ಞಾಪಿಸಿದರು. ಅವರ ಪ್ರಶ್ನೆಗೆ ಉತ್ತರವಾಗಿ ರಾಮಸ್ವಾಮಿ "ಇಲ್ಲ ಈ ಸಲ ಇಳಿಯೊಲ್ಲ" ಎಂದ. ಅವನ ಮನಸ್ಸು ಅದೇ ಆಲೋಚನೆಯಲ್ಲಿ ತೊಡಗಿತ್ತು. ಹೊಳೆನರಸೀಪುರಕ್ಕೆ ಹೋಗಲೇಬಾರದು ಎಂದುಕೊಂಡಿದ್ದ ಸಿರ್ಧಾರ ಅನೇಕ ಬಾರಿ ಸಡಿಲ ವಾಗಿತ್ತು. ಈಗ ಹೋಗಲಾಗದಿದ್ದರೂ ಮುಂದಾದರೂ ಹೋಗಬೇಕು, ಹೋಗದಿರಬಾರದು, ಎಂದು ಒಂದು ಮನಸ್ಸು ಅನೇಕ ಬಾರಿ ಹೇಳಿತ್ತು. ಆದ್ದರಿಂದಲೇ ಅವನ ಬಾಯಿ ಅವನಿಗೆ ತಿಳಿಯದಂತೆ 'ಈ ಸಲ ಇಳಿಯೊಲ್ಲ' ಎಂದಿತು. ಆದರೆ ತಕ್ಷಣವೆ ಎಂದಿನಂತೆ ಆ ಕಡೆ ಗಮನ ಕೊಡದೆ ಕಣ್ಣು ಪುಸ್ತಕದ ಕಡೆ ಹೊರಳಿತು. ರಾಯರು 'ಸರಿ, ಡಿಸ್ಟರ್ಬ್ ಮಾಡ್ದೆ, ಓದ್ಕೊಳ್ಳಿ ಓದ್ಕೊಳ್ಳಿ' ಎನ್ನುತ್ತ ಬಾಗಿಲನ್ನು ಮುಚ್ಚಿಕೊಂಡು ಹೊರಟು ಹೋದರು. ಕಣ್ಣು ಚರಿತ್ರೆಯ ಪುಸ್ತಕವನ್ನು ನೋಡುತ್ತಿದ್ದರೂ ಮನಸ್ಸು ಅದೇ ಆಲೋಚನೆಯಲ್ಲಿ ತೊಡಗಿತ್ತು. ರಾಯರ ಮನೆಯ ಪಡಸಾಲೆಯ ಗಡಿಯಾರ 'ಢಣ್ ಢಣ್ ಢಣ್ ಢಣ್' ಎಂದು ನಾಲ್ಕು ಬಡಿದಾಗ ರಾಮಸ್ವಾಮಿಗೆ ಎಚ್ಚರವಾಯಿತು. ಅವನು ಚರಿತ್ರೆಯ ಪುಸ್ತಕದಲ್ಲಿ ಇನ್ನೂ ಒಂದು ಪುಟವನ್ನೂ ಓದಿರಲಿಲ್ಲ.

"ಛೆ, ನಾಲ್ಕಾಯಿತು." ಎಂದು ಬೆಚ್ಚಿ ನೆಟ್ಟಗೆ ಕುಳಿತುಕೊಂಡ. ಹೊಳೆನರಸೀಪುರದ ಯೋಚನೆಯನ್ನು ಕೊಡವಿಹಾಕಿ, ಪರೀಕ್ಷೆಯ ವಿದ್ಯಾರ್ಥಿಯಾದ.

೩

ಬುಧವಾರ ಬಂತು. ರಾಮುಸ್ವಾಮಿ ಬೆಳಗಿನ ಜಾವ ಅಷ್ಟು ಹೊತ್ತಿಗೇ ಎದ್ದು ಹಿಂದುಗಡೆ ಹೋಗಿ ನಲ್ಲಿಯಲ್ಲಿ ಮುಖ ತೊಳೆದು ಕೊಂಡು ಬಂದ. ಅರಸೀಕೆರೆ ರೈಲು ಏಳೂ ಕಾಲು ಗಂಟೆಗೆ ಹೊರಡು ತ್ತದೆ. ನಲ್ಲಿಯ ಶಬ್ದ ಕೇಳಿದ ಕೂಡಲೆ ಮಾಧವರಾಯರು ಎದ್ದು ಬಂದರು. ಇನ್ನೂ ನಸುಕು ಹರಿದಿರಲಿಲ್ಲ.

"ಎಷ್ಟು ಗಂಟೆ ರಾಮುಸ್ವಾಮಿ?" ರಾಯರು ಕೇಳಿದರು.

"ನಮಸ್ಕಾರ ಸಾರ್" ರಾಮುಸ್ವಾಮಿ ಮುಖ ಒರಸಿಕೊಳ್ಳುತ್ತ ಹೇಳಿದ,

"ಐದು ಇರಬಹುದು. ನಾನು ಎದ್ದಾಗ ನಿಮ್ಮ ಗಡಿಯಾರ ಒಂದು ಹೊಡೀತು. ಆಗ ನಾಲ್ಕೂವರೆ ಅಂತ ಕಾಣುತ್ತೆ"

"ಅಂತ ಕಾಣುತ್ತೆ ಏನು, ನಾಲ್ಕೂವರೆ ಅನ್ನೋದು ಖಂಡಿತ ಗೊತ್ತಿಲ್ಲವೆ. ಮೂರೂವರೆ ಆಗಿಬಿಟ್ಟಿದ್ದರೆ ಏನು ಮಾಡ್ತೀರಿ?"

"ಇಲ್ಲ ಇಲ್ಲ. ನಾಲ್ಕು ಹೊಡೆದಾಗ ನನಗೆ ಸ್ವಲ್ಪ ಎಚ್ಚರವಾಗೇ ಇತ್ತು. ಚೆನ್ನಾಗಿ ನೆನಪಿದೆ."

"ಇರಬಹುದು. ಯಾಕೆ ಹೇಳಿದೇ ಅಂದರೆ—ನಾನು ಶ್ರೀರಂಗ ಪಟ್ಟಣದಲ್ಲಿ ಒಂದು ಸಲ ಹೊಳೇ ಸ್ನಾನಕ್ಕೆ ಹೋಗಿದ್ದಾಗ ಬೆಳಗಿನ ಜಾವ ಐದೂವರೆ ಆಯ್ತು ಅಂದ್ಕೊಂಡು ಗಡಿಯಾರ ನೋಡ್ದೆ ಹೊರಟ್ಹೋದೆ. ಪಂಚೇ ಒಕ್ಕೊಂಡೆ, ಸ್ನಾನಮಾಡ್ದೆ, ಎಷ್ಟೊತ್ತಾದರೂ ಬೆಳಗಾಗೊ ಸೂಚನೇನೇ ಕಂಡು ಬರ್ಲಿಲ್ಲ! ಪೂರ್ವದಿಕ್ಕಿನಲ್ಲಿ ಸ್ವಲ್ಪವಾದರೂ ಬೆಳಕಿನ ಸುಳಿವು ಕಾಣಬೇಡವೆ? ಇಲ್ಲ. ಆಮೇಲೆ ಬೇರೆ ಯಾರೂ ಹೊಳೆಕಡೇನೇ ಬರ್ಲಿಲ್ಲ. ಅನುಮಾನ ಬಂತು. ಯಾಕೋ ಒಂದು ತರಹ ದಿಗಿಲಾಯ್ತು. ಸರಸರ ಬಟ್ಟೆ ಹಿಂಡಿಕೊಂಡು ಬೇಗಬೇಗ ಮನೆಗೆ ಬಂದ್ಬಿಟ್ಟೆ. ದಾರೀ ಲಾದರೂ ಯಾರಾದರೂ ಸಿಕ್ಕಬೇಡವೆ? ಒಬ್ಬರ ಸುಳಿವೂ ಕಾಣಿಸಲಿಲ್ಲ, ಆಶ್ಚರ್ಯವಾಯ್ತು. ನಾನು ಇಳಿದುಕೊಂಡಿದ್ದ ರೂಮಿನಲ್ಲಿ ಗಡಿಯಾರ

ಇರ್ಲಿಲ್ಲ, ಆಮೇಲೆ ನನ್ನ ಅಳಿಯನ್ನ ಎಬ್ಬಿಸಿ ಒಳಗೆ ನೋಡಿದಾಗ ಗಡಿಯಾರ ಆಗತಾನೆ 'ಢಣ್' ಅಂತ ಒಂದೂವರೆ ಹೊಡೀತು."

"ಸರಿ"

"ಅಲ್ಲ ಮಾತಿಗೆ ಹೇಳಿದೆ. ಈಗ ಹಾಗೇನೂ ಆಗಿಲ್ಲ, ಹೆದರ್ಕೊ ಬೇಡಿ. ನಾನು ಗಡಿಯಾರ ನೋಡಿಕೊಂಡೇ ಬಂದಿದೀನಿ. ಐದು ಗಂಟೆಗೆ ಐದು ನಿಮಿಷ ಇದೆ." ಎಂದು ರಾಯರು ನಲ್ಲಿ ತಿರುಗಿಸಿದರು. ನಲ್ಲಿಯ ನೀರು ಬಹಳ ರಭಸವಾಗಿ ಬರುತ್ತಿದ್ದುದರಿಂದ ಸ್ವಲ್ಪ ಸಣ್ಣದುಮಾಡಿ "ರೈಲು ಎಷ್ಟೊತ್ತಿಗೆ ಹೊರಡೋದು ?" ಎಂದು ಕೇಳಿದರು.

"ಏಳೂಕಾಲಿಗೆ"

"ಏಳೂಕಾಲಿಗೆ ಹೊರಡೋಕೆ ಐದು ಗಂಟೇಗೇ ರೆಡಿ ಆಗಬೇಕೆ ?"

"ಇಲ್ಲ. ನಾನು ಇನ್ನೂ ಸಾಮಾನು ಕಟ್ಟಿಲ್ಲ. ಪುಸ್ತಕಗಿಸ್ತಕ ಎಲ್ಲ ಹಾಗೇ ಇದೆ. ಅದೂ ಅಲ್ದೆ ಗಾಡಿ ಸಿಕ್ಕೊಲ್ಲವಲ್ಲ. ಮೊದಲು ಅದನ್ನ ಕರ್ಕೊಂಡು ಬರೋಕೆಬೇರೆ ಒಂದು ರೌಂಡು ಹೋಗಿಬರಬೇಕು."

"ಗಾಡೀಗೇನು. ಸಿಕ್ಕುತ್ತೆ. ಸಿದ್ದಪ್ಪಾ ಸ್ಕ್ವೇರ್ ಹತ್ತಿರ ಹೋಗಿ ನೋಡಿದರೆ ಸಿಕ್ಕುತ್ತೆ. ತಡೀರಿ ನಮ್ಮ ನಂಜನ್ನೆಬ್ಬಿಸ್ತೀನಿ. ಅವನು ಗಾಡೀನ ಕರ್ಕೊಂಡು ಬರ್ತಾನೆ."

"ಬೇಡಬೇಡ. ನಾನೇ ಹೋಗಿಬರ್ತೀನಿ."

"ಇಲ್ಲ ಇಲ್ಲ. ಎಬ್ಬಿಸೋಣ. ಒಂದು ವೇಳೆ ಗಾಡಿ ಸಿಕ್ಕದೇ ಇದ್ದರೆ ಅವನೇ ನಾಲ್ಕು ಹೆಜ್ಜೆ—ಬಂದು ಸಾಮಾನು ತಂದುಕೊಡ್ತಾನೆ. ಏನು ಮಹಾ, ಒಂದು ಟ್ರಂಕು, ಹಾಸಿಗೆ"

"ಛೆ ಛೆ. ಅವನ್ಯಾಕೆ!"

"ಏನಾಯ್ತು, ಹಾಗಂದರೇನು ? ಬರ್ತಾನೆ"

"ಪರವಾಯಿಲ್ಲ. ಅವನನ್ಯಾಕೆ ಎಬ್ಬಿಸ್ತೀರಿ ?"

"ಬಿಸಿನೀರು ಬೇಕೇನು ?"

"ಏನೂ ಬೇಡ."

"ಸ್ನಾನ ಮಾಡೊಲ್ವೆ?"

"ಇಲ್ಲ. ಊರಲ್ಲೇ ಮಾಡ್ತೀನಿ. ಹೇಗಿದ್ದರೂ ರೈಲಿನಲ್ಲಿ ಹೋದ ಮೇಲೆ ಮತ್ತೆ ಸ್ನಾನ ಮಾಡಬೇಕು ಅನ್ನಿಸುತ್ತೆ."

"ರೈಲು ಎಷ್ಟೊಟ್ಹೊತ್ತಿಗೆ ಹಾಸನ ತಲಪೋದು?"

"ಹನ್ನೊಂದೂವರೆ ಆಗಬಹುದು."

"ಹೊಳೆನರಸೀಪುರದಲ್ಲಿ ಇಳಿಯಲ್ವೆ?"—ಹಲ್ಲು ತಿಕ್ಕುತ್ತಿದ್ದ ಬೇವಿನ ಕಡ್ಡಿಯನ್ನು ಬಾಯಿಂದ ಹೊರಗೆ ತೆಗೆದು ರಾಯರು ಕೇಳಿದರು.

ಈ ಪ್ರಶ್ನೆಯನ್ನು ಅಂದು ರಾಯರು ಕೇಳೇ ಕೇಳುತ್ತಾರೆ, ಎಂದು ರಾಮಸ್ವಾಮಿ ಊಹಿಸಿದ್ದ; ಅವನ ಊಹೆಯಂತೆಯೇ ರಾಯರು ಕೇಳಿದರು.

ರಾಮಸ್ವಾಮಿ "ಇಲ್ಲ, ಈಗ ಇಳಿಯೊಲ್ಲ" ಎಂದ.

"ಆಮೇಲೆ ಹೋಗ್ತೀರಾ?"

"ನೋಡಬೇಕು."

"ಹೋಗಿ. ಹೋಗಿ ಬೇಗ ಮನೇಗೆ ಕರ್ಕೊಂಡ್ಬನ್ನಿ. ಮೊನ್ನೆ ಮೊನ್ನೆವರೆಗೂ ನನಗೆ ಈ ವಿಷಯ ತಿಳಿದಿರಲಿಲ್ಲ. ಅಚ್ಚಂಭಟ್ಟರ ಕಾಗದ ಬಂದ ಮೇಲೆ ಎಲ್ಲ ಗೊತ್ತಾಯ್ತು. ಬಹಳ ವ್ಯಥೆಯಾಯ್ತು. ನಿಮಗೆ ಹೇಳೋಣಾಂತಿದ್ದೆ. ಆಮೇಲೆ ಹೇಳಿದರಾಯ್ತು, ಹೇಳಿದರಾಯ್ತು ಅಂದುಕೊಂಡು ಸುಮ್ಮನಿದ್ದುಬಿಟ್ಟೆ. ನೋಡಿ ಇವತ್ತು ಹೇಳ್ತೀನಿ. ನನ್ನ ಮಾತು ಕೇಳಿ. ಈ ರೀತಿ ಮಾಡಬಾರದು. ಒಳ್ಳೇದಲ್ಲ. ಹಾಗೆಲ್ಲ ಭವಿಷ್ಯಾನ್ನ ನಂಬಿಕೊಂಡು ಈ ರೀತಿ ಮಾಡೋದು ತಪ್ಪು. ಸರಿಯಲ್ಲ. ನಿಮ್ಮ ತಂದೆಗೆ ಬುದ್ಧಿ ಹೇಳಿ. ಬೇಕಾದರೆ ಅಚ್ಚಂಭಟ್ಟರ ಬಾಯಲ್ಲಿ ಹೇಳಿಸಿ. ಇಲ್ದಿದ್ದರೆ ನಾನೂ ನಿಮ್ಮ ತಂದೆಗೆ ಬರೀತೇನೆ. ಈಗ ಹ್ಯಾಗಿದ್ದರೂ ಓದು ಮುಗಿದಿದೆ. ಇನ್ನು ಎಲ್ಲಾದರೂ ಕೆಲಸ ಸಿಕ್ಕೇ ಸಿಕ್ಕುತ್ತೆ. ಇರೋದು ಇಬ್ಬರು....ನೀವು ನಿಮ್ಮ ತಂದೆ. ಹೆಂಡತೀನ ಮನೇಗೆ ಕರಸಿಕೊಂಡು ಸುಖವಾಗಿ ಸಂಸಾರ ನಡಸಿ. ಹೀಗಿದ್ದರೆ ನಿಮಗೂ ಸುಖವಿಲ್ಲ. ಪಾಪ. ಆ ಹುಡುಗೀಗೂ ಸುಖವಿಲ್ಲ. ಪಾಪ, ಆಕೆ ಮನಸ್ಸಿಗೆ ಎಷ್ಟು ನೋವಾಗಿದೆಯೊ!"

ರಾಮುಸ್ವಾಮಿ ಸುಮ್ಮನೆ ನಿಂತು ರಾಯರ ಮಾತನ್ನು ಕೇಳಿದ. ರಾಯರು ಅದುವರೆಗೂ ಆ ವಿಷಯುವನ್ನು ಪ್ರಸ್ತಾಪಿಸಿರಲಿಲ್ಲ. ಎರಡು ವರುಷ ಅವರ ಮನೆಯಲ್ಲಿ ಕಳೆದಿದ್ದರೂ ರಾಯರು ಇವನ ಮದುವೆಯ ವಿಷಯವನ್ನು ಎತ್ತಿರಲಿಲ್ಲ. ಒಮ್ಮೆ ಯಾವುದೋ ಹೆಣ್ಣಿನ ವಿಷಯ ಮಾತಾಡುವಾಗ "ರಾಮುಸ್ವಾಮಿ ನಿಮ್ಮದು ಯಾವ ಗೋತ್ರಾನ್ರಿ?" ಎಂದು ಕೇಳಿದರು. ಆಗ ರಾಮುಸ್ವಾಮಿ "ನನಗೆ ಮದುವೆ ಆಗಿದೆ" ಎಂದ. ರಾಯರು "ಸುಳ್ಳು ಹೇಳ್ತೀರಾ!" ಎಂದು ಹಾಸ್ಯ ಮಾಡಿದರು. "ಇಲ್ಲ. ನಿಜವಾಗೂ ಮದುವೆ ಆಗಿದೆ" ಎಂದು ಮತ್ತೆ ಹೇಳಿದ. ರಾಯರು "ಹೆಣ್ಣು ಯಾವೂರಿಂದು?" ಎಂದು ಕೇಳಿದರು. ರಾಮುಸ್ವಾಮಿ "ಹೊಳೆನರಸೀಪುರದ್ದು" ಎಂದ. "ಇನ್ನೂ ಮನೇಗೆ ಬಂದಿಲ್ಲವೊ?" ಎಂದಾಗ "ಇಲ್ಲ. ನನ್ನ ಓದು ಮುಗೀಲೀಂತ" ಎಂದು ರಾಮುಸ್ವಾಮಿ ಅರ್ಧಮಾತಾಡಿ ಸುಳ್ಳು ಹೇಳಿದ್ದ. ಆಮೇಲೆ ರಾಯರು ಮತ್ತೆ ಆ ವಿಷಯ ಪ್ರಸ್ತಾಪಿಸಿರಲಿಲ್ಲ.

ಅಚ್ಚಂಭಟ್ಟರು ರಾಮುಸ್ವಾಮಿಗೆ ಎರಡು ಕಾಗದ ಬರೆದರು. ಆದರೆ ಅವನಿಂದ ಉತ್ತರವೇ ಬರಲಿಲ್ಲ. ಆಗ ಅವರು ಬುದ್ಧಿ ಉಪಯೋಗಿಸಿ ಮಾಧವರಾಯರಿಗೇ ಒಂದು ಕಾಗದವನ್ನು ಬರೆದರು. ಅದೂ ಆ ಕಾಗದ ರಾಮುಸ್ವಾಮಿಯ ಪರೀಕ್ಷೆ ಕೇವಲ ಎಂಟು ದಿನ ಇದೆ ಎನ್ನುವಾಗ ಬಂತು. ರಾಯರು 'ಈಗ ಹೇಳುವುದು ಸರಿಯಲ್ಲ' ಎಂದುಕೊಂಡು ಸುಮ್ಮನಿದ್ದರು. ಪರೀಕ್ಷೆ ಮುಗಿದ ದಿನದಿಂದ ಯಾವಾಗ ಹೇಳೋಣ ಎಂದು ಯೋಚಿಸಿ ಯೋಚಿಸಿ, ಕೊನೆಗೆ ಈ ಸಮಯ ಉಪಯೋಗಿಸಿ ಕೊಂಡರು.

ರಾಮುಸ್ವಾಮಿ "ಇಲ್ಲ. ಪರೀಕ್ಷೆ ಮುಗೀಲಿ ಅಂತ ಸುಮ್ಮನಿದ್ದೆ. ಈಗ ಊರಿಗೆ ಹೋದ ಮೇಲೆ ಮನೆಗೆ ಕರ್ಕೊಂಡ್ಬರ್ತೇವೆ." ಎಂದ.

"ಹಾಗಾದರೆ ಅಸಮಾಧಾನ ಏನು ಇಲ್ಲವೊ?"

"ಇಲ್ಲ ಇಲ್ಲ."

"ಮತ್ತೆ ಯಾಕೆ ಇಷ್ಟು ದಿನ ನೀವು ಹೊಳೆನರಸೀಪುರಕ್ಕೇ ಹೋಗದೆ........"

"ನಮ್ಮ ತಂದೇಗೂ ನಮ್ಮ ಮಾವನವರಿಗೂ ಆಗೊಲ್ಲ. ಅವರ ಒತ್ತಾಯದಿಂದ ನಾನು ಹಾಗೆ ಇರಬೇಕಾಗಿತ್ತು. ನಮ್ಮ ತಂದೆ ನನ್ನನ್ನ ಓದಿಸ್ತಾ ಇದ್ದರು. ಎದುರು ವಾದಿಸಿದರೆ ನನಗೇ ಕಷ್ಟ. ಓದು ಮುಗೀಲಿ. ಆಮೇಲೆ ಅವರಿಗೆ ಹೇಳೋಣಾಂತ ಸುಮ್ಮನಿದ್ದೆ, ಅಷ್ಟೆ. ನನಗೇನೂ ಅಸಮಾಧಾನವಿಲ್ಲ."

ರಾಮಸ್ವಾಮಿಯ ಈ ಮಾತು ರಾಯರಿಗೆ ಸರಿಯಾಗಿ ಕಾಣಿಸಿತು ; ಈ ಉತ್ತರದಿಂದ ಅವರಿಗೆ ಸಮಾಧಾನವೂ ಆಯಿತು.

"ಸರಿ. ಹೋಗಿ ಸಾಮಾನು ಪ್ಯಾಕ್ ಮಾಡಿ. ನಾನು ನಂಜನ್ನೆಬ್ಬಿಸಿಕೊಂಡು ಬರ್‍ತೀನೆ."—ನಲ್ಲಿಯ ನೀರಿಗೆ ಕಾಲು ಹಿಡಿಯುತ್ತಾ ಹೇಳಿದರು.

ಬುದ್ಧಿ ಉಪಯೋಗಿಸಿ ರಾಯರಿಗೆ ಸರಿಯಾದ ಉತ್ತರ ಕೊಟ್ಟ ರಾಮಸ್ವಾಮಿಯ ಮನಸ್ಸಿಗೆ ಸಮಾಧಾನವಾಗಿತ್ತು. ತಾನು ಆ ರೀತಿ ನಿರ್ಧರಿಸಿರಲಿಲ್ಲದಿದ್ದರೂ ಹಾಗೆ ಮಾಡುತ್ತೇನೆ, ಎಂದು ಬಾಯಿ ಹೇಳಿ ರಾಯರನ್ನು ಸಮಾಧಾನಪಡಿಸಿತ್ತು. ಕೋಣೆಗೆ ಬಂದು ಎಲ್ಲ ಬಟ್ಟೆಗಳನ್ನೂ ಹಾಸಿಗೆಗೆ ಹಾಕಿದ. ಕೊನೆಯ ಮನೆಯ ರಾಜಣ್ಣ ಪಾಲಿಟಿಕ್ಸ್ ನೋಟ್ಸ್ ಬೇಕು ಅಂತ ಕೇಳಿದ್ದ. ಪಾಸಾಗುತ್ತೆ ಎಂಬ ನಂಬಿಕೆ ಇದ್ದರೂ ನೋಟ್ಸ್ ಕೊಡಲು ರಾಮಸ್ವಾಮಿಗೆ ಮನಸ್ಸಾಗಿರಲಿಲ್ಲ. ಆದರೆ ಅವನ ಬಲವಂತದಿಂದ ನೋಟ್ಸ್ ಕೊಡಲು ಒಪ್ಪಿದ್ದ. ಒಂದು ವೇಳೆ ರಾಮಸ್ವಾಮಿಗೆ ಫೇಲಾದರೆ ರಾಜಣ್ಣ ಆ ನೋಟ್ಸನ್ನು ವಾಪಸು ಕೊಡಬೇಕು, ಎಂದು ಇಬ್ಬರಿಗೂ ಮಂಗಳವಾರ ರಾತ್ರಿ ಮಾತಾಗಿತ್ತು. ರಾಮಸ್ವಾಮಿ ಪಾಲಿಟಿಕ್ಸ್ ನೋಟ್ಸನ್ನು ಮಾತ್ರ ಹೊರಗೆ ತೆಗೆದು ಉಳಿದ ಪುಸ್ತಕಗಳನ್ನೆಲ್ಲ ಟ್ರಂಕಿಗೆ ತುಂಬಿದ. ಖಾಲಿಯಾಗಿದ್ದ ಮಸಿಕುಡಿಕೆ, ಕೊಬ್ಬರಿಯೆಣ್ಣೆ ಸೀಸೆ, ಗಾಜಿನ ಲೋಟ, ಷೇವಿಂಗ್ ಸೆಟ್ಟು ಮುಂತಾದ ಎಲ್ಲ ಚಿಲ್ಲರೆಪಲ್ಲರೆ ಸಾಮಾನನ್ನೂ ಪೆಟ್ಟಿಗೆಯಲ್ಲಿ ತುಂಬಿದ್ದಾಯಿತು. ಹಗ್ಗದ ಮೇಲಿದ್ದ ನಿಕ್ಕರ್, ಬನೀನು ಮತ್ತು ಟವಲನ್ನೂ ಹಾಸಿಗೆಯಲ್ಲಿ ಹಾಕಿದ್ದಾಯಿತು. ಧರಿಸಬೇಕಾದ ಅಂಗಿಯನ್ನು ಧರಿಸಿಕೊಂಡಿದ್ದ,

ಪಂಚೆ ಅದೇ ಇರಲಿ ಎಂದುಕೊಂಡಿದ್ದ. ಕೋಟು ಗೋಡೆಯ ಮೇಲೇ ಇತ್ತು. ಮುಖ ತೊಳೆದುಕೊಂಡಾಗ ತಲೆಗೂದಲಿಗೆ ಚೆನ್ನಾಗಿ ನೀರು ಹಾಕಿಕೊಂಡಿದ್ದ. ಕೊಬ್ಬರಿಯೆಣ್ಣೆಯನ್ನೂ ಹಚ್ಚಿಕೊಂಡಿದ್ದಾಗಿತ್ತು, ಆದರೆ ತಲೆ ಬಾಚಿಕೊಳ್ಳುವುದೇ ಮರೆತುಹೋಗಿತ್ತು. ಕಿಟಕಿಯಲ್ಲಿಟ್ಟಿದ್ದ ಪುಟ್ಟ ಕನ್ನಡಿ ಜ್ಞಾಪಕಕ್ಕೆ ಬಂದಾಗ ಅದರಲ್ಲಿ ಮುಖ ನೋಡಿಕೊಂಡ. ಕೋಟಿನ ಜೇಬಿನಲ್ಲಿದ್ದ ಬಾಚಣಿಗೆಯನ್ನು ಹೊರಗೆ ತೆಗೆದು ತಲೆ ಬಾಚಿ ಕೊಂಡಿದ್ದಾಯಿತು. ಹೊರಗೆ ಉಳಿದಿದ್ದ ಕನ್ನಡಿಯನ್ನೂ ಪೆಟ್ಟಿಗೆಯಲ್ಲಿ ಹಾಕಿ, ಇನ್ನೇನಾದರೂ ಉಳಿದಿದೆಯೆ ಎಂದು ಒಮ್ಮೆ ಸುತ್ತ ನೋಡಿ, ಟ್ರಂಕಿನ ಬೀಗ ಹಾಕಿದ. ಪರೀಕ್ಷೆಯ ದಿನಗಳಲ್ಲಿ ರಫ್ ವರ್ಕ್ ಮಾಡಿದ ಕಾಗದದ ಚೂರಿನ ಉಂಡೆಗಳು ಮೂಲೆಯಲ್ಲಿ ಬಿದ್ದಿದ್ದುವು; ಹತ್ತಿರದಲ್ಲಿಯೇ ತುಂಡು ಪೊರಕೆಯೊಂದು ಮಲಗಿತ್ತು. ರಾಮುಸ್ವಾಮಿ ಮೇಲೆ ನೋಡಿದ. ಬಟ್ಟೆ ಒಣಗಿಹಾಕಲು ಮೂಲೆ ಮೂಲೆಗೆ ಅಡ್ಡಲಾಗಿ ಕಟ್ಟಿದ್ದ ಹಗ್ಗ ಕಾಣಿಸಿತು. ಹಾಸಿಗೆಯಲ್ಲಿ ಇನ್ನೇನನ್ನೂ ಹಾಕಬೇಕಾದ್ದಿಲ್ಲ ಎಂದು ಕೊಂಡಮೇಲೆ ಆ ಹಗ್ಗ ಬಿಚ್ಚಿ, ಹಾಸಿಗೆಯನ್ನು ಕಟ್ಟಿದ. ರಾಯರ ಮನೆಯ ಗಡಿಯಾರ ಆರು ಗಂಟೆ ಹೊಡೆಯಿತು. ಹೊತ್ತಾಯಿತೆಂದು ಕೊಂಡು ತೋಳಿಗೆ ಕೋಟು ಸಿಕ್ಕಿಸಿಕೊಂಡ. ಕೋಣೆಯ ಬಾಗಿಲು ತೆರೆದಹಾಗಾಯಿತು. ಹಿಂತಿರುಗಿ ನೋಡಿದ. ಜಟಕಾ ಗಾಡಿಯ ಸಾಬಿ ಛಾಟಿ ಹಿಡಿದು ನಿಂತಿದ್ದ. ಆಗಲೆ ಚೆನ್ನಾಗಿ ಬೆಳಕಾಗಿತ್ತು. ರಾಮುಸ್ವಾಮಿ ಸಾಮಾನು ಪ್ಯಾಕು ಮಾಡುವುದರೊಳಗಾಗಿ ನಂಜ ಎದ್ದು ಜಟಕಾ ಗಾಡಿ ಯನ್ನು ತೆಗಸಿಕೊಂಡು ಬಂದಿದ್ದ. ಜಟಕಾ ಸಾಬಿ ಟ್ರಂಕು ಹಾಸಿಗೆ ಯನ್ನು ತೆಗೆದುಕೊಂಡುಹೋಗಿ ಗಾಡಿಯಲ್ಲಿಟ್ಟ. ರಾಮುಸ್ವಾಮಿ ಪಾಲಿ ಟಿಕ್ಸ್ ನೋಟ್ಸ್ ಹಿಡಿದುಕೊಂಡು ಹೊರಗೆ ಬಂದ. ಅಷ್ಟು ಹೊತ್ತಿಗೆ ಸರಿಯಾಗಿ ರಾಯರು ಒಗೆದ ಪಂಚೆ ಬನೀನು ಧರಿಸಿಕೊಂಡು ವ್ಹೆರಾಂಡಾಕ್ಕೆ ಬಂದರು.

"ಬನ್ನಿ ರಾಮುಸ್ವಾಮಿ ಸ್ವಲ್ಪ ಒಳಗೆ" ಎಂದು ಕರೆದರು.

ರಾಮುಸ್ವಾಮಿ ರಾಯರ ಮನೆಯ ಪಡಸಾಲೆಯನ್ನು ಪ್ರವೇಶಿಸಿದ. ರಾಯರು "ಕೂತ್ಕೊಳ್ಳಿ ಸ್ವಲ್ಪ" ಎಂದು ಕುರ್ಚಿ ತೋರಿಸಿದರು.

ರಾಮುಸ್ವಾಮಿ "ಗಂಟೆ ಆಗಲೆ ಆರಾಯ್ತು" ಎಂದು ಕೂತುಕೊಂಡ. ರಾಯರು "ಪರವಾಯಿಲ್ಲ. ಇನ್ನೂ ಒಂದೂಕಾಲು ಗಂಟೆ ಇದೆಯಲ್ಲ. ಆಗಲೇ ಗಾಡಿ ಕೂಡ ಸಿದ್ಧವಾಗಿದೆ. ಕೂತ್ಕೊಳ್ಳಿ, ಸ್ವಲ್ಪ ಕಾಫಿ ತೆಗೊಳ್ತೀರಂತೆ" ಎಂದರು.

"ಬೇಡ ಬೇಡ. ನಾನು ಕಾಫಿ ತಗೊಳಲ್ವಲ್ಲ?"—ಎಂದ.

"ಇವತ್ತು ತಗೊಳ್ಳಿ. ಪರವಾಯಿಲ್ಲ"

ರಾಮುಸ್ವಾಮಿ ಕಾಫಿ ಕುಡಿಯುವುದನ್ನು ಸಂಪೂರ್ಣವಾಗಿ ಬಿಡಲಾಗಿರಲಿಲ್ಲ. ಸ್ನೇಹಿತರ ಬಲವಂತದಿಂದ ಆಗಾಗ ಕುಡಿಯಲೇ ಬೇಕಾಗುತ್ತಿತ್ತು, ಕುಡಿಯುತ್ತಿದ್ದ. ತಾನೇ ಸ್ವತಃ ದುಡ್ಡು ಕೊಟ್ಟಾಗಲೀ, ತಯಾರಿಸಿಕೊಂಡಾಗಲಿ ಕಾಫಿ ಕುಡಿಯುವ ಗೋಜಿಗೆ ಹೋಗಿರಲಿಲ್ಲ. ಅಷ್ಟು ದಿನ ಆಶ್ರಯ ನೀಡಿದ ರಾಯರ ಸಂತೋಷಕ್ಕಾಗಿ ಒಂದು ಲೋಟ ಕಾಫಿ ಕುಡಿಯಲು ರಾಮುಸ್ವಾಮಿ ಒಪ್ಪಿದ. ರಾಯರು ಒಳಗೆ ಹೋಗಿಬಂದರು. ಅವರ ಮನೆಯ ಅಡಿಗೆ ಭಟ್ಟ ನರಸಿಂಹ ಒಂದು ತಟ್ಟೆಯಲ್ಲಿ ಎರಡು ಲೋಟ ಕಾಫಿ ತಂದ. ರಾಯರು ರಾಮುಸ್ವಾಮಿ ಕುಳಿತಿದ್ದ ಕುರ್ಚಿಯ ಹತ್ತಿರದಲ್ಲಿಯೇ ಇದ್ದ ಸೋಫಾದ ಮೇಲೆ ಕುಳಿತಿದ್ದರು. ರಾಮುಸ್ವಾಮಿ ಒಂದು ಲೋಟ ತೆಗೆದುಕೊಂಡಮೇಲೆ ರಾಯರು ತೆಗೆದುಕೊಂಡರು.

"ಹ್ಞಾ, ಏನು ಇವತ್ತು ಹೊರಟ್ಬಿಟ್ರೀರಿ. ಅಂತೂ ಗೆದ್ದಿರಿ, ಪರವಾಯಿಲ್ಲ." ರಾಯರು ಒಂದು ಗುಟುಕು ಕಾಫಿ ಕುಡಿದು ಹೇಳಿದರು.

"ಎಲ್ಲ ತಮ್ಮ ಆಶೀರ್ವಾದ"

"ನಂದೇನು. ಎಲ್ಲ ನಿಮ್ಮ ಪ್ರಯತ್ನ"

"ಏನಿಲ್ಲ. ತಾವು ಇಂಥ ಆಶ್ರಯ, ಈ ಸಹಾಯ ನೀಡದೇ ಇದ್ದಿದ್ದರೆ ನನ್ನ ಓದು ಮುಗೀತಿರಲಿಲ್ಲ. ತಮ್ಮಿಂದ ನನ್ನ ಓದು ಮುಗೀತು." ಎಂದು ರಾಯರ ಔದಾರ್ಯವನ್ನು ಪ್ರಶಂಸಿಸಿದ. ರಾಯರು ಸುಮ್ಮನಿದ್ದರು.

ರಾಮುಸ್ವಾಮಿ "ನನ್ನ ಸ್ನೇಹಿತ ರಾಜಣ್ಣ ತಮಗೆ ಗೊತ್ತಲ್ಲವೆ?" ಎಂದು ರಾಯರನ್ನು ಕೇಳಿದ.

"ಹೌದು ಗೊತ್ತು, ಅದೇ ಕೊನೇಮನೆ ರಾಜಣ್ಣ."

"ಹೌದು. ಅವನಿಗೆ ಈ ಪುಸ್ತಕ ಬೇಕಂತೆ. ಆರು ಗಂಟೇಗೆ ಬರ್‍ತೀನಿ ಅಂದಿದ್ದ. ಇನ್ನೂ ಬರ್‍ಲಿಲ್ಲ. ನಾನು ಹೊರಡೋದರೊಳಗೆ ಬಂದರೆ ಸರಿ. ಇಲ್ಲದಿದ್ದರೆ ಆಮೇಲೆ ಅವನು ಇಲ್ಲಿಗೆ ಬಂದಾಗ ದಯವಿಟ್ಟು ಇದನ್ನ ಅವನಿಗೆ ತಲಪಿಸಿಬಿಡ್ತೀರ?" ಎಂದು ಆ ಪಾಲಿಟಿಕ್ಸ್ ನೋಟ್ಸನ್ನು ರಾಯರ ಕೈಯಲ್ಲಿಟ್ಟ. ರಾಯರು "ಆಗಲಿ ಪರವಾಯಿಲ್ಲ" ಎಂದು ಅದನ್ನು ತೆಗೆದುಕೊಂಡರು. ರಾಮಸ್ವಾಮಿ ಕಾಫಿಯನ್ನು ಮುಗಿಸಿ ಬಟ್ಟಲನ್ನು ಕುರ್ಚಿಯ ಹತ್ತಿರದಲ್ಲಿಯೇ ನೆಲದಮೇಲಿಟ್ಟ.

ರಾಯರೂ ಕಾಫಿಯನ್ನು ಮುಗಿಸಿದ್ದರು. "ನಾನು ಹೇಳಿದ್ದು ಮರೆಯೊಲ್ಲ ತಾನೆ ?'' ಎಂದರು ರಾಯರು.

ರಾಮಸ್ವಾಮಿ "ಏನು ?'' ಎಂದ.

"ಕಾನ್ವೊಕೇಷನ್‌ಗೆ ಬಂದಾಗ"

"ಪಾಸೊಂದಾಗಲಿ ನೋಡೋಣ"

''ಹಾಗಾದರೆ ಪಾಸಾಗೊಲ್ಲವೆ ?''

"ಪಾಸಾಗುತ್ತೇಂತ ನಾನು ನಂಬಿಕೊಂಡಿದೀನಿ. ಆದರೆ ಅದೃಷ್ಟ ಹೇಗಿದೆಯೋ ನೋಡಬೇಕು.''

"ಆಗುತ್ತೆ. ಪಾಸಾಗದೆ ಏನು. ಅಂತೂ ಕಾನ್ವೊಕೇಷನ್‌ಗೆ ಬಂದಾಗ ಇಲ್ಲೇ ಇಳಿದ್ಕೊಳ್ಳಬೇಕು."

"ಆಗಲಿ''

"ಒಬ್ಬನೇ ಅಲ್ಲ. ಜೊತೇಲಿ ಕರ್‍ಕೊಂಡ್ಬರಬೇಕು. ಆದ್ದರಿಂದ ಇಷ್ಟು ಒತ್ತಿ ಹೇಳ್ತಿರೋದು. ನಮ್ಮ ರೂಮಿನಲ್ಲಿ ಮದುವೆ ಆದ ಹುಡುಗರೇ ಇರಲಿಲ್ಲ. ನೀವೇ ಫಸ್ಟ್! ಕಾನ್ವೊಕೇಷನ್‌ಗೆ ಇಬ್ಬರೂ ಬನ್ನಿ."

"ಆಗಲಿ ನೋಡೋಣ''

"ನೋಡೋಣ ಗೀಡೋಣ ಇಲ್ಲ. ಬರ್‍ತೀನಿ ಅಂತ ಹೇಳಿ''

"ಆಗಲಿ"

''ಅಂದ್ಹಾಗೆ ನಿಮ್ಮ ರಿಜಿಸ್ಟರ್ ನಂಬರೇ ಹೇಳ್ಲಿಲ್ಲ ?"

"ಇನ್ನೂ ರಿಪ್ಪತ್ತು."

"ಪರವಾಗಿಲ್ಲ ಚೆನ್ನಾಗಿ ನೆನಪಿರುತ್ತೆ. ಎರಡು, ಎರಡು, ಸೊನ್ನೆ."

"ಲಕ್ಷಮ್ಮನೋರು ಒಳಗಿದಾರ?" ಎಂದು ರಾಮುಸ್ವಾಮಿ ಎದ್ದು ನಿಂತು ಕೇಳಿದ. ರಾಯರ ಹೆಂಡತಿ ಲಕ್ಷಮ್ಮನವರು ಅಡಿಗೆ ಮನೆಯಲ್ಲಿ ಏನೋ ಮಾಡುತ್ತಿದ್ದರು. ರಾಯರು ಎದ್ದು "ಲೇ" ಎಂದು ಕೂಗುತ್ತ ಒಳಗೆ ಹೋದರು. ಸ್ವಲ್ಪ ಹೊತ್ತಿನಲ್ಲಿಯೆ, ತೆಳ್ಳಗೆ ಬೆಳ್ಳಗೆ ಉದ್ದವಾಗಿರುವ ಲಕ್ಷಮ್ಮ ಮೊಮ್ಮಗಳು ರೋಹಿಣಿಯನ್ನೆತ್ತಿಕೊಂಡು ಬಂದರು. ಅವರು ನೇರವಾಗಿ ಪಡಸಾಲೆಯನ್ನು ಪ್ರವೇಶಿಸಲಿಲ್ಲ. ನಡುವಿನ ಬಾಗಿಲಿಗೆ ಅಡ್ಡಲಾಗಿ ನಿಲ್ಲಿಸಿದ್ದ ತೆರೆಯ ಹಿಂದೆ ನಿಂತುಕೊಂಡರು. ತೆರೆಯ ಅಂಚಿನಲ್ಲಿದ್ದ ಅವರು ಅರ್ಧ ಕಾಣಿಸಿಕೊಂಡಾಗ ಅವರ ಕಿವಿಯ ವಜ್ರದೋಲೆ ಮಿಂಚಿದುವು; ಹಣೆಗೆ ಆಗತಾನೆ ಇಟ್ಟುಕೊಂಡಿದ್ದ ಕುಂಕುಮ ಅವರ ಅರಿಸಿನ ಬಣ್ಣದ ಮುಖಕ್ಕೆ ಚೆನ್ನಾಗಿ ಒಪ್ಪಿತ್ತು. ವಯಸ್ಸಾಗಿದ್ದರೂ ತಲೆಗೂದಲು ಬಿಳುಪಾಗಿದ್ದರೂ ಸೌಂದರ್ಯವನ್ನುಳಿಸಿಕೊಂಡಿರುವ ಲಕ್ಷಮ್ಮ ರಾಮುಸ್ವಾಮಿಗೆ ತುಂಬಾ ಲಕ್ಷಣವಾಗಿ ಕಂಡರು. ಆಕೆಯನ್ನು ನೋಡಿದ ಕೂಡಲೆ ಅವನಿಗೆ ತನ್ನ ತಾಯಿಯ ನೆನಪಾಗುತ್ತಿತ್ತು. ಸೀತಮ್ಮನೂ ಅಷ್ಟೇ ಸುಂದರವಾಗಿದ್ದಳು. ಆಕೆಯ ಮುಖವೂ ಉದ್ದವಾಗಿತ್ತು; ಈಕೆಯ ಮುಖವೂ ಉದ್ದವಾಗಿತ್ತು. ಅಗಲವಾದ ಆ ಎರಡು ಕಿವಿಗಳು ಮಾತ್ರ ಸೀತಮ್ಮನ ಕಿವಿಗಳಂತೆಯೇ ಇದ್ದುವು. ಆಕೆಯ ವಜ್ರದೋಲೆ ನೋಡಿದಾಗಲೆಲ್ಲಾ ರಾಮುಸ್ವಾಮಿ ಆ ಎರಡು ಕಿವಿಗಳನ್ನು ನೋಡಬೇಕಾಗುತ್ತಿತ್ತು. ಹಾಗೆ ನೋಡಿದಾಗಲೆಲ್ಲಾ ತಾಯಿ ಸೀತಮ್ಮನ ನೆನಪಾಗುತ್ತಿತ್ತು.

"ನಾನು ಹೋಗಿಬರ್ತೀನ್ರಮ್ಮ" ಎಂದ.

ಲಕ್ಷಮ್ಮ ತೆರೆಯ ಮರೆಯಲಿಯೇ ನಿಂತು "ಆಗಲಪ್ಪ ಒಳ್ಳೇದು" ಎಂದರು. ರಾಮುಸ್ವಾಮಿ ಮತ್ತು ಅವನಂತೆ ಎಂಟು ವಿದ್ಯಾರ್ಥಿಗಳು ಎರಡು ಮೂರು ವರುಷ ಅವರ ಮನೆಯ ಮುಂದಿನ ಕೊಟಡಿಯಲ್ಲಿ ಜೀವಿಸಿದ್ದರೂ ಲಕ್ಷಮ್ಮ ಆ ಹುಡುಗರ ಮುಂದೆ ತಲೆಯೆತ್ತಿ ನಡೆದಿರಲಿಲ್ಲ. ಆಕೆ

ಹೊರಗೆ ಕಾಣಿಸಿಕೊಳ್ಳುತ್ತಲೇ ಇರಲಿಲ್ಲ. ಆಕೆಯ ಇಬ್ಬರು ಹೆಣ್ಣು ಮಕ್ಕಳೂ ಅಷ್ಟೆ. ಮೊಮ್ಮಕ್ಕಳು ಮಾತ್ರ ಸಲೀಸಾಗಿ ಎಲ್ಲ ಹುಡುಗ ರೊಡನೆಯೂ ಹೊಂದಿಕೊಂಡು ಆಟ ಆಡುತ್ತಿದ್ದರು. ಅದೂ ಅವರು ತಾತನ ಊರಿಗೆ ಬಂದಾಗ.

ರಾಮುಸ್ವಾಮಿ ಲಕ್ಷಮ್ಮನವರಿಗೆ ಹೇಳಿ "ಹುಡುಗರು?" ಎಂದ.

ರಾಯರು "ಹುಡುಗರೆಲ್ಲಿ, ಇನ್ನೂ ಒಬ್ಬರೂ ಎದ್ದೇ ಇಲ್ಲ, ರೋಹಿಣಿ ಒಬ್ಬಳೇ ಎದ್ದಿರೋದು. ಶಶಿ ಎದ್ದಿದ್ದಳು, ಮತ್ತೆ ಮಲಕ್ಕೊಂಡ್ಬಿಟ್ಟಳು'' ಎಂದರು.

ರಾಮುಸ್ವಾಮಿ "ಹಾಗಾದರೆ ಮಕ್ಕಳಿಗೆಲ್ಲ ಹೇಳಿಬಿಡಿ, ಶಶಿ, ರಮೇಶು, ಸರಸು ಎಲ್ಲಾರ್ಗೂ ದಯವಿಟ್ಟು ಹೇಳಿ, ನಾನು ಬರ್ತೀನಿ" ಎಂದು ಹೊರಡಲನುವಾದ.

ರಾಯರು "ಆಗಲಿ ಆಗಲಿ" ಎನ್ನುತ್ತ ಗಡಿಯಾರದ ಕಡೆ ನೋಡಿ "ಇನ್ನೂ ಆರೂಕಾಲು, ಬೇಕಾದಷ್ಟು ಟೈಮಿದೆ" ಎಂದರು.

ರಾಮುಸ್ವಾಮಿ "ಹೌದು. ಆದರೂ ಒಂದರ್ಧ ಗಂಟೆ ಮುಂಚೆ ಹೋಗಿರೋದು ಒಳ್ಳೇದು" ಎಂದು ವೆರಾಂಡಾಕ್ಕೆ ಬಂದ. ರಾಯರೂ ಅವನ ಹಿಂದೆಯೇ ಬಂದರು.

ರಾಮುಸ್ವಾಮಿ "ಪಾಲಿಟಿಕ್ಸ್ ನೋಟ್ಸ್‌ನ ಆ ಕುರ್ಚೀ ಮೇಲೆ ಇಟ್ಟಿದೀನಿ....'' ಎಂದ.

"ಆಯ್ತು ಆಯ್ತು. ಕೊಡ್ತೀನಿ ರಾಜಣ್ಣಂಗೆ'' ಎಂದರು ರಾಯರು.

"ನಾನು ಬರ್ತೀನಿ. ಮಾಧೂರಾಯರೆ, ತಮ್ಮಿಂದ ನನಗೆ ತುಂಬ ಉಪಕಾರ ಆಯಿತು. ತಮ್ಮ ಸಹಾಯಾನ ಮರೆಯೋ ಹಾಗೇ ಇಲ್ಲ'' ಎಂದು ರಾಮುಸ್ವಾಮಿ ಅವರ ಕಾಲಿಗೆ ನಮಸ್ಕಾರ ಮಾಡಲು ಹೋದ. ರಾಯರು "ಛೆ, ಛೆ, ಬೇಡ ಬೇಡ" ಎಂದು ತಡೆದು ನಿಲ್ಲಿಸಿದರು. ರಾಮುಸ್ವಾಮಿ ರಾಯರಿಗೆ ಕೈಮುಗಿದು ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸಿದ.

ರಾಯರು "ಕಾನ್ವೊಕೇಷನ್ನಿಗೆ ಕರ್ಕೊಂಡು ಬರೋದು ಮಾತ್ರ ಮರೀ ಬೇಡಿ. ಖಂಡಿತ ಕರ್ಕೊಂಡ್ಬರ್ಬೇಕು" ಎಂದು ಭುಜ ತಟ್ಟಿ ಮತ್ತೆ ಹೇಳಿದರು.

ರಾಮಸ್ವಾಮಿ ನಕ್ಕು ಸುಮ್ಮನಾದ. ತಾನಿದ್ದ ಕೋಣೆಯ ಕಡೆ ನೋಡಬೇಕೆನ್ನಿಸಿತು. ನೋಡಿದ. ಕೋಣೆಯ ಬಾಗಿಲು ತೆರೆದಿತ್ತು. ರಾಯರು ಇದನ್ನು ನೋಡಿ "ಏನಾದರೂ ಸಾಮಾನು ಬಿಟ್ಟಿಗಿಟ್ಟಿದೀರೋ? —ಎಲ್ಲ ಸಾಮಾನು ತೊಗೊಂಡ್ರೋ?'' ಎಂದು ಕೇಳಿದರು.

ರಾಮಸ್ವಾಮಿ "ಏನಿದೆ ಸಾಮಾನು ಎರಡೇ—ಒಂದು ಹಾಸಿಗೆ ಒಂದು ಟ್ರಂಕು" ಎಂದ.

ರಾಯರು "ಸರಿ. ಹೋದ ಕೂಡಲೆ ಒಂದು ಕಾಗದ ಹಾಕಿ. ಆಮೇಲೆ ಬೆಳಗ್ಗೆ ಹೇಳಿದ್ನಲ್ಲ ಆ ವಿಷಯಕ್ಕೆ ತಪ್ಪೀಲಾಗಿ ಕಾಗದ ಬರೀದೆ ಇರ ಬೇಡಿ. ಅಚ್ಚಂಭಟ್ಟರನ್ನ ಕಂಡರೆ ಅವರಿಗೆ ನನ್ನ ನಮಸ್ಕಾರ ತಿಳಿಸಿ" ಎನ್ನುತ್ತ ರಾಮಸ್ವಾಮಿಯ ಹಿಂದೆಯೇ ಬಂದರು. ರಾಮಸ್ವಾಮಿ ಗುಲಾಬಿ ಬಣ್ಣದ ಬಂಗಲೆಯನ್ನು ಬಿಟ್ಟು ವಿಶಾಲವಾದ ಮುಂದೋಟವನ್ನು ಹಾದು ದೊಡ್ಡ ಗೇಟಿನ ಸಮೀಪಕ್ಕೆ ಬಂದ. ನಂಜ ಗೇಟು ತೆಗೆದಿದ್ದ. ಹೊರಗೆ ಜಟಕಾ ಗಾಡಿ ರಾಮಸ್ವಾಮಿಯ ಟ್ರಂಕು ಹಾಸಿಗೆಗಳನ್ನು ಹೊತ್ತು ರೈಲ್ವೆ ಸ್ಟೇಷನ್ನಿಗೆ ಹೊರಡಲು ಸಿದ್ಧವಾಗಿ ನಿಂತಿತ್ತು.

ರಾಮಸ್ವಾಮಿ "ಆಗಲಿ" ಎಂದ. ಅದು ರಾಯರ ಯಾವ ಕೋರಿಕೆಗೆ ಉತ್ತರವಾಗಿತ್ತೊ? ಅಂತೂ ರಾಯರಿಗೆ ಅದರಿಂದ ಸಮಾಧಾನ ವಾಯಿತು. ಅವರು ಗೇಟಿನ ಹತ್ತಿರ ನಿಂತುಕೊಂಡರು. ರಾಮಸ್ವಾಮಿ ಗಾಡಿಯನ್ನು ಹತ್ತಿ ಕುಳಿತುಕೊಂಡ. ರಾಯರ ಹೆಂಡತಿ ಲಕ್ಷ್ಮಮ್ಮ ವ್ಹೆರಾಂಡಾದ ಬಾಗಿಲಲ್ಲಿ ಬಂದು ನಿಂತಿದ್ದುದು ರಾಮಸ್ವಾಮಿಗೆ ಕಾಣಿಸು ತ್ತಿತ್ತು. ಗಾಡಿಯ ಸಾಬಿಯೂ ಗಾಡಿ ಹತ್ತಿ ಮುಂದೆ ಕುಳಿತ; ಗಾಡಿ ಹೊರಟಿತು.

ರಾಮಸ್ವಾಮಿ "ನಾನು ಬರ್ತೀನಿ'' ಎಂದ.

ರಾಯರು "ಒಳ್ಳೇದಪ್ಪ, ಹೋದ ಕೂಡಲೆ ಒಂದು ಕಾಗದ ಹಾಕಿ"

ಎಂದು ಸ್ವಲ್ಪ ಮುಂದಕ್ಕೆ ಬಂದರು. ಗಾಡಿ ಎಡಕ್ಕೆ ತಿರುಗುವ ವರೆಗೂ ರಾಮುಸ್ವಾಮಿಗೆ ರಾಯರು ಕಾಣಿಸುತ್ತಿದ್ದರು.

* * * * *

ರೈಲ್ವೆ ಸ್ಟೇಷನ್ ತಲಪಿದಾಗ ಇನ್ನೂ ಆರೂ ನಲವತ್ತು. ರಾಮುಸ್ವಾಮಿ ಗಾಡಿಯವನಿಗೆ ಬಾಡಿಗೆ ಕೊಟ್ಟು ಒಬ್ಬ ಕೂಲಿಯವನನ್ನು ಗೊತ್ತು ಮಾಡಿಕೊಂಡ. ಕ್ಯೂ ನಿಂತು ಟಿಕೆಟ್ ತೆಗೆದುಕೊಂಡ ಮೇಲೆ ಕೂಲಿಯವನ ಕೈಯಲ್ಲಿ ಸಾಮಾನು ಹೊರಿಸಿಕೊಂಡು ಸೇತುವೆಯ ಮೆಟ್ಟಲು ಹತ್ತಿ ಅರಸೀಕೆರೆ ಪ್ಲಾಟ್‌ಫಾರಮ್ಮಿಗೆ ಬಂದ. ಹಾಸನಕ್ಕೆ ಹೊರಡುವ ರೈಲು ಸಿದ್ಧವಾಗಿ ಕಂಬಿಯ ಮೇಲೆ ನಿಂತಿತ್ತು. ಇನ್ನೂ ಎಂಜಿನ್ ಬಂದಿರಲಿಲ್ಲ. ಜನ ಮಾತ್ರ ಗಾಡಿಗಳಲ್ಲಿ ಸಾಕಷ್ಟು ತುಂಬಿ ಕೊಂಡಿದ್ದರು. ರಾಮುಸ್ವಾಮಿ ಕೂಲಿಯವನನ್ನು ಕರೆದುಕೊಂಡು ಗಾಡಿಯ ಒಂದು ತುದಿಯಿಂದ ಇನ್ನೊಂದು ತುದಿಯ ವರೆಗೆ ಒಂದು ಸಾರಿ ನೋಡಿ ಬಂದ. ಎಲ್ಲ ಗಾಡಿಗಳಲ್ಲಿಯೂ ಜನ ಹೆಚ್ಚಾಗಿಯೇ ಇದ್ದರು. ಇವನಿಗೆ ಬೇಕಾದ ಸಣ್ಣ ಬೋಗಿ ಯಾವುದೂ ಖಾಲಿ ಇರಲಿಲ್ಲ. ಕೂಲಿ ಯವನು "ಥ್ರೂ, ಒಳಗೆ ಕೂತ್ಕೊಳ್ಳಿ ಸಾಮಿ" ಎಂದ. ರಾಮುಸ್ವಾಮಿ "ಇಲ್ಲೀ ಇಷ್ಟು ರಷ್ಷಿರೋವಾಗ ಥ್ರೂ, ಗಾಡೀಲಿ ಜಾಗ ಇರುತ್ತೇನಯ್ಯ, ಒಳ್ಳೆ ಚೆನ್ನಾಗಿ ಹೇಳ್ತೀಯೆ" ಎಂದ. ಕೂಲಿಯವನು "ಇಲ್ಲ ಸಾಮಿ ಥ್ರೂ, ಒಳ್ಗೇ ರಷ್ಷಿಲ್ಲ ಇವತ್ತು, ಜಾಗ ಐತೆ" ಎಂದು ಆ ಕಡೆ ಹೊರಟ. ಥ್ರೂ ಗಾಡಿಯ ಪಕ್ಕದಲ್ಲಿ ಒಂದು ಸಣ್ಣ ಬೋಗಿ ಇತ್ತು. ಅದು ಥ್ರೂಗೆ ಸೇರಿದ್ದೇ ಆದರೂ ಅದರಲ್ಲಿ ಯಾರೋ ಒಬ್ಬರೇ ಕುಳಿತಿದ್ದರು. ರಾಮುಸ್ವಾಮಿ ಕೂಲಿಯವನನ್ನು ಕುರಿತು 'ಈ ಗಾಡೀಲಿ ಹಾಕು' ಎಂದ. ಕೂಲಿ ಯವನು ಬಾಗಿಲು ತೆಗೆಯಲು ಹೋದಾಗ ಒಳಗಿದ್ದಾತ "ಬೀಗ ಹಾಕಿದಾರೆ ಕಂಡ್ರೀ" ಎಂದ. ರಾಮುಸ್ವಾಮಿ "ನಾನು ತೆಗಸ್ತೀನಿ ಗಾರ್ಡ್ ಕೈಲಿ" ಎಂದು ಹಾಸಿಗೆ ಟ್ರಂಕುಗಳನ್ನು ಕಿಟಕಿಯ ಮೂಲಕವಾಗಿಯೇ ಒಳಗೆ ಸೇರಿಸಿದ. ಒಳಗಿದ್ದಾತ "ಬೇಡಿ. ನೀವೊಬ್ಬರೇ ತಾನೆ ಇರೋದು. ಹಾಗೆ ಸುತ್ತಿ ಕೊಂಡು ಹಿಂದಿಂದ ಬಂದುಬಿಡಿ. ಈ ಕಡೆ ಬಾಗಿಲು ತೆಗೆದಿದೆ. ಈ

ಬಾಗಿಲು ತೆಗಸಿಬಿಟ್ಟರೆ ಎಲ್ಲ ಬಂದು ಬಂದು ತುಂಬ್ಕೊಂಡ್ಬಿಡ್ತಾರೆ." ಎಂದು ಸಲಹೆ ಮಾಡಿದ. ರಾಮುಸ್ವಾಮಿಗೆ ಆತ ಹೇಳಿದ್ದು ಸರಿ ಎಂದು ತೋರಿತು. ಕೂಲಿಯವನಿಗೆ ಕೂಲಿಕೊಟ್ಟು ಥ್ರೂ ಗಾಡಿಯನ್ನು ಬಳಸಿ ಕೊಂಡು ಬಂದು ತನ್ನ ಗಾಡಿ ಹತ್ತಿದ. ಆಮೇಲೆ ಆ ಗಾಡಿಗೆ ಯಾರೂ ಹತ್ತುವುದಿಲ್ಲ ಎಂದು ಕೊಂಡಿದ್ದ ಇವರಿಬ್ಬರಿಗೂ ಸ್ವಲ್ಪ ಹೊತ್ತಿನಲ್ಲಿಯೇ ನಿರಾಸೆಯಾಯಿತು.

ಹೊಸದಾಗಿ ಮದುವೆಯಾದ ನವದಂಪತಿಗಳಿಬ್ಬರು ಕೂಲಿಯವನ ತಲೆಯ ಮೇಲೆ ಹಾಸಿಗೆ ಟ್ರಂಕುಗಳನ್ನು ಹೊರಿಸಿಕೊಂಡು ಆ ಬೋಗಿಯ ಬಾಗಿಲ ಹತ್ತಿರ ಬಂದರು. ಅವರಿಗಿಂತ ಮುಂದೆ ಒಬ್ಬ ಗಾರ್ಡ್ ಬಂದು ಬಾಗಿಲ ಬೀಗ ತೆಗೆದ. ಗಂಡ ಹೆಂಡತಿ ಇಬ್ಬರೂ ಗಾಡಿಯನ್ನು ಪ್ರವೇಶಿಸಿ ದರು. ರಾಮುಸ್ವಾಮಿ ಅವರಿಬ್ಬರಿಗೂ ಒಂದು ಬೆಂಚು ಬಿಟ್ಟು ಎದುರು ಬೆಂಚಿನ ಮೇಲೆ ತನ್ನ ಹೊಸ ಸ್ನೇಹಿತನ ಪಕ್ಕದಲ್ಲಿ ಹೋಗಿ ಕುಳಿತ. ಕೂಲಿಯವನು ಆ ದಂಪತಿಗಳ ಸಾಮಾನನ್ನು ಒಳಗೆ ತಂದು ಎಲ್ಲ ಅಣಿ ಯಾಗಿ ನಾಗಂದಿಗೆಯ ಮೇಲೆ ಇರಿಸಿದ. ಅವನ ಮುಖ ನೋಡಿದಾಗ ರಾಮುಸ್ವಾಮಿಗೆ ಆಶ್ಚರ್ಯವಾಯಿತು. ತನ್ನ ಸಾಮಾನು ತಂದ ಕೂಲಿ ಯವನೇ ಅವನು! ಆತನೂ ರಾಮುಸ್ವಾಮಿಯ ಮುಖವನ್ನು ನೋಡಿದ. ಆದರೆ ಸ್ವಾಭಾವಿಕವಾದ ಕಿರುನಗೆಯೂ ಅವನ ಮುಖದಲ್ಲಿ ಮೂಡಲಿಲ್ಲ. ಕೂಲಿ ತೆಗೆದುಕೊಂಡ ಕೈಯಲ್ಲಿಯೇ ಕೂಲಿ ಕೊಟ್ಟ ಆ ಸೂಟಿನ ಆಸಾಮಿಗೆ ಸಲಾಂಮಾಡಿ ದಡಬಡನೆ ಇಳಿದು ಹೊರಟುಹೋದ.

ಬಾಗಿಲ ಬೀಗ ತೆಗೆಸಿದ್ದು ಆ ಕೂಲಿಯವನೇ ಇರಬೇಕೆಂದು ಹೊಳೆದ ಕೂಡಲೆ ರಾಮುಸ್ವಾಮಿ ತನ್ನ ಪಕ್ಕದ ಆಸಾಮಿಯ ಕಡೆ ನೋಡಿ ಕಿರುನಗೆ ನಕ್ಕ. ಆತನ ಊಹೆಯೂ ಅದೇ ಆಗಿತ್ತು. ಆತನ ತುಟಿಯೂ ಕಿರುನಗೆ ನಕ್ಕು 'ಹೌದು' ಎಂದು ಒಪ್ಪಿಕೊಂಡಿತು.

ರೈಲು ಏಳೂ ಇಪ್ಪತ್ತಾದರೂ ಹೊರಡಲಿಲ್ಲ. "ಯಾಕೋ ಲೇಟೊಂತ ಕಾಣುತ್ತೆ" ಎಂದು ರಾಮುಸ್ವಾಮಿಯ ಪಕ್ಕದ ಆಸಾಮಿ ಹೇಳಿದ. ಆದರೆ ರೈಲು ಗಾಡಿಗೆ ಎಂಜಿನ್ ಸೇರಿಕೊಂಡು ಆಗಲೆ ಹತ್ತು

ನಿಮಿಷವಾಗಿತ್ತು. ಏಳೂವರೆಗೆ ಸರಿಯಾಗಿ ಗಾರ್ಡ್ ಸೀಟಿ ಊದಿದ. ಎಂಜಿನ್ 'ಕೂ' ಎಂದು ಕೂಗಿ ಹೊರಟಿತು. ಬೆಳಗೊಳ, ಕೃಷ್ಣರಾಜ ಸಾಗರ, ಸಾಗರ ಕಟ್ಟೆ ಎಲ್ಲ ಹೋದುವು. ಕೃಷ್ಣರಾಜನಗರ ಬಂತು.

'ಸದ್ಯ ಈ ಗಾಡಿಗೆ ಇನ್ನಾರೂ ಹತ್ತಲಿಲ್ಲ' ಎಂದುಕೊಂಡು ಸಮಾಧಾನಪಟ್ಟುಕೊಂಡಿದ್ದ ಈ ಬೋಗಿಯ ಪ್ರಯಾಣಿಕರಿಗೆ ಇಲ್ಲಿ ನಿರಾಶೆಯಾಯಿತು. ಐದು ಮಂದಿ ರೈತರು ಹೊಸ ಕುಳ, ಗುದ್ದಲಿ, ಎರಡು ಬುಟ್ಟಿ ಏನೇನೋ ಹಿಡಿದುಕೊಂಡು ಹತ್ತಿದರು. "ಬೇಡಕಣಯ್ಯ ಜಾಗ ಇಲ್ಲ" ಎಂದು ರಾಮುಸ್ವಾಮಿ ಎಷ್ಟು ಕಿರಿಚಿದರೂ ಅವರು ಕೇಳ ಲಿಲ್ಲ. ಅವರಲ್ಲೊಬ್ಬಾತ "ಅಯ್ಯೋ ಬುಡಿ ಸಾಮಿ, ಇಲ್ಲೇ ಅಂಪಾಪುರಕ್ಕೆ ನಿಂತೇ ಓದೇವು. ಯಾಕೆ ಬೇಡಾಂತೀರಿ ತೆಗೀರಿ" ಎಂದು ಬಾಗಿಲು ತೆಗೆದು ತಮ್ಮೆಲ್ಲರ ಸಾಮಾನು ಸರಂಜಾಮನ್ನೂ ಗಾಡಿಯಲ್ಲಿ ತುಂಬಿ ಹತ್ತಿದ. ಅವನ ಹಿಂದೆಯೇ ಅವನ ಗುಂಪಿನ ಆ ನಾಲ್ವರೂ ಹತ್ತಿದರು. ಗಾಡಿ ಹೊರಟಿತು.

ಇರುವ ಎರಡು ಬೆಂಚುಗಳಲ್ಲಿ ಒಂದು ಬೆಂಚಿನ ಮೇಲೆ ರಾಮುಸ್ವಾಮಿ ಮತ್ತು ಇನ್ನೊಬ್ಬಾತ ಕುಳಿತಿದ್ದರು. ಇನ್ನೊಂದು ಬೆಂಚಿನ ಮೇಲೆ ಆ ನವದಂಪತಿಗಳು ಕುಳಿತಿದ್ದರು. ರಾಮುಸ್ವಾಮಿ ಆ ಹುಡುಗಿಯ ಕಡೆ ಏಕೊ ನೋಡಿದ. ಆ ಹುಡುಗಿಯೂ ಏಕೊ ಇವನ ಕಡೆ ನೋಡಿ ತಲೆತಗ್ಗಿಸಿಕೊಂಡಿತು. ಆಕೆ ಕಿಟಕಿಯ ಕಡೆ ಕುಳಿತಿದ್ದುದರಿಂದ ಆಕೆಯ ಗಂಡ ಅವಳ ಕಡೆಗೆ ಸರಿದುಕೊಂಡು "ಬನ್ನಿ ಯಾರಾದರೂ ಇಬ್ಬರು ಕುಳಿತು ಕೊಳ್ಳಿ" ಎಂದು ಆ ರೈತರನ್ನು ಕರೆದ. ರಾಮುಸ್ವಾಮಿಗೆ ನಾಚಿಕೆ ಯಾಯಿತು. "ಬನ್ನಿ ಇನ್ನಿಬ್ಬರು ಈ ಕಡೆ" ಎಂದು ರಾಮುಸ್ವಾಮಿ ತನ್ನ ಗೆಳೆಯನ ಕಡೆಗೆ ಸರಿದು ಸ್ವಲ್ಪ ಜಾಗ ಮಾಡಿಕೊಟ್ಟ. ರಾಮುಸ್ವಾಮಿ ಕುಳಿತಿದ್ದ ಬೆಂಚು ದೊಡ್ಡದಾಗಿದ್ದುದರಿಂದ ಮೂವರು ಅಲ್ಲಿ ಕುಳಿತರು. ಇನ್ನಿಬ್ಬರು ಇನ್ನೊಂದು ಬೆಂಚಿನ ಮೇಲೆ ಕುಳಿತುಕೊಂಡರು. ರೈಲು ಮುಂದೆ ಹೊರಟಿತು.

ಆ ನವದಂಪತಿಗಳನ್ನು ನೋಡಿದ ಕೂಡಲೆ ರಾಮುಸ್ವಾಮಿಗೆ

ಗೌರಿಯ ನೆನಪಾಗಿತ್ತು. ಆ ಹುಡುಗಿಯ ಮುಖವನ್ನು ನೋಡಿದಾಗ ಲಂತೂ ಮತ್ತೆ ಗೌರಿಯ ಚಿತ್ರ ಕಣ್ಣು ಮುಂದೆ ನಿಂತಂತಾಯಿತು.

ಅವಳನ್ನು ಅವನು ನೋಡಿ ಮೂರು ವರುಷಗಳು ಉರುಳಿವೆ. ನಾಳೆ ಬರುವ ಜ್ಯೇಷ್ಠಕ್ಕೆ ಸರಿಯಾಗಿ ಮೂರು ವರುಷ ತುಂಬುತ್ತದೆ.

ಗೌರಿ ಈಗ ಹೇಗಿದ್ದಾಳೊ?

ಆಗ, ಹುಡುಗಿ ಚೆನ್ನಾಗಿದ್ದಳು. 'ತೆಳ್ಳಗೆ ಬೆಳ್ಳಗೆ ಚೆನ್ನಾಗಿದ್ದಾಳೆ' ಎಂದು ಜೋಯಿಸರು ಹೇಳಿದಂತೆಯೆ ಗೌರಿ ಗೌರಮ್ಮನಾಗಿದ್ದಳು. ಅಂತರಪಟ ತೆಗೆದಾಗ, ಜೀರಿಗೆ ಬೆಲ್ಲ ಅವಳ ಮೇಲೆ ಹಾಕಿದ ಮೇಲೆಯೆ ರಾಮಸ್ವಾಮಿ ಅವಳನ್ನು ನೋಡಿದ್ದು. ತಾನು ಮೊದಲು ಜೀರಿಗೆ ಬೆಲ್ಲ ಹಾಕಬೇಕೆಂದು ಗೌರಿ ತಲೆಯೆತ್ತಿ ಕೈಬೀಸಿದಾಗ ರಾಮಸ್ವಾಮಿ ಆಗಲೆ ಹಾಕಿ ಅವಳ ಮುಖ ನೋಡಿದ. ಕೆಂಪಡರಿದ್ದರೂ ಆ ಮುಖ ತುಂಬ ಸುಂದರವಾಗಿತ್ತು. ಅಂದು ಅವನು ಮೂರು ನಾಲ್ಕು ಬಾರಿ ಕದ್ದು ಗೌರಿಯ ಮುಖ ನೋಡಿದ. ಅವಳ ಕೈ ಹಿಡಿದಾಗಲಂತೂ ಅವನಿಗೆ ವಿಚಿತ್ರ ಆನಂದ ಉಂಟಾಯಿತು; ಮೈಯ್ಯಲ್ಲಿ ನವಶಕ್ತಿ ಹರಿದಂತಾ ಯಿತು. ಆದರೆ ಗೌರಿಗೆ ಹೇಗಾಯಿತೋ ಅವನಿಗೆ ತಿಳಿಯಲಿಲ್ಲ. ಒಂದು ದಿನದ ಮದುವೆ. ಶಾಸ್ತ್ರಗಳೆಲ್ಲ ಚುಟಗೆ ಚಪ್ಪರವಾಗಿ ಬೇಗಬೇಗ ಮುಗಿದುವು. ಅಲ್ಲದೆ ಮಧ್ಯದಲ್ಲಿ ಜಗಳ ಬೇರೆ ಆದುದರಿಂದ ಗಂಡಿನ ಕಡೆಯವರು ಆದಷ್ಟು ಬೇಗ ಊರು ಬಿಡುವ ಯೋಚನೆಯಲ್ಲಿದ್ದರು.

ಶಾಮಣ್ಣನವರು ಅಳಿಯನಿಗಾಗಿ ಚುನಾಯಿಸಿ ತಂದಿದ್ದ ಬಿಳಿಯ ರೇಶಿಮೆ ಮಡಿಯನ್ನು ರಂಗಣ್ಣನವರು ಒಪ್ಪಲಿಲ್ಲ. ರುದ್ರಾಕ್ಷಿ ಅಂಚಿನ ಕೆಂಪು ರೇಶಿಮೆ ಮಡಿಯೇ ಬೇಕು, ಇಲ್ಲದಿದ್ದರೆ ಮದುವೆ ಇಲ್ಲಿಗೇ ನಿಲ್ಲಲಿ ನಾನು ಬರೋದಿಲ್ಲ ಎಂದು ಎದ್ದು ನಿಂತರು. ಶಾಮಣ್ಣನವರು ಮೊದಲು "ಏನಾಗಿದೆ? ಪರವಾಯಿಲ್ಲ ಇದೇ ಚೆನ್ನಾಗಿದೆ. ಅದು ಹಳೇ ಕಾಲದ್ದು. ಈಗ್ಯಾರು ಕೆಂಪು ಮಡಿ ಉಡುತ್ತಾರೆ" ಎಂದು ಏನೇನೋ ಹೇಳಿದರು. ರಂಗಣ್ಣನವರು ಕೇಳಲಿಲ್ಲ. "ಈಗ ತರಿಸುವುದಕ್ಕಾಗೋದಿಲ್ಲ. ಆಮೇಲೆ ಬದಲಾಯಿಸಿಕೊಳ್ಳೋಣ" ಎಂದರೆ ರಂಗಣ್ಣನವರು "ಅದು ಒಂದ

ಮೇಲೇ ಮುಂದಿನ ಕೆಲಸ. ಅಲ್ಲಿಯ ವರೆಗೆ ನಾನು ಬರೋದಿಲ್ಲ" ಎಂದು, ಖಾಲಿ ಇದ್ದ ಪಕ್ಕದ ಮನೆಯ ಜಗಲಿಯ ಮೇಲೆ ಹೋಗಿ ಕುಳಿತರು. ರಾಮಸ್ವಾಮಿ ಇನ್ನೂ ಹಸೆಮಣೆಯ ಮೇಲೇ ಕುಳಿತಿದ್ದ. ರಂಗಣ್ಣನವರು ಜಗಲಿಯ ಮೇಲಿಂದ ಎದ್ದು ಬಂದು ರಾಮಸ್ವಾಮಿಯ ರಟ್ಟೆ ಹಿಡಿದೆತ್ತಿ "ಯಾಕೆ ಕೂತಿದೀಯೆ. ಎದ್ದು ಬಾ ಹೊರಗೆ" ಎಂದು ಕರೆದುಕೊಂಡು ಹೊರಟುಹೋದರು. ಅದನ್ನು ನೆನಸಿಕೊಂಡ ರಾಮಸ್ವಾಮಿಗೆ ಈಗ ಅನ್ನಿಸಿತು: ಪಾಪ, ಆಗ ಗೌರಿ ಏನಂದುಕೊಂಡಳೊ!

ಆಮೇಲೆ ಶಾಮಣ್ಣನವರು ಸೂರ್ಯನಾರಾಯಣ ಶೆಟ್ಟರ ಅಂಗಡಿಗೆ ಸೈಕಲ್ಲಿನ ಮೇಲೆ ಯಾರನ್ನೋ ಕಳಿಸಿ, ರಂಗಣ್ಣನವರು ಕೇಳಿದಂಥ ರುದ್ರಾಕ್ಷಿ ಅಂಚಿನ ಕೆಂಪು ಮಡಿಯನ್ನೇ ತರಿಸಿಕೊಟ್ಟರು. ರಾಮಸ್ವಾಮಿ ತಂದೆಗೆ ಬುದ್ಧಿ ಹೇಳಿ ಸಮಾಧಾನ ಪಡಿಸುವ ಯೋಗ್ಯತೆ ಪಡೆದಿರಲಿಲ್ಲ; ಸೀತಮ್ಮನಂತೂ ಗಂಡ ಕೋಪಗೊಂಡಾಗ ಗಡಗಡ ನಡುಗುತ್ತಿದ್ದುದರಿಂದ ಒಂದು ಮಾತೂ ಆಡದೆ ಅಳುತ್ತಾ ಕುಳಿತುಬಿಟ್ಟಿದ್ದಳು. ಆಗ ಗೌರಿಯೂ ಅತ್ತಳೊ ಏನೊ!

ಅವನ್ನೆಲ್ಲ ನೆನಸಿಕೊಂಡಾಗ ರಾಮಸ್ವಾಮಿಗೆ ನಾಚಿಕೆಯಾಯಿತು. ಆದರೆ ಅವನಿಗೆ ಒಂದು ಸಮಾಧಾನ. ಆಗ ಗೌರಿ ಇನ್ನೂ ಹುಡುಗಿ. ಅವಳಿಗೆ ಹದಿಮೂರು ವರುಷ ತುಂಬಿರಲಿಲ್ಲ. ಈ ಜಗಳ ಮನಸ್ತಾಪ ಗಳೆಲ್ಲ ಅವಳ ಮನಸ್ಸಿನ ಮೇಲೆ ಅಷ್ಟು ಪರಿಣಾಮವನ್ನುಂಟುಮಾಡಿರ ಲಾರದು, ಎಂದು ಅವನ ಭಾವನೆ. ಆದರೆ ಈಗ ಅವಳಿಗೆ ಹದಿನಾರು ವರುಷ ತುಂಬುತ್ತದೆ. ಆ ಜಗಳ ಮತ್ತು ಈ ವಿರಹ ನೆನಸಿಕೊಂಡರೆ ಅವಳಿಗೆ ಎಷ್ಟು ದುಃಖವಾಗುತ್ತದೆಯೊ!

ರೈಲು ಓಡುತ್ತಿತ್ತು.

ಹಂಪಾಪುರದಲ್ಲಿ ಆ ಐದು ಮಂದಿ ರೈತರೂ ಇಳಿದು ಹೋಗಿದ್ದರು. ರೈಲು ಹೊಸ ಅಗ್ರಹಾರವನ್ನೂ ದಾಟಿತ್ತು.

ನವದಂಪತಿಗಳ ಪೈಕಿ ಗಂಡ "ಇಡ್ಲಿ ತೊಗೋತೀಯೇನು?" ಎಂದ. ಹೆಂಡತಿ "ಎಲ್ಲಿ?" ಎಂದು ಕೇಳಿದಳು.

"ಮಂದಗೆರೇಲಿ"

"ಅಯ್ಯೋ, ಬೇಡಾಂದ್ರೆ. ಅದರ ಮುಂದಿನ ಸ್ಟೇಷನ್ನೇ ಅಲ್ಲವೆ ಹೊಳೆನರಸೀಪುರ ?"

"ಹೌದು"

"ಮತ್ತೆ ಯಾಕೆ ತಿಂಡಿ ?"

"ಇರಲಿ ತೊಗೊ. ಊರಿಗೆ ಹೋದ ಮೇಲೆ ಹೋಟಲ ತಿಂಡಿ ತಿನ್ನೋಕಾಗುತ್ತ್ಯೆ?"

"ಬ್ಯಾಡಾಂದ್ರೆ"

"ತೊಗೊಳ್ಳೋಣ. ಅರ್ಧ ಗಂಟೆ ಮೇಲಾಗುತ್ತೆ ಹೊಳೆನರಸೀಪುರ ಸಿಕ್ಕೋದು."

"ಆಗಲಿ, ಹೋದ ಕೂಡಲೆ ಮನೇಲಿ ಏನಾದರೂ ಆಗುತ್ತೆ. ಯಾಕೆ ಸುಮ್ನೆ ಖರ್ಚು."

"ಹ್ನು, ಹೋದ ಕೂಡಲೆ ಆಗಿರುತ್ತೆ. ನೀನು ಹೋಗೋದೇ ಅವರಿಗೆ ಗೊತ್ತಿಲ್ಲ? ಮೂರು ದಿನದಿಂದ ರೈಲು ನೋಡಿ ನೋಡಿ, ಸರಿ ಇನ್ನು ಬರೊಲ್ಲ. ಬರೋಕೆ ಮುಂಚೆ ಇಂಥ ರೈಲಿನಲ್ಲಿ ಬರ್‍ತೀವೀಂತ ಕಾಗದ ಹಾಕ್ತಾರೆ, ಅಂದ್ಕೊಂಡು ಸುಮ್ಮನಿರ್‍ತಾರೆ. ಸ್ಟೇಷನ್ನಿಗೆ ಕೂಡ ಯಾರೂ ಬಂದಿರೊಲ್ಲ, ಬೇಕಾದರೆ ನೋಡು"

"ಇಲ್ಲ ನಮ್ಮ ಲಚ್ಚು ಬಂದಿರ್‍ತಾನೆ"

"ಅದ್ಯ್ಯಾಂಗೆ. ನಾವು ಈ ರೈಲಿನಲ್ಲಿ ಹೊರಡ್ತೀವೀಂತ ಅವನೊಬ್ಬ ನಿಗೇ ಕನಸು ಬಿದ್ದಿರಬೇಕಷ್ಟೆ"

"ಇಲ್ಲ ಕಾಗದಾನೇ ಹೋಗಿರುತ್ತೆ."

"ನೋಡ್ದ್ಯಾ—ಘಾಟಿ. ಹಾಗಾದರೆ ಕಾಗದ ಬರೆದ್ಬಿಟ್ಟಿದೀಯ ನಿಜ್ಜ!"

ಹೆಂಡತಿ ಮುಗುಳ್ನಗೆ ನಕ್ಕು ನಾಚಿಕೆಯಿಂದ ತಲೆ ತಗ್ಗಿಸಿದಳು.

ಈ ದಂಪತಿಗಳು ಮೆಲ್ಲಗೆ ಮಾತಾಡಿಕೊಂಡರೂ ರಾಮಸ್ವಾಮಿ ಎಲ್ಲವನ್ನೂ ಆಲಿಸಿ ಕೇಳಿದ. ಅವರು ಹೊಳೆನರಸೀಪುರದಲ್ಲಿ ಇಳಿಯು

ತ್ತಾರೆ, ಎಂದು ಗೊತ್ತಾದ ಕೂಡಲೆ ಅವನಿಗೆ ತನ್ನ ಮಾವನ ಮನೆಯ ಜ್ಞಾಪಕ ಬಂತು. ಗೌರಿ ಕಣ್ಣು ಮುಂದೆ ಪುನಃ ಬಂದು ನಿಂತಳು.

ಈ ಹುಡುಗಿಯೂ ಹೊಳೆನರಸೀಪುರದವಳು; ತನ್ನ ವಿಷಯ ಅವಳಿಗೆ ಗೊತ್ತೊ ಏನೊ! ಅದಕ್ಕೇ ಆಗ ಹಾಗೆ ಮುಖ ನೋಡಿದಳು, ಎಂದು ರಾಮಸ್ವಾಮಿಗೆ ಅನ್ನಿಸಿದಾಗ ಅವರ ಕಡೆ ನೋಡದೆ ತಲೆ ತಗ್ಗಿಸಿ ಕುಳಿತುಕೊಳ್ಳಬೇಕು ಎನ್ನಿಸಿತು; ತಲೆ ತಗ್ಗಿಸಿ ಕುಳಿತುಕೊಂಡ.

ಮಂದಗೆರೆ ಬಂತು.

ಆ ಗಂಡ ಇಡ್ಲಿ ಕಾಫಿ ತರಲು ರೈಲು ತಂಬಿಗೆಯನ್ನು ಹಿಡಿದು ಕೆಳಗೆ ಇಳಿದ.

ರಾಮಸ್ವಾಮಿಗೂ ತುಂಬ ಹಸಿವಾಗಿತ್ತು. ಆದರೆ ಹೊಳೆನರಸೀಪುರದ ಪಕ್ಕದ ನಿಲ್ದಾಣವಾಗಿದ್ದುದರಿಂದ ಇಳಿಯಬಾರದು, ಎಂದುಕೊಂಡು ಸುಮ್ಮನೆ ಕುಳಿತಿದ್ದ. ಕಿಟಕಿಯ ಹೊರಗೆ ತಲೆಹಾಕಿ, ಇಡ್ಲಿ ಕೊಂಡು ತಿನ್ನುವ ಧೈರ್ಯವೂ ಬರಲಿಲ್ಲ. ಹಸಿವನ್ನು ತಡೆದುಕೊಳ್ಳಬೇಕಾಯಿತು. ಆ ಹುಡುಗಿಯ ಗಂಡ ಸ್ವಲ್ಪ ಹೊತ್ತಿನಲ್ಲಿಯೇ ನಾಲ್ಕು ಇಡ್ಲಿ, ತಂಬಿಗೆಯಲ್ಲಿ ಎರಡು ಕಪ್ಪು ಕಾಫಿ ತುಂಬಿಕೊಂಡು ಬಂದ. ಇಬ್ಬರೂ ಗಾಡಿಯಲ್ಲೇ ಕುಳಿತು ತಿಂದರು. ದಂಪತಿಗಳ ಈ ರಸಿಕ ಜೀವನವನ್ನು ನೆನಸಿಕೊಂಡಾಗ ರಾಮಸ್ವಾಮಿಯ ಮನಸ್ಸು ಅಳುಕಿತು. ಮೂರು ವರುಷದ ಹಿಂದೆ ಮದುವೆಯಾದ ತಾನು ಒಂದು ಗಳಿಗೆಯೂ ಹಾಗೆ ಕಳೆದಿರಲಿಲ್ಲ; ಹಾಗೆ ಕಳೆಯುವುದು ಹೋಗಲಿ, ಹೆಂಡತಿಯ ಮುಖವನ್ನೂ ಸಹ ಸರಿಯಾಗಿ ನೋಡಿರಲಿಲ್ಲ. 'ಛೆ, ಇದು ತಪ್ಪು' ಎನ್ನಿಸಿತು.

ರೈಲು ಮುಂದೆ ಓಡುತ್ತಿತ್ತು

ಹೊಳೆನರಸೀಪುರ ಹತ್ತಿರ ಬಂದಹಾಗೆಲ್ಲ ರಾಮಸ್ವಾಮಿಗೆ ಒಂದು ತರಹ ಮುಜುಗರವುಂಟಾಯಿತು. 'ಹೊರಗೆ ಯಾರಿಗೂ ಕಾಣಿಸುವಂತೆ ಕುಳಿತುಕೊಳ್ಳಬೇಡ, ಮರೆಯಾಗಿ ಕೂತುಕೊ' ಎಂದು ಮನಸ್ಸು ಹೇಳುತ್ತಿತ್ತು. ಮಾವ ಶಾಮಣ್ಣನವರಾಗಲಿ, ಅವರ ಕಡೆಯವರಾಗಲಿ ಅಥವಾ, ರಾಮಸ್ವಾಮಿ ಶಾಮಣ್ಣನವರ ಅಳಿಯ ಎಂದು ಗುರುತಿಸುವ

ಯಾರಾದರೂ ಆಸಾಮಿಗಳಾಗಲಿ ತನ್ನನ್ನು ನೋಡಿಬಿಟ್ಟಾರು ಎನ್ನಿಸಿದಾಗ ಮೈ ಮುದುರಿಕೊಂಡು ಕುಳಿತುಕೊಂಡ.

ಅವನು ಅದೇ ಆಲೋಚನೆಯಲ್ಲಿರುವಾಗಲೇ ಹೊಳೆನರಸೀಪುರದ ಸಿಲ್ದಾಣದ ಮುಂದೆ ರೈಲು ಬಂದು ನಿಂತುಕೊಂಡಿತು. ನವದಂಪತಿಗಳು ಸಾಮಾನಿನೊಡನೆ ಇಳಿದರು. ಸ್ವಲ್ಪ ಹೊತ್ತಿನ ಮೇಲೆ ರೈಲು ಹೊರಟಿತು.

ತಕ್ಷಣವೆ ಮಾಧವರಾಯರು ಹೇಳಿದ ಮಾತು ನೆನಪಿಗೆ ಬಂತು.

ಅವರೇ ನಿಂತು "ಹೊಳೆನರಸೀಪುರದಲ್ಲಿ ಇಳಿಯೊಲ್ವೆ?" ಎಂದು ಪುನಃ ಕೇಳಿದ ಹಾಗಾಯಿತು.

'ಯಾಕೆ ಇಳಿಯಬಾರದು? ಯಾಕೆ ಇಳಿಯಬಾರದು?' ಎಂದು ಅವನೇ ಅನೇಕ ಬಾರಿ ಅಂದುಕೊಂಡಿದ್ದ. 'ತಂದೆಗೆ ತಿಳಿಸದಂತೆ ಒಂದೆರಡು ದಿನ ಅಲ್ಲಿ ಏಕೆ ಇದ್ದು ಹೋಗಬಾರದು?' ಎಂದು ಅನೇಕ ಬಾರಿ ಅವನಿಗೆ ಅನ್ನಿಸಿತ್ತು, ಆದರೆ ತಂದೆಗೆ ತಿಳಿದುಬಿಟ್ಟರೆ ಗತಿಯೇನು! ಅಲ್ಲದೆ ಮಾವನವರು ಏನನ್ನುತ್ತಾರೊ, ಅಕ್ಕಪಕ್ಕದವರು ಏನಂದುಕೊಳ್ಳುತ್ತಾರೊ, ಎಂದುಕೊಂಡು ಸುಮ್ಮನೆ ಇದ್ದುಬಿಡುತ್ತಿದ್ದ. ಮದುವೆಯಲ್ಲಿ ಮತ್ತು ಮದುವೆ ಆದಮೇಲೆ ಸರಿಯಾಗಿ ನಂಟು ಬೆಳೆಯಲಿಲ್ಲ. ಶುರುವಿನಲ್ಲಿಯೇ ವಿರಸವುಂಟಾಯಿತು. ಇದರಿಂದ ಹೆಣ್ಣಿನ ಕಡೆಯವರು ಹೊಳೆನರಸೀಪುರದಲ್ಲಿಯೇ, ಗಂಡಿನ ಕಡೆಯವರು ಹಾಸನದಲ್ಲಿಯೇ ಉಳಿಯಬೇಕಾಯಿತು.

ವಿದ್ಯಾರ್ಥಿಯ ಮನಸ್ಸು ಚಂಚಲ. ಅದು ಮೇಣ ಇದ್ದಹಾಗೆ. ಉಪಾಧ್ಯಾಯರು, ಗೆಳೆಯರು ಅದಕ್ಕೆ ಹೇಗೆ ಬೇಕೊ ಹಾಗೆ ರೂಪ ಕೊಡಬಹುದು. 'ಇದು ಸರಿ' ಎಂದು ಮನಸ್ಸಿಗೆ ಹಿಡಿಯುವಂತೆ ವಿವರಿಸಿದರೆ 'ಹೌದು ಸರಿ' ಎಂದು ಒಪ್ಪಿಕೊಳ್ಳುತ್ತದೆ. 'ಇದು ತಪ್ಪು' ಎಂದು ವಿವರಿಸಿದರೆ 'ಹೌದು ತಪ್ಪು, ಎಂದು ಒಪ್ಪಿಕೊಳ್ಳುತ್ತದೆ.—ಇದಕ್ಕೆ ಸರಿಯಾದ ನಿದರ್ಶನ ರಾಮಸ್ವಾಮಿ. ಅವನಿಗೆ ಮೊದಮೊದಲು ಸ್ವಬುದ್ಧಿಯೇ ಇರಲಿಲ್ಲ. ಎಲ್ಲ ಕೆಲಸಗಳಲ್ಲಿಯೂ ಇನ್ನೊಬ್ಬರ ಸಲಹೆ ಕೇಳುತ್ತಿದ್ದ. ವಿದ್ಯಾರ್ಥಿದೆಸೆ ಮುಗಿಯುತ್ತ ಬಂದಹಾಗೆಲ್ಲ, ವಯಸ್ಸು ಮೀರಿದಂತೆಲ್ಲ

ಬುದ್ಧಿ ಬೆಳೆಯತೊಡಗಿತು. ಅವನು ಎರಡು ವರುಷ ಮಾಧವರಾಯರ ಮನೆಯ ರೂಮಿನಲ್ಲಿ ಒಂಟಿಯಾಗಿ ಇದ್ದುದು ಅವನ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವನ್ನುಂಟುಮಾಡಿತು. ಒಬ್ಬರ ನೆರವೂ ಸಲಹೆಯೂ ಇಲ್ಲದೆ ತಾನೇ ಸ್ವತಃ ಅನೇಕ ವಿಷಯಗಳಲ್ಲಿ ತೀರ್ಮಾನ ಮಾಡಿ ಮಾಡಿ, ಒಬ್ಬಂಟಿಗನಾಗಿ ನಿತ್ಯದ ಸಮಸ್ಯೆಗಳನ್ನು ಬಗೆಹರಿಸಿ ಅವನಿಗೆ ಸಾಕಷ್ಟು ಅನುಭವ ಬಂದಿತ್ತು. ರಾಮುಸ್ವಾಮಿ ಬಹಳಮಟ್ಟಿಗೆ ಬದಲಾಯಿಸಿ ಬಿಟ್ಟಿದ್ದ. ಮೂರು ವರುಷಗಳ ಹಿಂದಿನ ರಾಮುಸ್ವಾಮಿಗೂ, ಮೈಸೂರಿಗೆ ಹೊರಡುವಾಗ ಇದ್ದ ರಾಮುಸ್ವಾಮಿಗೂ, ಒಂದು ವರುಷದ ಹಿಂದೆ ಹಾಸನಕ್ಕೆ ಬಂದಿದ್ದ ರಾಮುಸ್ವಾಮಿಗೂ, ಈಗ್ಗೆ ಕೆಲವು ತಿಂಗಳುಗಳ ಹಿಂದೆ ಇದ್ದ ರಾಮುಸ್ವಾಮಿಗೂ ಅಜಗಜಾಂತರ ವ್ಯತ್ಯಾಸವಿತ್ತು. ಅವನ ತಂದೆ ರಂಗಣ್ಣನವರಿಗೆ ಇದು ಚೆನ್ನಾಗಿ ಕಾಣಿಸಿತು.

ರೈಲು ಹಾಸನ ತಲಪಿದಾಗ ಹನ್ನೆರಡು ಗಂಟೆಯ ಸಮಯ. ರಾಮುಸ್ವಾಮಿ ಇಳಿದು ಹಾಸಿಗೆ ಟ್ರಂಕುಗಳನ್ನು ಕೆಳಗೆ ಇಳಿಸಿಕೊಂಡ. ಒಣಕಲು ಮೈಯ ಒಬ್ಬ ಕಪ್ಪು ಹುಡುಗ ಓಡಿಬಂದು "ಕೂಲಿ ಸಾಮಿ" ಎಂದು ಟ್ರಂಕಿಗೆ ಕೈಹಾಕಿದ. "ಏ ಬೇಡ ಹೋಗು" ಎಂದು ರಾಮುಸ್ವಾಮಿ ಗದರಿಸಿಕೊಂಡ.

ನಿಲ್ದಾಣದಿಂದ ಮನೆಗೆ ಸುಮಾರು ಎರಡು ಮೈಲಿ ಆಗುತ್ತದೆ. ಆಗಲೆ ಬಿಸಿಲು ವಿಪರೀತವಾಗಿತ್ತು. ಸೂರ್ಯ ನೆತ್ತಿಯ ಮೇಲೆ ನಿಂತಿದ್ದ. ಈ ಬಿಸಿಲಿನಲ್ಲಿ ಕೂಲಿ ಮಾಡಿಕೊಂಡು ತಾನೂ ನಡೆದುಕೊಂಡು ಯಾರಪ್ಪಾ ಹೋಗೋದು ಎನ್ನಿಸಿದಾಗ, ರಾಮುಸ್ವಾಮಿ ಜಟಕಾ ಗಾಡಿಗಾಗಿ ನೋಡಿದ. ನಿಲ್ದಾಣದ ಹೊರಗಡೆ ಐದಾರು ಗಾಡಿಗಳೇನೊ ಸಾಲಾಗಿ ನಿಂತಿದ್ದುವು. ಒಬ್ಬಾತ ಓಡಿಬಂದು "ಗಾಡಿ ಬೇಕಾ ಬುದ್ಧಿ?" ಎಂದು ಕೇಳಿದ. ರಾಮುಸ್ವಾಮಿ "ಹ್ಞು. ಹೌದು. ಬರ್ತೀಯಾ?" ಎಂದು ತಲೆ ಎತ್ತಿದಾಗ ಆ ಗಾಡಿಯಾತ "ಅಯ್ಯೊ ಬುದ್ಧಿ, ನೀವಾ! ನಾನು ಯಾರೋಂತಿದ್ದೆ!" ಎಂದ.

ತನ್ನ ಮನೆಯ ಹತ್ತಿರದಲ್ಲಿಯೇ ಇರುವ ಗಾಡಿಯ ನಿಂಗ

ವೆಂಬುದು ರಾಮುಸ್ವಾಮಿಗೂ ತಿಳಿಯಿತು. "ಏನು ನಿಂಗಾ, ನೀನೇ ಸಿಕ್ಕಿದಲ್ಲ" ಎಂದು ರಾಮುಸ್ವಾಮಿ ಹಾಸಿಗೆಯನ್ನು ಕೈಯಲ್ಲಿ ಹಿಡಿದುಕೊಂಡ.

"ಬುಡಿ ಬುದ್ಧಿ, ನಾ ತತ್ತೀನಿ" ಎಂದು ನಿಂಗ ಅವನ ಕೈಯಲ್ಲಿದ್ದ ಹಾಸಿಗೆಯನ್ನು ಒಂದು ಕೈಯಲ್ಲೂ ಟ್ರಂಕನ್ನು ಇನ್ನೊಂದು ಕೈಯಲ್ಲೂ ಹಿಡಿದುಕೊಂಡು ನಿಲ್ದಾಣದಿಂದ ಹೊರಕ್ಕೆ ಹೊರಟ. ರಾಮುಸ್ವಾಮಿ ಟಿಕೀಟು ಕೊಟ್ಟು ಹೊರಗೆ ಬಂದ. ಗಾಡಿಯಲ್ಲಿ ಟ್ರಂಕು ಹಾಸಿಗೆ ಇಡುತ್ತಿದ್ದ ಸಿಂಗ "ಎರಡೇ ಸಾಮಾನ ಬುದ್ದಿ?" ಎಂದು ಕೇಳಿದ. ರಾಮುಸ್ವಾಮಿ "ಹೌದು" ಎಂದು ಉತ್ತರ ಕೊಡುತ್ತ ಗಾಡಿ ಹತ್ತಿ ಕುಳಿತುಕೊಂಡ. ನಿಂಗ ಗಾಡಿಯನ್ನು ಬಲಕ್ಕೆ ತಿರುಗಿಸಿ, ತಾನೂ ಹತ್ತಿ ಕುಳಿತುಕೊಂಡ. ಗಾಡಿ ಹೊರಟಿತು.

"ಯಾವೂರಿಂದ ಬುದ್ದಿ ಬತ್ತಾ ಇರೋದು?"

"ಮೈಸೂರಿಂದ. ನಾನಲ್ಲೇ ಓದ್ತಾ ಇದ್ದೆ."

"ಓ, ಹೌದು ಬುದ್ದಿ ಗೊತ್ತಿತ್ತು, ತಮ್ಮ ಬುದ್ದಿಯೋರು ಏಳಿದ್ರು. ಕಡ್ಡೀಪುಡಿ ತಕ್ಕಳಾಕೆ ದಿನಾ ನಮ್ಮಂಗಡೀಗೆ ಬತ್ತಾರಲ್ಲ"

"ಹ್ಯಾಗಿದೆ ವ್ಯಾಪಾರ?"

"ಪರವಾಗಿಲ್ಲ ಬುದ್ದಿ"

"ದಿನಕ್ಕೆ ಎಷ್ಟು ರೂಪಾಯಿ ಆಗುತ್ತೆ"?

"ಏನು ನಾಲ್ಕು, ಐದು.....ಇಂಗೇ"

"ಪರವಾಯಿಲ್ಲ."

"ಈಗ ಏನು ಬುದ್ದಿ, ಓದ್ತಾ ಇರೋದು?"

"ಬಿ. ಎ. ಪರೀಕ್ಷೆಗೆ"

"ಆತ ಬುದ್ದಿ ಓದಿದ್ದು?"

"ಆಯ್ತಪ್ಪ"

"ಅಂಗಾರೆ ಬಿ. ಎ. ಆದಂಗಾತ ಬುದ್ದಿ?"

"ಪರೀಕ್ಷೆ ಆಯ್ತು. ಪಾಸೋ ಫೇಲೋ ತಿಳಿದಿಲ್ಲ. ಇನ್ನು ಎರಡು ಮೂರು ತಿಂಗಳಲ್ಲೇ ಅದು ತಿಳಿಯುತ್ತೆ."

"ಸರಿ ಬುದ್ದಿ"

"ತಮ್ಮ ಬುದ್ಧಿಯೋರ್‍ಯಾಕೊ ಕಾಣೋಕಿಲ್ಲ. ಮೂರ್‍ನಾಕ್ದಿನ ಆತು, ನಮ್ಮಂಗಡೀಗೂ ಬಂದಿಲ್ಲ. ಊರಲ್ಲಿದ್ದರೆ ದಿನಾ ಒಂದ್ಸಲ ಬತ್ತಿದ್ರು ಕಡ್ಡೀ ಪುಡೀಗೆ"

"ಇರಬೇಕು, ಊರಲ್ಲಿಲ್ವೇ ಏನು ? ಇಲ್ಲದಿದ್ರೆ ಹಳ್ಳೀ ಕಡೆ ಹೋಗಿರ ಬಹುದು. ಈಗ ಹಳ್ಳೀ ಕಡೆ ಹೋಗಬೇಕಾಗಿರಲಿಲ್ಲ. ಏನೋ ಗೊತ್ತಿಲ್ಲಪ್ಪ; ಈಗ ಹದಿನೈದು ಇಪ್ಪತ್ತು ದಿನದಿಂದ ಅವರ ಕಾಗದಾನೇ ಬಂದಿರಲಿಲ್ಲ. ನಾನೇ ಮೊನ್ನೆ, ಇವತ್ತು ಹೊರಡ್ತೀನಿ ಬೆಳಗಿನ ರೈಲ್ನಲ್ಲಿ ಅಂತ ಒಂದು ಕಾಗದ ಬರೆದು ಪೋಸ್ಟ್ ಮಾಡಿದ್ದೆ. ಅದೇನು ಅವರಿಗೆ ತಲಪಿತೋ ಇಲ್ಲವೊ! ನೀನು ಹೀಗೆ ಹೇಳ್ತಿದೀಯಲ್ಲ! ಊರಲ್ಲಿದಾರೊ ಇಲ್ಲವೊ !

ಸಿಂಗ ಸುಮ್ಮನಿದ್ದ. ಗಾಡಿ ನಿಧಾನವಾಗಿ ಓಡುತ್ತಿತ್ತು.

ಮನೆಗೆ ಬೇಗ ಹೋಗಬೇಕೆಂಬ ಕುತೂಹಲದಿಂದ ರಾಮುಸ್ವಾಮಿ "ಇದೇನು ನಿನ್ನ ಗಾಡಿ ಎತ್ತಿನ ಗಾಡಿಗಿಂತ ಕಡೆಯಾಗಿಬಿಟ್ಟಿದೆ. ಸ್ವಲ್ಪ ಹುರಳಿ ಗಿರಳಿ ಹಾಕಿ ತಯಾರಿ ಕೊಡ್ಬಾರ್‍ದ ?'' ಎಂದ.

ಸಿಂಗ "ಎಲ್ಲಿ ಬುದ್ಧಿ, ಉಳ್ಳಿ ಎರಡ್ಸೇರು ; ಅದೂ ಸಿಕ್ಕೋಕಿಲ್ಲ. ಏನಾ ಕೋವ್ನ ಏಳಿ" ಎಂದು ಕುದುರೆಯ ಬೆನ್ನಿನ ಮೇಲೆ ಚಾಟಿಯಿಂದ ಒಂದೇಟು ಬಿಗಿದ. ಅದು ಕೆನೆದು, ಹಿಂಗಾಲಿನಲ್ಲೊಮ್ಮೆ ಒದೆದು ಓಡಿತು. ಹಳೆಯ ಗಾಡಿ ಗಡಗಡ ಶಬ್ದ ಮಾಡುತ್ತ ಬ್ರಾಹ್ಮಣರ ಬೀದಿಯ ತಗ್ಗಿಗಿಳಿಯಿತು. ಸ್ವಲ್ಪ ಹೊತ್ತಿನಲ್ಲಿಯೇ ಎಡಗಡೆಯ ಗಲ್ಲಿಯನ್ನು ಪ್ರವೇಶಿಸಿ ರಾಮುಸ್ವಾಮಿಯ ಮನೆಯ ಮುಂದೆಯೇ ಬಂದು ನಿಂತಿತು.

ಮನೆಯ ಬಾಗಿಲು ಹಾಕಿತ್ತು. ಆದರೆ ಬಾಗಿಲ ಚಿಲಕ ನೋಡಿದಾಗ ರಾಮುಸ್ವಾಮಿಗೆ ನಂಬಿಕೆ ಬಂತು. ಅಪ್ಪ ಬೀಗ ಹಾಕಿರಲಿಲ್ಲ. ಸಿಂಗ ಟ್ರಂಕು ಹಾಸಿಗೆಯನ್ನು ಇಳಿಸಿ ತೆಗೆದುಕೊಂಡು ಬಂದ. ರಾಮುಸ್ವಾಮಿ ಬಾಗಿಲನ್ನು ಮುಂದಕ್ಕೆ ತಳ್ಳಿದ. ಬರಿಯ ಬಾಗಿಲನ್ನು ಹಾಕಿತ್ತು. ಒಳಗೆ ಅಗಳಿಯನ್ನು ಹಾಕಿರಲಿಲ್ಲ. ಬಾಗಿಲು ತೆರೆಯಿತು. ಪಡಸಾಲೆ ಯಲ್ಲಿ ಎದುರಿಗೆ ಒಂದು ಹಾಸಿಗೆ ಹಾಸಿತ್ತು. ಆದರೆ ಅದರ ಮೇಲೆ

ರಂಗಣ್ಣನವರು ಮಲಗಿರಲಿಲ್ಲ. ಎದ್ದು ಒಳಗೆ ಹೋಗಿದ್ದರು. ಒಂದು ತಂಬಿಗೆ ಒಂದು ಲೋಟ ಹಾಸಿಗೆಯ ದಿಂಬಿನ ಹತ್ತಿರ ಕುಳಿತಿದ್ದುವು. ಪಂಡಿತರು ಕೊಟ್ಟ ಔಷಧದ ಸೀಸೆ ಗೂಡಿನಲ್ಲಿ ಕುಳಿತಿತ್ತು. ಆ ಸೀಸೆಯ ಪಕ್ಕದಲ್ಲಿಯೇ ಔಷಧದ ಒಂದು ಪೊಟ್ಟಣವೂ ಅರ್ಧ ಮಡಿಕೆ ಬಿಚ್ಚಿಕೊಂಡು ಕುಳಿತಿತ್ತು. ಅವೆಲ್ಲ ಹೇಳಿದುವು—ತಂದೆಗೆ ಸ್ವಸ್ತವಿಲ್ಲ, ಎಂದು. ನಿಂಗ ಸಾಮಾನನ್ನು ಪಡಸಾಲೆಯ ಗೋಡೆಯ ಹತ್ತಿರ ತಂದಿರಿಸಿದ. ಬೀದಿಯ ಬಾಗಿಲು 'ಕಿರ್‍ರ್‍ರ್' ಎಂದರೂ ತನ್ನ ಕಾಲಿನ ಚಪ್ಪಲಿ, ತನ್ನ ಟ್ರಂಕು, ಹಾಸಿಗೆಗಳಿಂದ ಸಾಕಷ್ಟು ಗಲಾಟೆ ಆಗಿದ್ದರೂ ತಂದೆಯ ಸುಳಿವು ಕಾಣ ಲಿಲ್ಲ. ನಿಂಗನಿಗೆ ಬಾಡಿಗೆಕೊಟ್ಟು ಅವನನ್ನು ಕಳಿಸಿ ಬಾಗಿಲನ್ನು ಮುಂದಕ್ಕೆ ಹಾಕುವುದಕ್ಕೂ ಬಚ್ಚಲು ಮನೆಯಿಂದ ರಂಗಣ್ಣನವರು ಪಡಸಾಲೆಯನ್ನು ಪ್ರವೇಶಿಸುವುದಕ್ಕೂ ಸರಿಹೋಯಿತು.

ತಂದೆಯ ಮುಖ ನೋಡಿದ ಕೂಡಲೆ ಮಗನಿಗೆ ಏಕೊ ದಿಗಿಲಾ ಯಿತು. ರಂಗಣ್ಣನವರು ತುಂಬ ಬಡವಾಗಿದ್ದರು. ಅವರ ಬೆನ್ನು ಸ್ವಲ್ಪ ಬಾಗಿತ್ತು. ಮುಖದ ಸುಕ್ಕು ಹೆಚ್ಚಾಗಿತ್ತು. ಮೊಳಕಾಲು ಮೊಳಕ್ಕೆ ಮಿಂಚುತ್ತಿದ್ದುವು. ಕ್ಷೌರಮಾಡಿಸಿಕೊಂಡು ಒಂದು ವಾರದ ಮೇಲಾಗಿದ್ದುದ ರಿಂದ ಮುಖದ ಮೇಲೆ ಅಲ್ಲೊಂದು ಇಲ್ಲೊಂದು ಬಿಳಿಗೂದಲು ಉದ್ದವಾಗಿ ಬೆಳೆದು ಸುರುಟಿಕೊಂಡಿದ್ದುವು. ತಲೆಗೂದಲು ಬಿಳಿಯ ಪೊದೆಯಾಗಿತ್ತು. ಮೊಳಕಾಲ ಮೇಲೆ ಕಚ್ಚೆಪಂಚೆಯಾಗಿ ಉಟ್ಟಿದ್ದ ಅಂಗವಸ್ತ್ರ ಸೋಪು ಕಂಡು ಬಹಳ ದಿನಗಳಾಗಿದ್ದಂತೆ ತೋರಿತು. ಭುಜದ ಮೇಲೆ ಮಾತ್ರ, ಒಗೆದು ಒಣಗಿಸಿ ನೆರಿಗೆ ಹಿಡಿದ ಪಂಚೆಯೊಂದು ಕುಳಿತಿತ್ತು. ಅದನ್ನು ನೋಡಿದಾಗಲೆ ರಾಮುಸ್ವಾಮಿಗೆ ಸ್ವಲ್ಪ ಸಮಾಧಾನವಾಯಿತು. ಈಗ ತಂದೆಗೆ ವಾಸಿ ಇರಬೇಕು. ಆದ್ದರಿಂದಲೇ ಎದ್ದು ಸ್ನಾನ ಮಾಡಿ ಬಂದಿ ದ್ದಾರೆ, ಎಂದುಕೊಂಡ. ರಂಗಣ್ಣನವರು ಪಂಚೆಯನ್ನು ಕೈಯಲ್ಲಿ ಹಿಡಿದು "ಈಗ ಬಂದ್ಯಾ ರಾಮಣ್ಣಾ?" ಎಂದರು.

ರಾಮುಸ್ವಾಮಿ ಚಪ್ಪಲಿಯನ್ನು ಮೂಲೆಯಲ್ಲಿ ಬಿಟ್ಟು ಕೋಟು ಬಿಚ್ಚುತ್ತ "ಹ್ಞು. ಯಾಕೆ, ನಿಂಗೆ ಮೈಯಲ್ಲಿ ಸರಿಯಾಗಿಲ್ಲವಾ?" ಎಂದು ಕೇಳಿದ.

"ಇಲ್ಲಪ್ಪ ಎಂಟೊಂಬತ್ತು ದಿನ ಆಯಿತು. ಜ್ವರ ಬರ್‍ತಿತ್ತು. ದಿನಾ ಬರ್‍ತಿತ್ತು. ಪಂಡಿತರ ಹತ್ತಿರ ಔಷಧ ತಂದು ಕುಡೀತಿದೀನಿ. ನಿನ್ನೆ ಮೊನ್ನೆ ಜ್ವರ ಇಲ್ಲ. ಆದರೆ ತುಂಬ ಸುಸ್ತು. ಸ್ನಾನಾನೇ ಮಾಡಿರ್‍ಲಿಲ್ಲ. ಈವತ್ತು ಮಾಡೋಣ ಅನ್ನಿಸಿತು. ಅಲ್ದೆ ನೀನೂ ಬರ್‍ತೀಯೆ, ಒಲೇಗೆ ಉರಿಹಾಕಿರೋಣ ಅಂದುಕೊಂಡು ಎಲ್ಲ ಮಾಡ್ದೆ. ಈಗ ಸ್ನಾನ ಆಯ್ತು. ಸ್ನಾನಮಾಡ್ತೀಯಾ?" ನೆರಿಗೆಯನ್ನು ಬಿಚ್ಚಿ ಪಂಚೆಯನ್ನುಟ್ಟು ಕೊಳ್ಳುತ್ತಾ ಹೇಳಿದರು.

ರಾಮಸ್ವಾಮಿ ಕೋಟನ್ನು ಗೂಟಕ್ಕೆ ನೇತುಹಾಕಿ ಷರಟು ಬಿಚ್ಚುತ್ತ "ಅದೇ, ಗಾಡೀ ಸಿಂಗ ಹೇಳಿದ. ನಿಮ್ಮಂದೆ ಕಾಣೋದೇ ಇಲ್ಲ, ಈಗ ನಾಕೈದ್ ದಿನದಿಂದ ಅಂದ. ಅವನ ಗಾಡೀಲೇ ಬಂದೆ ನಾನು"

"ನಾಕೈದ್ ದಿನ ಏನು, ಆಗಲೆ ಎಂಟು ದಿನದ ಮೇಲಾಯ್ತು ನಾನು ಅವನ ಅಂಗಡೀಗೆ ಹೋಗಿ. ಪಂಡಿತರ ಮನೇಗೆ ಹೋಗಿ ಔಷಧ ತರೋದೇ ನನಗೆ ದೊಡ್ಡ ಗಂಡಾಂತರ ಆಗಿಬಿಟ್ಟಿದೆ. ಏನೋ ಹಾಗೂ ಹೀಗೂ ಕಾಲೆಳೆದುಕೊಂಡು ಹೋಗ್ತಾ ಇದೀನಿ."

"ನನಗೆ ಬರೀ ಬಾರ್‍ದಾಗಿತ್ತೆ. ಪರೀಕ್ಷೆ ಮುಗಿದ ದಿನವೇ ಹೊರಟು ಭರ್‍ತಿದ್ದೆ"

"ಬರ್‍ತಿದ್ದೆ. ಯಾಕೆ ಸುಮ್ಮನೆ ನಿನಗೆ ಗಾಬರಿ ಮಾಡ್ಬೇಕೂಂತ ಬರೀಲಿಲ್ಲ. ಅದೂ ಅಲ್ದೆ ಔಷಧ ಎರಡು ದಿನ ಕುಡಿಯೋ ಹೊತ್ತಿಗೇ ಹುಷಾರಾಗಿಬಿಟ್ಟೆ. ಜ್ವರ ಕೂಡ ಬಿಟ್ಟಿದೆ. ಈಗೇನೂ ಇಲ್ಲ. ಸುಸ್ತು ಅಷ್ಟೆ. ಏಳು, ಸ್ನಾನ ಮಾಡು. ಸಾರು ಮಾಡಿದೀನಿ. ಅನ್ನ ಮಾಡ ಬೇಕು. ನೀನು ಬರೋದು ನೋಡಿಕೊಂಡು ಅಕ್ಕಿ ತೊಳೆದಿಡೋಣಾಂತ ತಡೆದಿದ್ದೆ"

"ನನ್ನ ಕಾಗದ ಬರ್‍ಲಿಲ್ವೆ?"

"ಬಂತು. ನೀನು ಇವತ್ತು ಬರ್‍ತೀಯಾಂತ ಬರ್‍ದಿದ್ದೆ. ಆದರೂ ಬಂದ ಮೇಲೆ ಇಡೋಣ. ಎಷ್ಟೊತ್ತು ಒಂದು ಪಾವು ಅಕ್ಕಿ ಅನ್ನ ಆಗೋದೂಂತ ಸುಮ್ಮನಿದ್ದೆ. ನಾನೇನೂ ಊಟ ಮಾಡೋ ಹಾಗಿಲ್ಲ.

ನನಗೆ ಒಂದಗಳೂ ಸೇರೊಲ್ಲ. ಬಾಯಿಗೆ ಹಚ್ಚಿದರೆ ವಾಂತಿ ಆಗೋ ಹಾಗಾಗುತ್ತೆ. ಅದಕ್ಕೇ ಇವತ್ತು ಮೆಣಸಿನ ಸಾರು ಮಾಡಿದೀನಿ. ನೋಡೋಣ ಸೇರುತ್ತೋ ಏನೋಂತ" ಎನ್ನುತ್ತ ಹಾಸಿಗೆಯ ಮೇಲೆ ಕುಳಿತುಕೊಂಡರು.

ರಾಮುಸ್ವಾಮಿ ಬನೀನನ್ನೂ ತೆಗೆದು, ಟವಲಿಗಾಗಿ ಹಾಸಿಗೆಯ ಹಗ್ಗವನ್ನು ಬಿಚ್ಚಿದ.

ರಂಗಣ್ಣನವರು ಮಗನನ್ನು ಕುರಿತು "ಹ್ಯಾಗೆ ಮಾಡಿದೀಯ ಪರೀಕ್ಷೇಲಿ?" ಎಂದು ಕೇಳಿದರು.

ರಾಮುಸ್ವಾಮಿ ಟವಲು ಮತ್ತು ಸ್ನಾನದ ಪಂಚೆಯನ್ನು ಹಾಸಿಗೆಯಿಂದ ಎಳೆದುಕೊಳ್ಳುತ್ತ "ಚೆನ್ನಾಗಿ ಮಾಡಿದೀನಿ; ಪಾಸಾಗುತ್ತೆ, ಪರವಾಯಿಲ್ಲ" ಎಂದ.

"ಸದ್ಯ, ಅಷ್ಟಾದರೆ ಸಾಕಪ್ಪ. ನಮ್ಮ ಶ್ರಮ ಸಾರ್ಥಕವಾಗುತ್ತೆ"—ಗೋಡೆಗೆ ಒರಗಿ ಕುಕ್ಕುರುಗಾಲಲ್ಲಿ ಕುಳಿತಿದ್ದ ರಂಗಣ್ಣನವರು ತಲೆಯ ಮೇಲೆ ಕೈ ಆಡಿಸಿಕೊಳ್ಳುತ್ತಾ ಹೇಳಿದರು.

"ಸ್ನಾನ ಮಾಡಿಬಿಡು, ನೀರು ಆರಿಹೋಗುತ್ತೆ" ಎಂದು ಹೇಳಿ ತಾವೂ ಏಕೊ ಎದ್ದರು.

ರಾಮುಸ್ವಾಮಿ "ಆಗಲಿ" ಎಂದು ಟವಲು ಸ್ನಾನದ ಪಂಚೆಯೊಡನೆ ಬಚ್ಚಲ ಮನೆಯ ಕಡೆ ಹೊರಟ.

ರಂಗಣ್ಣನವರು ಏನೋ ತರಲು ಕೋಣೆಗೆ ಹೋದರು.

ರಾಮುಸ್ವಾಮಿ ಸ್ನಾನ ಮಾಡಿಕೊಂಡು ಬರುವುದರೊಳಗಾಗಿ ಅವರು ಹಾಸಿಗೆಯ ಮೇಲೆ ಕುಳಿತು, ಐದಾರು ಕಾಗದಗಳನ್ನು ಲಕೋಟೆಗಳಿಂದ ತೆಗೆದು ಜೋಡಿಸುತ್ತಿದ್ದರು.

ಮಗ "ಯಾರದಣ್ಣಾ ಕಾಗದ?" ಎಂದು ಕೇಳಿದ. ಹಾಗೆ ಕೇಳಿದ ತಕ್ಷಣವೆ ರಂಗಣ್ಣನವರು ಉತ್ತರ ಕೊಡಲಿಲ್ಲ. ಆದರೆ ರಾಮುಸ್ವಾಮಿಗೆ ಹೊಳೆಯಿತು. ಅದು ತನ್ನ ಮಾವನವರದೇ ಎಂಬುದು. ರಂಗಣ್ಣನವರಿಗೆ ಇನ್ನೆಲ್ಲಿಂದ ಕಾಗದ ಬರಬೇಕು? ಬಂದರೆ ರೈತನಿಂದ; ಅವನೂ ಬಹಳ

ಅಪರೂಪವಾಗಿ ಬರೆಯುತ್ತಿದ್ದ. ಬರೆದರೂ ಕವರು ಬರೆಯುತ್ತಿರಲಿಲ್ಲ. ಕಾರ್ಡಿನಲ್ಲೇ ಬರೆಯುತ್ತಿದ್ದ. ಆದ್ದರಿಂದ ಬಹಳ ಸುಲಭವಾಗಿ ಅವು ತನ್ನ ಮಾವನವರವೆಂದು ಹೇಳಬಹುದಾಗಿತ್ತು.

ರಾಮುಸ್ವಾಮಿ ಹಾಸಿಗೆಯಲ್ಲಿದ್ದ ಒಗೆದ ಬನೀನು, ನಿಕ್ಕರ್, ಪಂಚೆ ತೆಗೆದು ಧರಿಸಿಕೊಂಡ. ರಂಗಣ್ಣನವರು ಕಾಗದಗಳನ್ನು ಜೋಡಿಸಿ ಕೊನೆಯ ಕಾಗದವನ್ನು ಮನಸ್ಸಿನಲ್ಲಿಯೇ ಓದಿಕೊಳ್ಳುತ್ತಾ ಕುಳಿತು ಬಿಟ್ಟಿದ್ದರು.

ಮಗ "ಯಾರದಣ್ಣಾ ಕಾಗದ?" ಎಂದು ಕೇಳಿದ್ದು ಅವರಿಗೆ ಸರಿಯಾಗಿ ಕೇಳಿಸಿತೊ ಇಲ್ಲವೊ! ರಂಗಣ್ಣನವರಿಗೆ ಸ್ವಲ್ಪ ಕಿವಿ ಮಂದ ಎಂದು ಕೆಲವರು ತಿಳಿದಿದ್ದರು. ಕೆಲವು ವೇಳೆ ಇನ್ನೊಬ್ಬರ ಮಾತಿನ ಮೇಲೆ ಅವರ ಗಮನವೇ ಇರುತ್ತಿರಲಿಲ್ಲ. ಆದ್ದರಿಂದ ಜನ ಅವರ ಕಿವಿ ಮಂದ ಎಂದುಕೊಂಡಿದ್ದರು. ಆದರೆ ನಿಜವಾದ ವಿಷಯ ರಾಮುಸ್ವಾಮಿಗೆ ಗೊತ್ತು. ಅವರ ಕಿವಿ ಮಂದವಾಗಿರಲಿಲ್ಲ. ಚುರುಕಾಗಿಯೇ ಇತ್ತು. ಮನಸ್ಸು ಯಾವುದೋ ಯೋಚನೆಯಲ್ಲಿ ತೊಡಗಿರುವಾಗ ಒಮ್ಮೊಮ್ಮೆ ಕಿವಿ ಕೆಲಸ ಮಾಡುತ್ತಿರಲಿಲ್ಲ; ಅದೂ ಮನಸ್ಸಿನೊಡನೆ ಕುಳಿತು ಆಲೋಚಿಸುತ್ತಿತ್ತೊ ಏನೊ! ಆದ್ದರಿಂದ ರಾಮುಸ್ವಾಮಿ ಮತ್ತೆ ಆ ಪ್ರಶ್ನೆ ಹಾಕಲಿಲ್ಲ. ಅವರೇ ಮಾತಾಡಲಿ, ಎಂದು ಸುಮ್ಮನಿದ್ದ.

ಸ್ವಲ್ಪ ಹೊತ್ತಾದ ಮೇಲೆ ರಂಗಣ್ಣನವರು "ರಾಮಣ್ಣಾ" ಎಂದು ಕರೆದರು. ರಾಮುಸ್ವಾಮಿ ಪಡಸಾಲೆಯಲ್ಲಿಯೇ ಇದ್ದುದು ಅವರ ಗಮನಕ್ಕೆ ಬಂದಿರಲಿಲ್ಲ.

"ಇಲ್ಲೇ ಇದೀನಿ ಏನಣ್ಣಾ?" ಎಂದ ರಾಮುಸ್ವಾಮಿ.

"ಸ್ನಾನ ಆಯ್ತು?"

"ಆಯ್ತು, ಆಗಲೆ ಆಯ್ತು"

"ನೋಡು ನಿಮ್ಮ ಮಾವ ಕಾಗದ ಬರೆದಿದಾರೆ. ನಾಲ್ಕು ಕಾಗದಾನೂ ಅವರದೆ?"

"ಆ ಇನ್ನೊಂದು?"

"ಅಚ್ಚಂಭಟ್ಟರದ್ದು"

"ಇದೇನು, ಅವರು ಇದೇ ಊರಿಂದ ಕಾಗದ ಬರೆದರೆ ?"

"ಇಲ್ಲ. ಹೊಳೆನರಸೀಪುರಕ್ಕೆ ಹೋಗಿದ್ದರು. ಅಲ್ಲಿಂದ ಅವರ ಕಾಗದ ಬಂದ ಮೇಲೆ ನಾನು ಒಂದು ಕಾಗದ ಹಾಕಿ ನನ್ನ ಕಂಡಿಷನ್ ತಿಳಿಸಿದೆ. ನಿಮ್ಮ ಮಾವ ಅದಕ್ಕೆ ಒಪ್ಪಿಕೊಂಡು ಈ ಕಾಗದ ಬರ್ದಿದಾರೆ. ನೋಡು, ಓದ್ಕೊ" ಎಂದು ತಂದೆ ಆ ಕಾಗದಗಳನ್ನೆಲ್ಲ ಮಗನ ಮುಂದೆ ಹಿಡಿದರು.

ಮಗನಿಗೆ ಅವನ್ನು ಓದುವಷ್ಟು ತಾಳ್ಮೆ ಇರಲಿಲ್ಲ—ಕಾಗದಗಳನ್ನು ಕೈಗೆ ತೆಗೆದುಕೊಳ್ಳುತ್ತಾ "ಏನಂತೆ?" ಎಂದು ಕುತೂಹಲದಿಂದ ಕೇಳಿದ.

"ಬರೋ ತಿಂಗಳು ಹನ್ನೆರಡನೇ ತಾರೀಕು ಮುಹೂರ್ತ ಇಟ್ಟಿದಾರಂತೆ. ಅವತ್ತು ನಾವಿಬ್ಬರೂ ಹೋಗಬೇಕಂತೆ"

"ಅದಕ್ಕೆ ನೀನು ಏನಂತ ಬರೆದಿ?"

"ಆಗಲಿ ಅಂತ ಬರೆದಿದೀನಿ"

ರಾಮಸ್ವಾಮಿಗೆ ಆ ಮಾತು ಕೇಳಿ ಆಶ್ಚರ್ಯವಾಯಿತು. ತನ್ನ ಮಾವನವರ ಕಾಗದವನ್ನು ಓದತೊಡಗಿದ.

ರಂಗಣ್ಣನವರು "ಅವರು ನನ್ನ ಕಂಡಿಷನ್ನಿಗೆಲ್ಲ ಒಪ್ಪಿದ್ದರಿಂದ ಆಗಲಿ ಅಂದದ್ದು" ಎಂದರು.

"ಏನು ಕಂಡಿಷನ್ನು?"

"ಏನು—ನಿನಗೆ ಗೊತ್ತಿಲ್ವೆ?"

"ಇಲ್ಲ"

"ನಿನಗೆ ನಾನು ಬರೆದಿರಲಿಲ್ವೆ?

"ಇಲ್ಲ. ಏನೂ ಬರೆದಹಾಗೆ ನೆನಪಿಲ್ಲ"

"ಏ, ಬರೆದಿದ್ದೇಂತ ಕಾಣುತ್ತೆ. ಅವರು ಎರಡು ಸಲ ಮುಹೂರ್ತ ಇಟ್ಟಾಗಲೂ ನಾನು ಅದೇ ಕಂಡಿಷ್ಷನ್ ಹಾಕಿದ್ದೆ. ಅವರು ಒಪ್ಕೊಳ್ಳಲಿಲ್ಲ. ಈಗ ಒಪ್ಕೊಂಡಿದಾರೆ. ಒಂದು ಸಾವಿರ ರೂಪಾಯಿ ಕೊಡೋದೂಂತ ಆಗಿದೆ."

"ಒಂದು ಸಾವಿರ ರೂಪಾಯಿ ಯಾತಕ್ಕೆ?"

ಮಗ ಆ ಪ್ರಶ್ನೆ ಕೇಳುತ್ತಾನೆ, ಎಂದು ರಂಗಣ್ಣನವರು ನಂಬಿರಲಿಲ್ಲ. ಆದರೆ ಆ ಪ್ರಶ್ನೆ ಬಂದು ಅವರನ್ನು ಆಶ್ಚರ್ಯಗೊಳಿಸಿತು.

"ಇದೇನು ಹೀಗೆ ಕೇಳ್ತೀಯೆ?" ಎಂದು ಮೂಗು ಸೆಟಸಿಕೊಂಡು ಮಗನ ಮುಖ ನೋಡಿದರು.

ಮಗ ಮೊದಮೊದಲು ತಂದೆಯವರ ಯಾವ ಏರ್ಪಾಟಿಗೂ 'ಇಲ್ಲ, ಆಗೊಲ್ಲ, ಯಾಕೆ, ಏನು' ಎಂದು ಕೇಳುತ್ತಿರಲಿಲ್ಲ. ಅವರು ಹೇಳಿದ ಹಾಗೆ ಅತಿ ವಿಧೇಯನಾಗಿ ನಡೆದುಕೊಳ್ಳುತ್ತಿದ್ದ. ತನ್ನ ಹಿತಕ್ಕಾಗಿಯೇ ತಂದೆ ಎಲ್ಲವನ್ನೂ ಮಾಡುತ್ತಿದ್ದಾರೆ, ಎಂದು ಆತ ಸಂಪೂರ್ಣವಾಗಿ ನಂಬಿದ್ದ. ಆದರೆ ಈಚೆಗೆ ಆ ವಿಧೇಯತೆಗೆ ಸ್ವಲ್ಪ ಬುದ್ಧಿ ಬಂದಿತ್ತು, ಈಗಂತೂ ಸಂಪೂರ್ಣವಾಗಿಯೇ ಬುದ್ಧಿ ಬಂದಂತಾಗಿತ್ತು. ಆದ್ದರಿಂದ ಮಗ ಆ ಪ್ರಶ್ನೆ ಹಾಕಿದ.

ತಂದೆ "ಯಾಕೇಂದ್ರೆ ನಿಂಗೇ" ಎಂದು ಅರ್ಥವಾಗದ ಉತ್ತರ ಹೇಳಿದರು.

"ನಂಗೆ ಅಂದರೆ?"

"ನಮ್ಮ ರೈತ ಮಾದಪ್ಪ ಬಂದಿದ್ದ. ನಮ್ಮ ಜಮೀನಿನ ಪಕ್ಕದ ಮುಕ್ಕಾಲೆಕರೆ ಖರೀದಿಗೆ ಬಂದಿದೆಯಂತೆ. ಈಗ ಆ ಸೆಟ್ಟಿ ಕೊಟ್ಟು ಬಿಡೋಕೆ ತಯಾರಾಗಿದಾನಂತೆ. ಅವನು ಹೇಳಿದ, ನೀವೇ ತೊಗೊಂಬಿಡೀಂತ. ರೈತ ಒಳ್ಳೇವನಾಗಿರೋದ್ರಿಂದ ಅದನ್ನು ತೊಗೊಳ್ಳೋಣ ಅನ್ಸಿತ್ತು; ಆದರೆ ಅದಕ್ಕೆ ಬೇಕಾದಷ್ಟು ದುಡ್ಡು ನನ್ನ ಹತ್ತಿರ ಇಲ್ಲ. ಅವನು ಆರು ನೂರು ರೂಪಾಯಿ ಕೇಳ್ತಾ ಇದಾನೆ. ಅದಕ್ಕೆ ಸರಿಯಾಗಿ ನಿಮ್ಮ ಮಾವನ ಕಾಗದ ಒಂದರ ಮೇಲೊಂದು ಮುಹೂರ್ತ ಇಟ್ಟಿದೀನಿ ಇಟ್ಟಿದೀನಿ ಅಂತ ಬರ್ತಾ ಇತ್ತು. ನಾನು ನಿಮ್ಮ ಅಳಿಯನ ಓದಿಗೋಸ್ಕರ ಒಂದು ಸಾವಿರ ರೂಪಾಯಿ ಸಾಲಮಾಡಿದ್ದೆ, ಸಾಲಗಾರನ ತಗಾದೆ ವಿಪರೀತ ಆಗಿದೆ; ಅದನ್ನ ವಾಪಸು ಕೊಟ್ಟರೆ ನಾವು ಮನುಷ್ಯರಾಗ್ತೇವೆ. ಇಲ್ದಿದ್ರೆ ಇಲ್ಲ. ಆದ್ದರಿಂದ ನೀವು ಒಂದು ಸಾವಿರ ರೂಪಾಯಿಗೆ ಏರ್ಪಾಟು

ಮಾಡಿ ಕಳಿಸಿಕೊಟ್ಟರೆ ನಾವು ಬರ್ತೀವೆ; ಇಲ್ದಿದ್ರೆ ಇಲ್ಲ' ಅಂತ ಬರೆದೆ. ಅದಕ್ಕೆ ಅವರಿಂದ ಎಷ್ಟೋ ದಿನಗಳ ವರೆಗೆ ಕಾಗದಾನೇ ಬರ್ಲಿಲ್ಲ. ಅಚ್ಚಂಭಟ್ಟರು ಹೊಳೆನರಸೀಪುರಕ್ಕೆ ಹೋಗಿದ್ದಾಗ ಅವರ ಮನೆಗೆ ಹೋಗಿದ್ದರಂತೆ. ಅವರಿಂದ ಒಂದು ಕಾಗದ ಬಂತು. ಅವರು ನಿಮ್ಮ ಮಾವ ನಮ್ಮ ಕಂಡಿಷನ್‌ಗೆ ಒಪ್ಕೊಳ್ಳೋ ಹಾಗಿದಾರೆ, ಅಂತ ತಿಳಿಸಿದ್ದರು. ಅವರ ಕಾಗದ ಬಂದ ಒಂದು ವಾರದ ಮೇಲೆ ನಿಮ್ಮ ಮಾವ ಬರೆದರು. ನೋಡು ಆ ಕೊನೇ ಕಾಗದಾನ" ಎಂದು ಸಂದರ್ಭವನ್ನು ವಿವರಿಸಿದರು.

ರಾಮಸ್ವಾಮಿ ಅಷ್ಟು ಹೊತ್ತಿಗಾಗಲೆ ಕಡೆಯ ಕಾಗದವನ್ನು ಸೂಕ್ಷ್ಮವಾಗಿ ಓದಿಕೊಂಡಿದ್ದ.

ತಂದೆ ತನ್ನ ಮಾವನವರನ್ನು ಸಾವಿರ ರೂಪಾಯಿ ಕೇಳಿದ್ದು ಅವನಿಗೆ ಸಮಾಧಾನವನ್ನುಂಟುಮಾಡಿರಲಿಲ್ಲ. ಅದನ್ನು ವ್ಯಕ್ತಪಡಿಸಲೊ ಬೇಡವೊ ಎಂದು ತುಟಿ ಅನುಮಾನಿಸುತ್ತಿತ್ತು. ರಂಗಣ್ಣನವರು ಮಗನ ಮುಖ ನೋಡಿದರು. ಅವರಿಗೆ ಈ ಅಸಮಾಧಾನ ವ್ಯಕ್ತವಾಗಿರಬೇಕು. ಆದರೆ ಅವರು ತಿಳಿದುದು ಬೇರೆ ರೀತಿ. ಮಗ ತಮ್ಮ ಅತ್ಯಂತ ವಿಧೇಯ ಪುತ್ರನಾಗಿ, ತಮ್ಮ ಮಾತನ್ನು ಪಾಲಿಸುತ್ತಿರುವಂತೆ ಅವರಿಗೆ ಕಂಡಿತು. ಅವರು 'ಆ ಹೆಣ್ಣಿನ ಯೋಚನೆ ಬಿಟ್ಟುಬಿಡು. ಸಾವಿರ ರೂಪಾಯಿ ತಂದು ಮುಂದೆ ಸುರೀತೀನಿ ಅಂದರೂ ಆ ಕಡೆ ತಿರುಗಿ ನೋಡೋದು ಬ್ಯಾಡ' ಅಂದ ಮಾತು ಅವರಿಗೇ ನೆನಪಾಯಿತು. ಆದ್ದರಿಂದ ಅವರೇ ಮಾತಿಗೆ ಮೊದಲು ಮಾಡಿದರು.

"ಹಿಂದೆ ಆದದ್ದನ್ನೆಲ್ಲ ಮರೆತುಬಿಡಬೇಕು ರಾಮಣ್ಣಾ" ಎಂದರು.

ಆ ಮಾತು ರಾಮಸ್ವಾಮಿಗೆ ಆಶ್ಚರ್ಯವನ್ನುಂಟುಮಾಡಿತ್ತು; ಆದರೆ ಸಾವಿರ ರೂಪಾಯಿಯ ನೆನಪಾದಾಗ ಅದು ಅಷ್ಟೇನೂ ಆಶ್ಚರ್ಯವನ್ನುಂಟು ಮಾಡಲಿಲ್ಲ. ದುಡ್ಡಿನ ಮುಖ ಕಂಡರೆ ಅವರು ಹಾಗಾಗುತ್ತಾರೆ ಎಂಬುದು ಅವನಿಗೆ ಚೆನ್ನಾಗಿ ಗೊತ್ತು. ಸ್ವಲ್ಪ ಹೊತ್ತು ಸುಮ್ಮನೆ ಯೋಚಿಸಿದ. ಈ ಸಂದರ್ಭದಲ್ಲಿ ಎದುರು ಮಾತಾಡಿದರೆ ಎಲ್ಲ ಕೆಡುತ್ತದೆ ಎಂದುಕೊಂಡು ಮನಸ್ಸಿನ ಲಗಾಮು ಹಿಡಿದೆಳೆದ.

ಮಗ ಉತ್ತರ ಹೇಳುವನೆಂದು ನಂಬಿದ್ದ ರಂಗಣ್ಣನವರಿಗೆ ಮಗನ ಮೌನ ನೋಡಿ ನಿರಾಸೆಯಾಯಿತು. ತಲೆಯೆತ್ತಿ ಆತನ ಮುಖ ನೋಡಿದರು. ತಂದೆ ತನ್ನಿಂದ ಉತ್ತರ ಅಪೇಕ್ಷಿಸುತ್ತಿದ್ದಾರೆಂದು ತಿಳಿದು ಉತ್ತರ ಹೇಳಬೇಕಾಯಿತು.

"ಸರಿ" ಎಂದ. ಆ ಕಾಗದಗಳನ್ನೆಲ್ಲ ಬೇಗಬೇಗ ಓದಿಕೊಂಡ. ಅವನು ಎಲ್ಲ ಓದಿಕೊಳ್ಳಲಿ, ಎಂದು ಸ್ವಲ್ಪ ಹೊತ್ತು ಸುಮ್ಮನಿದ್ದ ರಂಗಣ್ಣನವರು,

"ಹಾಗಾದರೆ ನಾವು ಇಲ್ಲಿಂದ ಹತ್ತನೇ ತಾರೀಕು ಹೊರಡ್ಬೇಕಾಗುತ್ತೆ. ಹನ್ನೊಂದನೇ ತಾರೀಕು ಮಂಗಳವಾರ. ಆದ್ದರಿಂದ ಸೋಮವಾರ ಸಂಜೆ ರೈಲಿನಲ್ಲೇ ಹೊರಡಬೇಕು" ಎಂದರು.

"ಸರಿ. ಅವರು ದುಡ್ಡು ಕಳಿಸಿದರೊ ?"

"ಕಳಿಸ್ತಾರೆ. ನಾಳೆ ನಾಡಿದ್ದರಲ್ಲಿ ಹಣ ಬಂದ್ಬಿಡುತ್ತೆ, ಅಚ್ಚಂಭಟ್ಟರೂ ಸಹ ಬರ್‍ತಿದಾರೆ."

"ಅಚ್ಚಂಭಟ್ಟರು ಈಗ ಊರಿಗೆ ಬಂದಿದಾರ ?"

"ಇಲ್ಲ, ಅವರು ಬೆಂಗಳೂರಿಗೆ ಹೋಗಿದಾರಂತೆ. ಮೊಸರಿನೋಳನ್ನ ಕೇಳಿದೆ. ಇನ್ನೂ ಬಂದಿಲ್ಲ, ಅಂದಳು. ಅವರು ಬಂದರೆ ಇಲ್ಲಿಗೆ ಬಂದೇ ಬರ್‍ತಾರೆ. ಹೊಳೆನರಸೀಪುರಕ್ಕೆ ಹೋದ ಮೇಲೆ ಅವರು ನನ್ನನ್ನ ನೋಡೇ ಇಲ್ಲ"

"ನಾನೂ ಅವರನ್ನು ನೋಡಬೇಕಾಗಿತ್ತು. ಮಾಧೂರಾಯರು ಅವರಿಗೆ ನಮಸ್ಕಾರ ಹೇಳು ಅಂದಿದ್ರು"

"ಮಾಧೂರಾಯರ ಮನೇಲಿ ಎಲ್ಲ ಆರೋಗ್ಯವೊ?"

"ಹ್ಞು, ಎಲ್ಲ ಚೆನ್ನಾಗಿದಾರೆ"

"ಅವರಿಗೆ ಎಲ್ಲ ಸರಿಯಾಗಿ ಹೇಳಿ, ನಮಸ್ಕಾರ ಮಾಡಿ, ತುಂಬ ಉಪಕಾರ ಆಯ್ತು ಅಂತ...."

"ಹೇಳ್ದೆ, ಎಲ್ಲ ಹೇಳಿ ಬಂದೆ"

"ಇನ್ನೇನು ಓದು ಮುಗೀತು. ಇನ್ನು ಕೆಲಸಕ್ಕೆ ಪ್ರಯತ್ನ

ಮಾಡ್ಬೇಕಪ್ಪ. ಯಾವುದಾದರೂ ಒಂದು ಒಳ್ಳೆ ಕೆಲಸ ಸಿಕ್ಕಿಬಿಟ್ಟರೆ ಅಲ್ಲಿಗೆ ಎಲ್ಲ ಸರಿಹೋಗುತ್ತೆ. ನಿನಗೊಂದು ನೆಲೆ ಕಾಣಿಸಿದಹಾಗಾಗುತ್ತೆ. ನನ್ನ ಮನಸ್ಸಿಗೆ ಆಗ ಸಮಾಧಾನ. ಇನ್ನು ಅವಳನ್ನ ಮನೆಗೆ ಕರೆಸಿ ಕೊಂಡರೆ ಸಂಸಾರ ನಡೀಬೇಕಲ್ಲ!"—ತಂದೆ ಈ ರೀತಿ ಮಾತಾಡುವುದು ತುಂಬ ಅಪರೂಪ. ಆ ಒಂದು ಸಾವಿರ ರೂಪಾಯಿ ಅವರನ್ನು ಹಣ್ಣು ಮಾಡಿಬಿಟ್ಟಿತ್ತು. ಅದನ್ನು ನೆನಸಿಕೊಂಡಾಗ ರಾಮುಸ್ವಾಮಿಯ ಮನಸ್ಸಿಗೆ ತುಂಬ ಬೇಸರವಾಯಿತು. ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿ ಬಿಡೋಣ, ಎಂದು ಇನ್ನೊಮ್ಮೆ ಅನ್ನಿಸಿತು. ಆದರೆ ಕೆಲಸ ಕೆಡುತ್ತದೆ, ಎಂದುಕೊಂಡು ಸುಮ್ಮನಾದ; ನಾಲಗೆ ಬಿಗಿಹಿಡಿದ.

ರಂಗಣ್ಣನವರು "ಈ ಊರ ಸ್ಕೂಲಿನಲ್ಲಿ ಒಂದು ಕೆಲಸ ಖಾಲಿ ಇದೆಯಂತೆ ರಾಮಣ್ಣಾ" ಎಂದರು.

"ಯಾವ ಸ್ಕೂಲಿನಲ್ಲಿ ?"

"ಹೈಸ್ಕೂಲು"

"ಏನು ಮೇಸ್ಟರ ಕೆಲಸಾನ?"

"ಹೌದು."

"ಅದಕ್ಕೆ ಹ್ಯಾಗೆ ಪ್ರಯತ್ನ ಮಾಡೋದು. ಇನ್ನೂ ಬಿ. ಎ. ಪಾಸಾಗಿಲ್ಲ, ಆಗಲೆ ಕೆಲಸ ಕೊಡಿ ಅನ್ನೋದೆ ?"

"ಅಲ್ಲ. ಕೆಲಸ ಖಾಲಿ ಇರೋದ್ರಿಂದ ಈಗ್ಲಿಂದ ಪ್ರಯತ್ನ ಮಾಡಿದರೆ ಸ್ಕೂಲು ಬಾಗಿಲು ತೆಗೆಯೋ ಹೊತ್ತಿಗೆ ಬಿ. ಎ. ನೂ ಪಾಸಾಗಿರುತ್ತೆ, ಕೆಲಸಾನೂ ಸಿಕ್ಕುತ್ತೇಂತ" ಎಂದು ತಮ್ಮ ದೂರಾಲೋಚನೆಯನ್ನು ವ್ಯಕ್ತಪಡಿಸಿದರು.

ರಾಮುಸ್ವಾಮಿ "ಆಗಲಿ, ನೋಡೋಣ. ಕೆಲಸಕ್ಕೇನು. ಅದರಲ್ಲೂ ಹೈಸ್ಕೂಲು ಮೇಸ್ಟರ ಕೆಲಸ ಬೇಕಾದಷ್ಟು ಸಿಕ್ಕುತ್ತೆ. ಸ್ಕೂಲು ಬಾಗಿಲು ತೆಗೀಲಿ ನೋಡು. ಪಾಸೊಂದಾಗಲಿ" ಎಂದ.

"ಆಗಲಿ. ಅದಕ್ಕಲ್ಲ. ನಾನು ಹೇಳಿದ್ದು. ಈ ಊರಲ್ಲೇ ಸಿಕ್ಕಿದರೆ ಅನುಕೂಲಾಂತ"

"ಸರಿ, ಪ್ರಯತ್ನ ಮಾಡೋಣ." ಎಂದು ರಾಮುಸ್ವಾಮಿ ಹಾಸಿಗೆಯಲ್ಲಿದ್ದ ಬಟ್ಟೆಗಳನ್ನೆಲ್ಲ ಹೊರಗೆ ತೆಗೆದು ವಿಂಗಡಿಸತೊಡಗಿದ.

ರಂಗಣ್ಣನವರು ಹಾಸಿಗೆಯಿಂದ ಎದ್ದು "ಎಂಥಾ ಮರವೊ ನಂಗೆ. ಸುಮ್ಮನೆ ಕೂತಿದೀನಿ. ಅನ್ನಕ್ಕೂ ಇಡಲಿಲ್ಲ. ಆಗಲೆ ಒಂದು ಗಂಟೆ ಆಯ್ತೊ ಏನೊ. ಬೆಳಗ್ಗೆ ಏನಾದರೂ ತಿಂಡಿ ತೊಗೊಂಡಿದ್ಯೊ ಇಲ್ವೊ?" ಎನ್ನುತ್ತಾ ಅಡಿಗೆಮನೆಗೆ ಹೋದರು.

ಸ್ವಲ್ಪ ಹೊತ್ತಿನಲ್ಲಿಯೇ ರಂಗಣ್ಣನವರು ಅಡಿಗೆಮನೆಯಿಂದ ಪಡಸಾಲೆಗೆ ಬಂದರು.

ಆಗ ರಾಮುಸ್ವಾಮಿ ಟ್ರಂಕಿನ ಬಾಗಿಲು ತೆರೆದು ಅದರಲ್ಲಿದ್ದ ಸಾಮಾನನ್ನೆಲ್ಲ ಹೊರಗೆ ತೆಗೆದಿಡುತ್ತಿದ್ದ.

ರಾಮುಸ್ವಾಮಿ "ಅವರಿಗೆ ನೀನು ಏನು ಕಾಗದ ಬರೆದಿ?" ಎಂದು ಕೇಳಿದ.

"ಯಾರಿಗೆ?" ಎಂದು ರಂಗಣ್ಣನವರು ಕೇಳಿದರು.

"ನಮ್ಮ ಮಾವನವರಿಗೆ"

"ಬರೆದೆ. ಹೀಗೆ: ಸಾಲ ಕೊಟ್ಟೋನ ತಗಾದೆ ಹೆಚ್ಚಾಗಿದೆ. ಆದ್ದರಿಂದ ತಾವು ಅದಕ್ಕೆ ಏರ್ಪಾಟು ಮಾಡಿ ಹಣ ಕಳಿಸಿಕೊಟ್ಟರೆ ಆಗಬಹುದು. ಆ ತಾರೀಖಿಗೆ ಬರೋ ಏರ್ಪಾಟು ಮಾಡಕೋತೀವೆ. ಯಾವುದಕ್ಕೂ ಕೂಡಲೆ ಬರೀರಿ, ಅಂತ ಬರೆದೆ. ಅದಕ್ಕೇ ಆ ಕಡೇ ಕಾಗದ ಅವರಿಂದ ಬಂದಿರೋದು. ಒಪ್ಕೊಂಡಿದೀನಿ, ಅಂತ ಬರೆದಿದಾರೆ."

ರಾಮುಸ್ವಾಮಿಯ ಮನಸ್ಸು ತಡೆಯಲಿಲ್ಲ. ಹೇಗಾದರೂ ಮಾಡಿ ತನ್ನ ಅಸಮಾಧಾನವನ್ನು ವ್ಯಕ್ತಪಡಿಸಬೇಕು ಎನ್ನಿಸಿತು. ನೇರವಾಗಿ ಹೇಳುವ ಧೈರ್ಯ ಇನ್ನೂ ಬಂದಿರಲಿಲ್ಲವಾದ್ದರಿಂದ "ಅವರನ್ನ ಕೇಳಲೇ ಬಾರದಾಗಿತ್ತು" ಎಂದ.

"ಯಾಕೆ?"

"ಅವರು ಒಂದು ಸಲ ಇಲ್ಲ ಅಂದಮೇಲೆ ಪುನಃ ಅವರನ್ನ ಕೇಳೋದು ಅಷ್ಟು ಚೆನ್ನಾಗಿರೊಲ್ಲ ಅವೂ ಅಲ್ದೆ ಮೊದಲೇ ಅಸಮಾಧಾನ ಆಗಿರೋವಾಗ........"

“ಸರಿ. ಆದರೆ ಅವರಾಗವರು ಕಾಗದದ ಮೇಲೆ ಕಾಗದ ಬರೆದಿದ್ದರಿಂದಲೇ ನಾನು ಈ ಕಂಡಿಷನ್ ಹಾಕಿದ್ದು. ನಾನೇನು ದುಡ್ಡು ಕೊಡೀಪ್ಪಾಂತ ಅವರ ಮನೇ ಮುಂದೆ ಹೋಗಿ ಭಿಕ್ಷೆ ಬೇಡಲಿಲ್ಲ.”

“ಆಗಲಿ. ಆದರೆ ದುಡ್ಡು ಇಸ್ಕೊಂಡು....”

ಮಗನ ಅಸಮಾಧಾನ ತಂದೆಗೆ ಗೊತ್ತಾಯಿತೊ, ಏನೊ. ಎಂದಿನಂತೆ ತಕ್ಷಣವೆ ರೇಗಿಬಿಟ್ಟರು. ಹುಲ್ಲಿಗೆ ಬೆಂಕಿ ಹತ್ತಿದ ಹಾಗಾಯಿತು.

“ಹಾಗಾದರೆ ಹಾಗೆ ಹೋಗಿ, ಹುಡುಗೀನ ಮನೇಗ್ ಕರ್ಕೊಂಡ್ಬರ್‍ತಿದ್ಯೊ?”

“ಇಲ್ಲ, ಆ ಮಾತು ಇನ್ನೂ ಬಂದಿಲ್ಲವಲ್ಲ. ಕರ್ಕೊಂಡ್ಬರ್‍ತಿದ್ವೊ ಇಲ್ವೊ ಆ ಮಾತು ಬೇರೆ.”

“ಹಾಗಾದರೆ ಆ ಹುಡುಗೀನ ಬಿಟ್ಟು ಬಿಡೋಣಾಂತಿದ್ಯೊ?”

“ಅದೂ ಈಗ ಬಂದಿಲ್ಲವಲ್ಲ?” ಮಗನ ಮಾತಿನ ಸರಣಿ ನೋಡಿ ತಂದೆಗೆ ಸಮಾಧಾನವಾಯಿತು.

“ಹಾಗಾದರೆ ನಿನ್ನ ಅಭಿಪ್ರಾಯವೇನು?”

“ಏನೂ ಇಲ್ಲ. ಅವರನ್ನ ದುಡ್ಡು ಕೇಳಬಾರದಾಗಿತ್ತೂಂತ.”

“ಕೇಳಿದರೇನು ತಪ್ಪು? ಯಾರಿಗೋಸ್ಕರ? ಅವರ ಮಗಳು ಅಳಿಯನಿಗೋಸ್ಕರವೆ. ನನಗೇನು ಬೇರೆ ಮಕ್ಕಳಿದಾರೆಯೆ, ಇರೋನೊಬ್ಬ ಈ ಮನೆ ಜಮೀನು ಎಲ್ಲ ನಿನಗೇ ಹೋಗೋದು. ಅಂಥದ್ರಲ್ಲಿ ಅವರು ಅಳಿಯನಿಗೆ ಒಂದು ಸಾವಿರ ರೂಪಾಯಿ ಕೊಡೋದು ಏನು ಹೆಚ್ಚು!”

“ಸರಿ. ಆದರೆ ನೀನು ಅವರಿಗೆ ಹಾಗೆ ಹೇಳಿಲ್ವಲ್ಲ? ಓದಿಗೆ ಸಾಲ ಮಾಡಿದೀನೆ. ಅದನ್ನ ತೀರಿಸೋಕೆ ಕೊಡೀಂತ ಹೇಳಿದೀಯಲ್ಲ?”

“ಹೌದು ಬೇಕಂತ ಹಾಗೆ ಬರೆದಿರೋದು—ಅದೂ ಹಟದ ಮೇಲೆ. ಅವರು ಯಾವಾಗ ತಮ್ಮ ಮಾತಿನಂತೆ ನಡೆದುಕೊಳ್ಳಲಿಲ್ಲವೊ ಅವರಮೇಲೆ ಹಟ ಸಾಧಿಸಿಕೊಳ್ಳಲೇಬೇಕು ಎಂತ ಹೀಗೆ ಬರೆದೆ. ಮದುವೆಗೆ ಮುಂಚೆ ಏನು ಹೇಳಿದರು. ಬಿ.ಎ.ಬಿ.ಎಲ್., ಎಲ್ಲ ನಾನೇ ಓದಿಸ್ತೀನಿ ಅಂದರು

ಆದರೆ ಕೊನೆಗೆ ಮಾಡಿದ್ದೇನು; ವರೋಪಚಾರದಲ್ಲಿ ಕೂಡ ಚೌಕಾಸಿ. ಅವರ ಗುಣ ನನಗೆ ಸರಿಬೀಳಲಿಲ್ಲ. ಏನೋ ಹುಡುಗಿ ಚೆನ್ನಾಗಿದಾಳೇಂತ ಒಪ್ಪಿಕೊಳ್ಳಬೇಕಾಯಿತು. ಆದರೆ ನಿಮ್ಮಮ್ಮನಿಗೆ ಅದೂ ಇಷ್ಟ ಇರಲಿಲ್ಲ, ಸಂತಾನ ಫಲ ಬೇರೆ ಚೆನ್ನಾಗಿಲ್ಲಾಂತ ಅವಳು ತುಂಬಾ ಕೊರಗಿದಳು. ಆ ಕೊರಗೇ ಅವಳನ್ನ ತಿಂದುಬಿಟ್ಟಿತು. ಏನೋ ಆದದ್ದಾಯಿತು. ಆಗಿರೋದನ್ನ ಸರಿಪಡಿಸೋದುತ್ತಮಾಂತ ಯೋಚನೆಮಾಡ್ದೆ. ಅದೂ ನಿನ್ನ ಓದು ಮುಗೀಲಿ, ಅವರೂ ಚೆನ್ನಾಗಿ ಹಣ್ಣಾಗಲಿ ಅಂತ ಇಷ್ಟು ದಿನ ಸುಮ್ಮನಿದ್ದೆ."

ರಾಮಸ್ವಾಮಿ ಪೆಟ್ಟಿಗೆಯಲ್ಲಿ ಇಡಬೇಕಾದ್ದದನ್ನೆಲ್ಲ ಇಟ್ಟು ಪುಸ್ತಕಗಳು, ಕೊಬ್ಬರಿಯೆಣ್ಣೆ, ಕನ್ನಡಿ, ಷೇವಿಂಗ್ ಸೆಟ್ ಮುಂತಾದುವುಗಳನ್ನೆಲ್ಲ ಕೋಣೆಯ ಗೂಡಿನಲ್ಲಿ ಇಟ್ಟುಬಂದ.

ಅವನೂ ಚೆನ್ನಾಗಿ ಹಣ್ಣಾಗಿದ್ದ. ಆದ್ದರಿಂದ ಹನ್ನೆರಡನೆಯ ತಾರೀಕಿನ ಮುಹೂರ್ತಕ್ಕೆ ಅಡ್ಡಿ ಬರದೇ ಇರಲಿ, ಎಂದು ಸುಮ್ಮನಾದ.

ಉತ್ತರ ಕೊಡದಿದ್ದ ಮಗನನ್ನು ಕುರಿತು ರಂಗಣ್ಣನವರು "ಸರಿಯೋ ಇಲ್ಲವೋ ನಾ ಮಾಡಿದ್ದು ?" ಎಂದು ಕೇಳಿದರು.

ಹಾಸಿಗೆಯನ್ನು ಸುತ್ತುತ್ತ ರಾಮಸ್ವಾಮಿ "ಸರಿ" ಎಂದ.

ರಂಗಣ್ಣನವರು ಅನ್ನ ಏನಾಯಿತೊ ನೋಡೋಣ ಎಂದು ಅಡಿಗೆ ಮನೆಗೆ ಹೋದರು.

ರಾಮಸ್ವಾಮಿಗೆ ಆಗ ಮಾಧವರಾಯರ ಮಾತು ನೆನಪಿಗೆ ಬಂತು. ತಂದೆಗೆ ಸರಿಯಾಗಿ ಬುದ್ಧಿ ಹೇಳಿ ಹೆಂಡತಿಯನ್ನು ಮನೆಗೆ ಕರೆಸಿಕೊಳ್ಳಲು ಈಗ ಹೆಚ್ಚು ಕಷ್ಟಪಡಬೇಕಾಗಿಲ್ಲ, ಎಂದುಕೊಂಡ. ತಂದೆಯವರೇ ಆ ಕೆಲಸದಲ್ಲಿ ಮುಂದುವರಿದಿದ್ದರು. ಅವರು ಸಾವಿರ ರೂಪಾಯಿ ತೆಗೆದುಕೊಳ್ಳುವುದು ಮನಸ್ಸಿಗೆ ಸ್ವಲ್ಪ ಬೇಸರವನ್ನುಂಟುಮಾಡುತ್ತಿದ್ದರೂ ಮಾಧವರಾಯರು, ರಂಗಸ್ವಾಮಿ ಮತ್ತು ಅಚ್ಚಂಭಟ್ಟರ ಮಾತು ನೆನಪಿಗೆ ಬಂದಾಗ ಹೇಗಾದರೂ ಆಗಲಿ, ಗೌರಿ ಮನೆಗೆ ಬಂದರೆ ಸಾಕು ಎನ್ನಿಸಿತು. ಆದ್ದರಿಂದ ತಂದೆಯ ಮಾತನ್ನು ಹೆಚ್ಚು ವಿರೋಧಿಸದೆ ಬಾಯಿಬಿಗಿಹಿಡಿದ.

ಆದರೂ ಅಷ್ಟರ ಮಟ್ಟಿಗೆ 'ಯಾಕೆ, ಏನು' ಎಂದು ಚರ್ಚೆ ನಡಸಿದ್ದನ್ನು ನೋಡಿ ರಂಗಣ್ಣನವರು 'ರಾಮಸ್ವಾಮಿ ಬದಲಾಯಿಸಿದಾನೆ' ಎಂದುಕೊಂಡರೂ 'ಕೆಟ್ಟಿಲ್ಲ' ಎಂದು ಸಮಾಧಾನಗೊಂಡಿದ್ದರು. ಆ ಗಂಡು ತಂದೆ ಹಾಕಿದ್ದ ಗೆರೆಯಲ್ಲಿಯೇ ಇದ್ದು ಕಾಲ ಕಳೆದಿದ್ದ. ಕಾಲೇಜು ಓದು, ನಗರದ ವಾಸ, ವಯಸ್ಸು ಮಗನ ಬದಲಾವಣೆಗೆ ಕಾರಣ ಇರಬಹುದು ಎಂದುಕೊಂಡು ರಂಗಣ್ಣನವರು ಸುಮ್ಮನಾದರು.

"ಅನ್ನ ಆಗಿದೆ ಏಳ್ತಿಯೇನು ಊಟಕ್ಕೆ?" ಎನ್ನುತ್ತ ಅವರು ಪಡಸಾಲೆಗೆ ಬಂದರು.

ರಾಮಸ್ವಾಮಿ "ಆಗಲಿ, ಇಬ್ಬರೂ ಒಟ್ಟಿಗೇನೇ ಕೂತ್ಕೊಳ್ಳೋಣ" ಎಂದ.

ರಂಗಣ್ಣನವರು ಬೀದಿಯ ಬಾಗಿಲ ಅಗಳಿ ಹಾಕಿದರು.

೩

ಎರಡನೆಯ ತಾರೀಕು ಹೊಳೆನರಸೀಪುರದಿಂದ ಸಾವಿರ ರೂಪಾಯಿ ಬಂತು. ಮೂರನೆಯ ತಾರೀಕೇ ರಂಗಣ್ಣನವರು ಸೆಟ್ಟಿಯ ಹತ್ತಿರ ಹೋಗಿ ಜಮೀನಿನ ವಿಷಯವಾಗಿ ಮಾತಾಡಿಕೊಂಡು ಬಂದರು. ಸೆಟ್ಟಿ "ಇಲ್ಲ, ಎಂಟು ನೂರಕ್ಕೆ ಆಗಲೆ ಮಾತಾಗಿದೆ. ಆರ್ನೂರಕ್ಕೆ ಹ್ಯಾಗೆ ಕೊಡಲಿ" ಎಂದ. ಆಗ ರಂಗಣ್ಣನವರು ಹಳ್ಳಿಗೆ ಹೋಗಿ ಮಾದಪ್ಪನನ್ನು ಕರೆದುಕೊಂಡು ಬರಬೇಕಾಯಿತು. ಮಾದಪ್ಪ ಬಂದು ಏನೇನೋ ಹೇಳಿದ ಮೇಲೆ ಸೆಟ್ಟಿ ಖರ್ಚುಗಿರ್ಚು ಎಲ್ಲ ಸೇರಿ ಏಳು ನೂರ ಐವತ್ತಕ್ಕೆ ಬಂದ. ಐದನೆಯ ತಾರೀಕು ಜಮೀನಿನ ಕ್ರಯ ಪತ್ರ ಆಯಿತು; ಹತ್ತನೆಯ ತಾರೀಕು ಸಂಜೆ ಹೊರಟುಬರುತ್ತೇವೆ, ಎಂಬ ಕಾಗದ ಹೊಳೆನರಸೀಪುರಕ್ಕೆ ಹೋಯಿತು.

ಆ ದಿನ ಮಧ್ಯಾಹ್ನವೇ ನಿಷೇಕ ಪ್ರಸ್ತಕ್ಕೆ ತೆಗೆದುಕೊಂಡು ಹೋಗುವ ಉಡುಗೊರೆಯ ವಿಷಯವಾಗಿ ಮಾತಾಯಿತು. ರಾಮಸ್ವಾಮಿ ಪಡಸಾಲೆ

ಯಲ್ಲಿ ಚಾಪೆಯ ಮೇಲೆ ಕುಳಿತು ಯಾವುದೊ ಇಂಗ್ಲಿಷ್ ಕತೆಯ ಪುಸ್ತಕ ಓದುತ್ತಿದ್ದ.

ಊಟ ಮುಗಿಸಿಕೊಂಡು ಅಡಿಗೆಯ ಮನೆಯಿಂದ ಬಂದ ರಂಗಣ್ಣ ನವರು "ನಾವು ಒಂದು ಸೀರೆ, ಒಂದೆರಡು ಕಣ ತೊಗೊಳ್ಳಬೇಕಾಗುತ್ತೆ. ನೀನೂ ಬಂದರೆ ನಾಳೆ ಸಂಜೆ ತುಳಜಪ್ಪನ ಅಂಗಡಿಗೆ ಹೋಗಿಬರೋಣ" ಎಂದರು.

ರಾಮಸ್ವಾಮಿ ತೆರೆದಿದ್ದ ಪುಸ್ತಕವನ್ನು ಹಾಗೆಯೇ ಬೋರಲಾಗಿ ಮಲಗಿಸಿ "ಎಂಥ ಸೀರೆ ತೊಗೊಳ್ಳೋದು?" ಎಂದು ಕೇಳಿದ.

"ಎಂಥದ್ದು ಅಂದರೆ?—ಸ್ವಲ್ಪ ಚೆನ್ನಾಗಿರೋದೇ"

"ಎಷ್ಟು ರೂಪಾಯಿಂದು?"

"ನಲವತ್ತೈವತ್ತು ರೂಪಾಯಿಂದು"

"ಸರಿ, ನಾಳೆ ಹೋಗೋಣ"

"ಆ ಸಾವಿರ ರೂಪಾಯಲ್ಲಿ ಇನ್ನೂರೈವತ್ತು ರೂಪಾಯಿ ಉಳಿದಿದೆ. ಅದರಲ್ಲಿ ಒಂದು ಸೀರೆ ಒಂದೆರಡು ಕಣ ತೊಗೊಂಡು ಉಳಿದುದನ್ನು ಹಾಗೇ ಇಟ್ಕೊಂಡಿರೋಣ. ಸಮಯ ಸಂಧರ್ಭ ಹೇಗೆ ಬರುತ್ತೋ, ಕೈಗಾವಲಿಗೆ ನಾಲ್ಕು ಕಾಸು ನಗದು ಇರಬೇಕು. ನನ್ನ ಹತ್ತಿರ ಮೂರು ಕಾಸೂ ಇರಲಿಲ್ಲ."

"ಏನು ಸಮಯ ಸಂದರ್ಭ?"

"ಏನಾದರೂ—ನಾಳೆ ನಿನಗೆ ಕೆಲಸ ಸಿಕ್ತಪ್ಪ; ಬೇರೆ ಊರಿಗೇ ಹೋಗಬೇಕಾಯ್ತು. ಹೊಸದಾಗಿ ಹೋಗಿ ಸಂಸಾರ ಹೂಡಬೇಕಾದರೆ ಒಂದೈವತ್ತು ಅರುವತ್ತು ರೂಪಾಯಿ ಬೇಕಾಗೊಲ್ಲವೆ? ಇಲ್ಲದಿದ್ದರೆ ನಾಳೆ ನಿನ್ನ ಹೆಂಡತಿ ಮನೆಗೆ ಬಂದಳಪ್ಪ. ನಾವೇನೋ ಹೆಂಗಸರಿಲ್ಲದೆ ಹಾಗೂ ಹೀಗೂ ಎರಡು ವರ್ಷ ಕಳೆದ್ಬಿಟ್ಟಿದೇವೆ. ಹೆಂಗಸು ಮನೇಲಿದ್ದರೆ ಅಗತ್ಯ ವಾಗಿ ಬೇಕಾದ ಪಾತ್ರೆ ಪಡಗ ಇರಬೇಡವೆ? ಇದ್ದದ್ದೆಲ್ಲ ಹಾಳಾಗಿವೆ. ಕೆಲ ವನ್ನಾದರೂ ತೊಗೋಬಹುದು." ಎನ್ನುತ್ತಾ ಕಾಫಿ ಒಲೆ ಹೊತ್ತಿಸಲು ಅಡಿಗೆಮನೆಯ ಕಡೆ ಹೋದರು.

ತಂದೆ ಇಷ್ಟು ಹಿತವಾಗಿ, ಸಮಂಜಸವಾಗಿ ಮಾತಾಡುವುದು ಬಹಳ ಅಪರೂಪ. ಸಾವಿರ ರೂಪಾಯಿ ಅವರನ್ನು ಹಾಗೆ ಮಾಡಿಸಿದೆ, ಎಂದು ಅನ್ನಿಸಿದರೂ 'ಇಲ್ಲ ತಂದೆಯವರು ನಿಜವಾಗಿಯೂ ಬದಲಾಯಿಸಿದ್ದಾರೆ' ಎಂದುಕೊಂಡ ರಾಮುಸ್ವಾಮಿ.

ಆ ಎರಡು ವರುಷದ ಒಂಟಿ ಜೀವನ ಅವರನ್ನು ಹಾಗೆ ಮಾಡಿತ್ತು. ಅವರೂ ಹಣ್ಣಾಗಿದ್ದರು; ಮಗನ ಸಂಸಾರದ ಕಡೆ ಮನಸ್ಸು ಒಲೆಯುತ್ತಿತ್ತು. ತಂದೆಯ ಆ ಮಾತು ಮಗನ ಮನಸ್ಸಿನ ಮೇಲೆ ಬಹಳ ಒಳ್ಳೆಯ ಪರಿಣಾಮವನ್ನುಂಟುಮಾಡಿತ್ತು. 'ಸರಿ' ಎಂದು ಚಾಪೆಯ ಮೇಲಿದ್ದ ಪುಸ್ತಕವನ್ನು ಕೈಗೆ ತೆಗೆದುಕೊಂಡ.

ಬೀದಿಯ ಬಾಗಿಲ ಹತ್ತಿರ ಯಾರೋ "ರಂಗಣ್ಣೋರೆ?" ಎಂದ ಹಾಗಾಯಿತು.

ರಾಮುಸ್ವಾಮಿ "ಯಾರು?" ಅಂದ.

ಬರಿಯ ಬಾಗಿಲು ಮುಂದಕ್ಕೆ ಹಾಕಿದ್ದುದರಿಂದ ಅಚ್ಚಂಭಟ್ಟರು ಬಾಗಿಲು ನೂಕಿಕೊಂಡು ಒಳಗೆ ಪ್ರವೇಶಿಸಿದರು. ರಾಮುಸ್ವಾಮಿ "ಓಹೋ ನೀವೋ, ಬನ್ನಿ ಬನ್ನಿ ಕೂತ್ಕೊಳ್ಳಿ" ಎಂದು ನಿಂತು ಚಾಪೆಯ ಕಡೆ ಕೈತೋರಿಸಿದ.

"ರಂಗಣ್ಣೋರಿದಾರಾಪ್ಪ?" ಎನ್ನುತ್ತ, ಕೆಂಪುಶಾಲು ಹೊದೆದ ಭಟ್ಟರು ಬೆಳ್ಳಿಕಟ್ಟಿನ ಮುಳ್ಳುಗೋಲನ್ನು ಮುಂದೆ ಮಲಗಿಸಿಕೊಂಡು ಚಾಪೆಯ ಮೇಲೆ ಅಚ್ಚುಗಟ್ಟಾಗಿ ಕುಳಿತುಕೊಂಡರು.

ರಾಮುಸ್ವಾಮಿ "ಇದಾರೆ ಇದಾರೆ" ಎನ್ನುತ್ತ ಒಳಗೆ ಹೋದ.

ಕಾಫಿಗೆ ಸೀರಿಟ್ಟು, ರಂಗಣ್ಣನವರು ಪಡಸಾಲೆಗೆ ಬಂದರು. ಅವರ ಹಿಂದೆ ರಾಮುಸ್ವಾಮಿಯೂ ಬಂದ.

ಭಟ್ಟರು ರಂಗಣ್ಣನವರಿಗೆ ನಮಸ್ಕಾರ ಹೇಳಿ "ಯಾವತ್ತು ಬಂದ್ಯಪ್ಪ ರಾಮುಸ್ವಾಮಿ?" ಎಂದು ಕೇಳಿದರು.

ರಾಮುಸ್ವಾಮಿ "ಬಂದಾಗಲೆ ಹದಿನೈದು ಇಪ್ಪತ್ತು ದಿನ ಆಗ್ತಾ ಬಂತು" ಎಂದ.

ರಂಗಣ್ಣನವರು ಭಟ್ಟರ ಎದುರಿಗೆ ಗೋಡೆಯ ಮಗ್ಗುಲಿನಲ್ಲಿ ಬರಿಯ ನೆಲದ ಮೇಲೆ ಕುಳಿತುಕೊಳ್ಳಲು ಹವಣಿಸಿದರು. ರಾಮಸ್ವಾಮಿ ಎಡಭಾಗದ ಕಿಟಕಿಯ ಹತ್ತಿರ ನಿಂತುಕೊಂಡ. ಭಟ್ಟರು "ಇಲ್ಲೇ ಬನ್ನಿ" ಎಂದು ರಂಗಣ್ಣನವರನ್ನು ಚಾಪೆಯ ಮೇಲೇ ಕರೆದರು; ಕೈ ಪದ್ಧತಿಯಂತೆ ಸೊಂಟದಲ್ಲಿದ್ದ ನಶ್ಯದ ಡಬ್ಬಿಯ ಕಡೆ ಹೋಯಿತು. ರಂಗಣ್ಣನವರೂ ಭಟ್ಟರ ಹತ್ತಿರಕ್ಕೆ ಬಂದು ನಶ್ಯದ ಡಬ್ಬಿಯಲ್ಲಿ ಕೈಹಾಕಿ ಒಂದು ಚುಟಿಕೆ ತೆಗೆದುಕೊಂಡು ಚಾಪೆಯ ಮೇಲೆ ಕುಳಿತುಕೊಂಡರು.

ಭಟ್ಟರು ನಶ್ಯ ಏರಿಸಿದರು. ರಂಗಣ್ಣನವರೂ ನಶ್ಯ ಏರಿಸುತ್ತಾ "ಊರಿಗೆ ಯಾವಾಗ ಬಂದಿರಿ?" ಎಂದು ಕೇಳಿದರು.

"ನಿನ್ನೆ ಬೆಳಗ್ಗೆ"

"ಬೆಂಗಳೂರಿಂದಾನೊ?"

"ಹ್ಞು, ಆದರೆ ಮೊನ್ನೆ ಅರಸೀಕೆರೇಲಿ ಇಳಿದಿದ್ದೆ. ಅಲ್ಲಿ ಸ್ವಲ್ಪ ಕೆಲಸ ಇತ್ತು"

"ಎಲ್ಲ ನೀವು ಹೇಳಿದ್ದಾಗೇ ಆಯ್ತು"

"ಏನು ಹೊಳೆನರಸೀಪುರದ್ದೊ?"

"ಹೌದು"

"ಹಣ ಬಂತೊ?"

"ಬಂತು. ಬಂದಿದ್ದೂ ಆಯ್ತು, ವಿಲೇವಾರೀನೂ ಆಯ್ತು"

"ಏನು ಮಾಡಿದಿರಿ?"

"ನಿಮಗೆ ಹೇಳಿರಲಿಲ್ಲವೆ—ನಮ್ಮ ಜಮೀನಿನ ಪಕ್ಕದ ಮುಕ್ಕಾಲೆಕರೆ ಖರೀದಿಗೆ ಬಂದಿದೇಂತ?"

"ಇಲ್ಲ. ಹೇಳಿರಲಿಲ್ಲ"

"ಹೇಳಿದ್ದಾಗೇ ನೆನಪು. ಹೇಳಿರಲಿಲ್ಲವೇನು!? ಹೋಗಲಿ. ಅದನ್ನ ಖರೀದಿಮಾಡ್ದೆ. ಏಳುನೂರೈವತ್ತು ರೂಪಾಯಿ ಬಿತ್ತು—ಖರ್ಚು ಗಿರ್ಚು ಎಲ್ಲ ಸೇರಿ."

"ಪರವಾಯಿಲ್ಲ, ಆ ಸೆಟ್ಟೇದೊ?"

"ಹೌದು"

"ಜಮೀನು ಚೆನ್ನಾಗಿದೆ. ರೈತಾಪೀನೂ ಪರವಾಯಿಲ್ಲ."

"ಅವನೇ—ನಮ್ಮ ಮಾದಪ್ಪನೇ ಅದನ್ನೂ ಮಾಡ್ತಿದ್ದೋನು"

"ಹೌದು ಹೌದು"

"ಆದ್ದರಿಂದಲೇ ನನಗೆ ಅದರ ಮೇಲೆ ಅಷ್ಟು ಖಾಯಿಷ್ಟಾಗಿದ್ದು"

"ಸರಿ. ಹಾಗಾದರೆ ನರಸೀಪುರಕ್ಕೆ ಯಾವತ್ತು ಹೊರಡ್ತೀರಿ?"

"ಇನ್ನೇನು ಹೊರಡ್ಬೇಕಲ್ಲ. ಇನತ್ತಾಗಲೇ ಐದಾಯ್ತು. ಹತ್ತನೇ ತಾರೀಕು ಸೋಮವಾರ ಸಂಜೆ ರೈಲಿನಲ್ಲಿ ಹೊರಡೋಣಾಂತ"

"ಸರಿ. ಏನಪ್ಪ ರಾಮಸ್ವಾಮಿ, ಮೈಸೂರು ಹ್ಯಾಗಿದೆ?"

"ಇದೆ. ಇದ್ದಹಾಗೇ ಇದೆ. ಮಾಧೂರಾಯರು ತಮಗೆ ನಮಸ್ಕಾರ ತಿಳಿಸು ಅಂದರು."

"ಇನ್ನೇನೂ ಹೇಳಲಿಲ್ಲವೆ?" ಎಂದು ಭಟ್ಟರು ರಾಮಸ್ವಾಮಿಯನ್ನು ಸೂಕ್ಷ್ಮವಾಗಿ ಕೇಳಿದರು.

"ಹೇಳಿದರು. ಎಲ್ಲ ಹೇಳಿದರು" ಎಂದು ರಾಮಸ್ವಾಮಿ ಸೂಕ್ಷ್ಮವಾಗೇ ಹೇಳಿದ.

ರಂಗಣ್ಣನವರು ಮಗನ ಮುಖ ನೋಡಿ "ಏನಂತೆ?" ಎಂದರು.

ರಾಮಣ್ಣ "ಏನೂ ಇಲ್ಲ" ಎಂದು ಆ ಮಾತನ್ನು ಅಲ್ಲಿಗೇ ನಿಲ್ಲಿಸಿದ.

ಭಟ್ಟರು "ನಾನು ನರಸೀಪುರದಲ್ಲಿ ಎಂಟು ದಿನ ಇದ್ದೆ" ಎಂದರು.

ರಂಗಣ್ಣನವರು "ಏನಂತಾರೆ ನಮ್ಮ ಬೀಗರು?" ಎಂದು ಕೇಳಿದರು.

"ಏನನ್ನೋದು. ಗೊತ್ತೇ ಇದೆಯಲ್ಲ. ಬಹಳ ಹಣ್ಣಾಗಿಬಿಟ್ಟಿದಾರೆ. ಎರಡನೇ ಮಗಳು ಹೇಮಾವತೀನೂ ದೊಡ್ಡೋಳಾಗಿಬಿಟ್ಟಿದಾಳೆ. ಇನ್ನೂ ಸರಿಯಾದ ವರ ಸಿಕ್ಕಿಲ್ಲ, ಹುಡುಕ್ತಾ ಇದಾರೆ. ನಾನೂ ಯಾವು ಯಾವುದೋ ಹೇಳ್ದೆ. ಒಂದೂ ಸರಿಹೊಂದಲಿಲ್ಲ. ಒಂದು ಸಾವಿರ ರೂಪಾಯಿ ವರದಕ್ಷಿಣೆ ಕೊಡ್ತೀನೀಂತಂದರೂ ವರ ಸಿಕ್ಕಲಿಲ್ಲ!"

ತಕ್ಷಣವೆ ರಂಗಣ್ಣನವರ ಕಿವಿ ನೆಟ್ಟಗಾಯಿತು. "ಒಂದು ಸಾವಿರ ವರದಕ್ಷಿಣೆ ಕೊಡ್ತಾರಂತೊ?" ಎಂದು ಕುತೂಹಲದಿಂದ ಕೇಳಿದರು.

"ಇಲ್ಲ. ಕೊಡೋಣಾಂತಿದ್ರು. ಈಚೆಗೆ ಆ ಯೋಚನೆ ಬಿಟ್ಬಿಟ್ರು. ದೊಡ್ಡ ಮಗಳ ಮದುವೆ ಮಾಡಿದ್ಹಾಗೇನೇ ಮಾಡ್ಕೊಡ್ತೀನೀಂತಿದಾರೆ."

ರಾಮಸ್ವಾಮಿಯ ಮನಸ್ಸು ಆ ಸಾವಿರಕ್ಕೂ ಈ ಸಾವಿರಕ್ಕೂ ಗಂಟುಹಾಕಿದಾಗ ಅವನಿಗೆ ತುಂಬ ನಾಚಿಕೆಯಾಯಿತು. "ದೊಡ್ಡ ಮಗಳ ಮದುವೆ ಮಾಡಿದ್ಹಾಗೇನೇ ಅಂದರೆ ಏನರ್ಥ ?" ಎಂದುಕೊಂಡ. ರಂಗಣ್ಣನವರಿಗೆ ಆ ಮಾತಿನ ಅರ್ಥವೇ ಆಗಿರಲಿಲ್ಲ. "ಇನ್ನೇನು ವಿಶೇಷ ?" ಎಂದು ಕೇಳಿದರು.

ಭಟ್ಟರು "ಏನೂ ಇಲ್ಲ. ಅದೇ ನೋಡಿಕೊಂಡು ಹೋಗೋಣ ಏನಾಯ್ತೊ, ಹಣಾ ಬಂತೊ ಇಲ್ಲವೊ ಅಂತ ಬಂದೆ" ಎಂದರು.

"ಬಂತು. ಅದರಲ್ಲಿ ಹುಡುಗೀಗೆ ಒಂದು ಒಳ್ಳೇ ಸೀರೆ, ಒಂದೆರಡು ಕಣ ತೊಗೊಳ್ಬೇಕೂಂತ ಮಾಡಿದೀನಿ. ಎಲ್ಲ ತೊಗೊಂಡು ಹತ್ತನೇ ತಾರೀಕು ಸೋಮವಾರ ಸಂಜೆ ರೈಲಿನಲ್ಲಿ ಹೊರಡ್ತೀವಿ."

"ಬರ್ತಾ ಸೊಸೇನ್ನ ಕರ್ಕೊಂಡ್ಬರ್ತೀರೊ?"

"ಇಲ್ಲ. ಸದ್ಯಕ್ಕೆ ಕರ್ಕೊಂಡ್ಬರೋಕಾಗೋದಿಲ್ಲ. "ಇನ್ನೊಂದೆರಡು ಮೂರು ತಿಂಗಳು ಅಲ್ಲೇ ಇರಬೇಕಾಗುತ್ತೆ. ರಾಮಣ್ಣನ ಪರೀಕ್ಷೆ ವಿಷಯ ತೀರ್‍ದ ಮೇಲೆ ಒಂದು ಕೆಲಸ ನೋಡಿಕೊಂಡು ಆಮೇಲೆ ಅವಳನ್ನ ಕರಸ್ಕೊಳ್ಳಬೇಕಾಗುತ್ತೆ."

"ಸರಿ. ಹಾಗಾದರೆ ಈವಾಗ ವಾಪಸು ನೀವಿಬ್ಬರೇ ಬರ್ತೀರಿ ಅನ್ನಿ"

"ಹೌದು."

"ಯಾವತ್ತು ವಾಪಸು ಬರ್ತೀರಿ ?"

"ಬುಧವಾರ ಮುಹೂರ್ತ. ಬುಧವಾರ ಗುರುವಾರ ಅಲ್ಲಿರ್ತೀವಿ. ಶುಕ್ರವಾರವೇ ಹೊರಡೋಣಾಂತ. ಆದರೆ ಅವರು ಒಪ್ಪೊಲ್ಲ. ಒಪ್ಪದಿದ್ದರೆ ಶನಿವಾರ ಹೊರಡೋಣಾಂತ"

"ಹೌದು ಶುಕ್ರವಾರ ಹ್ಯಾಗೆ ಹೊರಡೋಕಾಗುತ್ತೆ. ಅದೂ ಅಲ್ದೆ ಅಂಥ ಶುಭಕಾರ್ಯ ಮುಗಿಸಿಕೊಂಡು"

"ಹೌದು ಹೌದು. ಶನಿವಾರವೇ ಹೊರಡ್ಬೇಕಾಗುತ್ತೆ."

"ಸರಿ. ಹೋಗ್ಬಿಟ್ಟು ಬನ್ನಿ. ಎಲ್ಲ ಸಾಂಗವಾಗಿ ನೆರವೇರಲಿ. ಏನಪ್ಪ ರಾಮುಸ್ವಾಮಿ?" ಎಂದು ಭಟ್ಟರು ರಾಮುಸ್ವಾಮಿಯ ಮುಖ ನೋಡಿ ನಕ್ಕರು.

ರಾಮುಸ್ವಾಮಿಗೆ ನಾಚಿಕೆಯಾಯಿತು. ಕಿರುನಗೆ ನಕ್ಕು ಮುಖ ತಗ್ಗಿಸಿದ.

ಭಟ್ಟರು "ಇನ್ನು ನಾನು ಬರ್ತೀನಿ ರಂಗಣ್ಣೋರೆ" ಎಂದು ಕೋಲನ್ನು ನೆಲಕ್ಕೂರಿ ಮೇಲಕ್ಕೆದ್ದರು. ಶಾಲಿನ ಅಂಚನ್ನು ಸರಿಪಡಿಸಿ ಕೊಳ್ಳುತ್ತ "ಆಮೇಲೆ ಬರ್ತೀನೆ—ನೀವು ಊರಿಂದ ಬಂದ ಮೇಲೆ" ಎಂದು ಬೀದಿಯ ಬಾಗಿಲ ಕಡೆಗೆ ಹೊರಟರು.

ರಂಗಣ್ಣನವರು "ಆಗಲಿ, ಒಳ್ಳೇದು ನಮಸ್ಕಾರ" ಎಂದು ಭಟ್ಟ ರನ್ನು ಬೀಳ್ಕೊಟ್ಟರು. ಭಟ್ಟರು "ಬರ್ತೀನಪ್ಪಾ ರಾಮುಸ್ವಾಮಿ" ಎಂದರು. ರಾಮುಸ್ವಾಮಿ ಬೀದಿಯ ಬಾಗಿಲನ್ನು ಸಂಪೂರ್ಣವಾಗಿ ತೆರೆದು ಭಟ್ಟರನ್ನು ಮುಂದೆ ಕಳಿಸಿ ತಾನೂ ಅವರ ಹಿಂದೆ ಜಗಲಿಯ ವರೆಗೆ ಬಂದ.

ಭಟ್ಟರು "ಏನು, ಹ್ಯಾಗೆ ಮಾಡಿದೀಯಾ ಪರೀಕ್ಷೇಲಿ?" ಎಂದು ಕೇಳಿದರು.

ರಾಮುಸ್ವಾಮಿ "ಚೆನ್ನಾಗಿ ಮಾಡಿದೀನಿ. ಪರವಾಯಿಲ್ಲ, ಪಾಸಾ ಗುತ್ತೆ. ತಮ್ಮಿಂದ ನನಗೆ ತುಂಬ ಉಪಕಾರ ಆಯ್ತು. ಮಾಧೂರಾಯರ ಮನೆ ರೂಮು ಸಿಕ್ಕಿದ್ದು ಬಹಳ ಅನುಕೂಲವಾಗಿತ್ತು" ಎಂದ.

"ಬಾ, ಏನ್ ಮಾಡ್ತೀಯಾ ಮನೇಲ್ಕೂತ್ಕೊಂಡು. ಅಷ್ಟು ದೂರ ಬಾ" ಎಂದು ಭಟ್ಟರು ರಾಮುಸ್ವಾಮಿಯನ್ನು ಕರೆದರು.

ರಾಮುಸ್ವಾಮಿ ಕೈಯಲ್ಲಿ ಆ ಇಂಗ್ಲಿಷ್ ಪುಸ್ತಕ ಹಿಡಿದುಕೊಂಡೇ ಭಟ್ಟರ ಹಿಂದೆ ನಡೆದ. ಭಟ್ಟರು ಸ್ವಲ್ಪ ದೂರ ಸುಮ್ಮನೆ ನಡೆದು, "ಮಾಧೂರಾಯರು ಏನೇನು ಹೇಳಿದರು?" ಎಂದು ಕೇಳಿದರು.

"ಎಲ್ಲ ಹೇಳಿದರು."

"ಯಾವ ವಿಷಯ, ನಾನು ಕೇಳ್ತಾ ಇರೋದು ಗೊತ್ತಾಯ್ತೆ?"

"ಗೊತ್ತಾಯ್ತು. ಹೊಳೆನರಸೀಪುರದ ವಿಷಯ."

"ಹೌದು."

"ಎಲ್ಲ ನೀವು ಹೇಳಿದ ಹಾಗೇ ಹೇಳಿದರು. ನಾನೂ ಅದನ್ನ ಒಪ್ಕೊಂಡಿದೀನಿ. ನಮ್ತುಂದೇನೂ ಈಗ ಹಿಂದೆ ಇದ್ದಹಾಗಿಲ್ಲ. ಬದಲಾಯಿಸ್ಬಿಟ್ಟಿದಾರೆ. ಪರವಾಯಿಲ್ಲ, ಎಲ್ಲ ಒಂದು ಘಟ್ಟಕ್ಕೆ ಬಂದ್ಬಾಗಿವೆ."

"ಸದ್ಯ ಅಷ್ಟರಮಟ್ಟಿಗೆ ಆಯ್ತಲ್ಲ. ಒಳ್ಳೇದಪ್ಪ. ಹೊಳೆನರಸೀಪುರಕ್ಕೆ ಹೋಗಿದ್ದಾಗ ನಿನ್ನ ಹೆಂಡತೀನ ನೋಡಿದೆ. ಪಾಪ, ಹುಡುಗಿ ಚೆನ್ನಾಗಿದಾಳೆ. ಈಗಂತೂ ಒಳ್ಳೆ ಚೆನ್ನಾಗಿ ಬೆಳೆದಿದಾಳೆ. ಅಂಥ ಹುಡುಗೀನ ಮೂರು ವರುಷ ಸೊರಗಿಸ್ಬಿಟ್ಟೆಯಲ್ಲ!" ರಾಮಸ್ವಾಮಿಯ ಭುಜ ತಟ್ಟಿ ಭಟ್ಟರು ನಕ್ಕರು.

ರಾಮಸ್ವಾಮಿ ಸುಮ್ಮನಿದ್ದ. ಉತ್ತರ ಕೊಡುವ ನಾಲಗೆ ಅವನಿಗಿರಲಿಲ್ಲ.

ಭಟ್ಟರು "ಆಗಲಪ್ಪ, ನಾ ಹೇಳಿದ್ನಲ್ಲ. ಹಿಂದಿಂದೆಲ್ಲ ಮರೆತು, ಮುಂದೆ ಸುಖವಾಗಿ ಜೀವನ ನಡಸೋದು ನಿನ್ನ ಕೆಲಸ. ನಿಮ್ಮ ತಂದೆ ಎಷ್ಟು ದಿನ ಇರ್ತಾರೆ? ಹೆಚ್ಚು ಕಾಲ ಬಾಳೋರು ನೀವು" ಎಂದರು.

ರಾಮಸ್ವಾಮಿ "ಸರಿ. ಈಗ ಪರವಾಯಿಲ್ಲ" ಎಂದು ನಿಂತುಕೊಂಡ.

ಭಟ್ಟರು ಮುಂದೆ ಹೊರಟರು. ರಾಮಸ್ವಾಮಿ ನಮಸ್ಕಾರ ಮಾಡಿ ಮನೆಯ ಕಡೆ ತಿರುಗಿದ.

* * * * *

ಹತ್ತನೆಯ ತಾರೀಕು ಬಂದೇಬಿಟ್ಟಿತು. ರಾಮಸ್ವಾಮಿ ಊರಿಗೆ ತೆಗೆದುಕೊಂಡುಹೋಗಬೇಕಾದ ಸಾಮಾನನ್ನೆಲ್ಲ ಟ್ರಂಕಿಗೆ ಹಾಕಿದ. ಮರದ ಪೆಟ್ಟಿಗೆಯಲ್ಲಿ ಕಾಗದ ಸುತ್ತಿ ಇಟ್ಟಿದ್ದ ಮದುವೆಯ ಸೂಟನ್ನು ಜ್ಞಾಪಕದಿಂದ ತೆಗೆದಿಟ್ಟುಕೊಂಡ. ಮದುವೆಯ ಬೂಟ್ಸನ್ನೂ ರಾಮಸ್ವಾಮಿ ಉಪಯೋಗಿಸಿರಲಿಲ್ಲ ಅದರ ಪೆಟ್ಟಿಗೆಯಲ್ಲಿಯೇ ಹಾಕಿ ದಾರ ಕಟ್ಟಿ ಇಟ್ಟಿದ್ದ. ಕಾಶೀಯಾತ್ರೆಯ ಚಪ್ಪಲಿಯನ್ನು ಮಾತ್ರ ಉಪಯೋಗಿಸಿದ್ದ; ಅದಾದ ಮೇಲೆ ಮೈಸೂರಿನ ರಸ್ತೆಯಲ್ಲಿ ಮೂರು

ಜೊತೆ ಸಮೆದುವು. ಹಾಸಿಗೆಯ ಸುರುಳಿಯ ಮೇಲೆ ಕಾಗದದಲ್ಲಿ ಸುತ್ತಿಟ್ಟಿದ್ದ ಸೀರೆ ಕಣಗಳನ್ನು ರಂಗಣ್ಣನವರು ತಂದು "ಇದನ್ನೂ ಪೆಟ್ಟಿಗೆಯಲ್ಲೇ ಹಾಕು" ಎಂದರು. ರಾಮುಸ್ವಾಮಿ ಆ ಕಾಗದದ ಕಟ್ಟನ್ನೂ ಟ್ರಂಕಿನಲ್ಲಿ ಹಾಕಿದ. ಬೂಟ್ಸಿನ ಪೆಟ್ಟಿಗೆಗೆ ಟ್ರಂಕಿನಲ್ಲಿ ಸ್ಥಳವಿರಲಿಲ್ಲ. ಅದನ್ನು ಹಾಸಿಗೆಯಲ್ಲಿ ಹಾಕುವ ಹಾಗಿರಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ, ಬಿಳಿಯ ಷರಾಯಿ ಹಾಕಿಕೊಂಡು ಬೂಟ್ಸು ಧರಿಸಿಯೇ ಊರಿಗೆ ಹೊರಡೋದು ಎಂದು ನಿರ್ಧರಿಸಿಕೊಂಡ. ಎಲ್ಲ ತೆಗೆದುಕೊಂಡಂತಾದ ಮೇಲೆ ರಾಮುಸ್ವಾಮಿ "ಇನ್ನೇನೂ ಇಲ್ಲವಾ?" ಎಂದು ಕೇಳಿದ.

ರಂಗಣ್ಣನವರು ಪಡಸಾಲೆಯ ಬಾಗಿಲನ್ನು ಹಾಕುತ್ತಾ "ಏನೂ ಇಲ್ಲಾಂತ ಕಾಣುತ್ತಪ್ಪ" ಎಂದರು.

"ಹಾಗಾದರೆ ಹಾಸಿಗೆ ಕಟ್ಟಲಾ?"—ಮಗ ಕೇಳಿದ.

"ಬೇಡ, ಸ್ವಲ್ಪ ತಡಿ. ನನ್ನ ಸ್ನಾನದ ಪಂಚೆ, ಆ ಟವಲನ್ನ ಹೊರಗೆ ಒಣಗಿಹಾಕಿದೀನಿ. ಬಿಸಿಲಿದೆ. ಇನ್ನೊಂದ್ಸೊಲ್ಪ ಹೊತ್ತಿಗೆ ಒಣಗುತ್ತೆ. ಅದನ್ನೂ ಹಾಕಿ ಕಟ್ಟೀಯಂತೆ"

"ಈಗ ಎಷ್ಟು ಗಂಟೆ?"—ಪಕ್ಕದ ಗೋಡೆಯ ಮೇಲೆ ದೊಡ್ಡ ಮರದ ಸ್ಟ್ಯಾಂಡಿನ ಮೇಲಿದ್ದ ಪುಟ್ಟ ಗಡಿಯಾರ ರಾಮುಸ್ವಾಮಿಗೆ ಕಾಣಿಸುತ್ತಿರಲಿಲ್ಲ. ಆದ್ದರಿಂದ, ಹಾಸಿಗೆ ಸರಿಪಡಿಸುತ್ತಾ ಆ ಪ್ರಶ್ನೆ ಕೇಳಿದ.

ರಂಗಣ್ಣನವರು ಗೋಡೆಯ ಹತ್ತಿರ ಹೋಗಿ ತುದಿಗಾಲ ಮೇಲೆ ನಿಂತು ತಲೆಯೆತ್ತಿ ಗಡಿಯಾರ ನೋಡಿದರು. "ಗಂಟೆ ಎರಡಾಯ್ತು" ಎಂದರು.

"ಓ ಹಾಗಾದರೆ ಟೈಮಾಯ್ತು. ಕಾಫೀಗಿಟ್ಬಿಡು. ಐದೂ ಇಪ್ಪತ್ತಕ್ಕೆ ರೈಲು ಬರೋದು. ನಾನು ಆ ನಿಂಗಂಗೇ ಗಾಡೀಗೆ ಹೇಳಿ ಬರ್ತೀನಿ" ಎಂದು ರಾಮುಸ್ವಾಮಿ ಎದ್ದ.

ರಂಗಣ್ಣನವರು "ಆಗಲಿ" ಎಂದು ಅಡಿಗೆಮನೆಗೆ ಹೋದರು.

ರಾಮುಸ್ವಾಮಿ ಬೀದಿಯ ಬಾಗಿಲು ಮುಂದಕ್ಕೆ ಮಾಡಿಕೊಂಡು

ಅಂಗಡಿ ನಿಂಗನಿಗೆ ಗಾಡಿ ತೆಗೆದುಕೊಂಡು ಬಾ ಎಂದು ಹೇಳಿಬರಲು ಹೊರಟ.

ದಾರಿಯಲ್ಲಿ ಮನಸ್ಸು ಸುಮ್ಮನಿರಲಿಲ್ಲ.

ಎಲ್ಲಿಗೆ ತಾನು ಪದೇಪದೇ ಹೋಗಿ ಯಾರೊಡನೆ ನಂಟು ಬೆಳಸಿ ಆದಷ್ಟು ಬೇಗ ಒಂದಾಗಿ ಆನಂದವಾಗಿ ಸಂಸಾರ ನಡಸಬೇಕಾಗಿತ್ತೊ ಅಲ್ಲಿಗೆ, ಆ ವ್ಯಕ್ತಿಯನ್ನು ನೋಡಲು ಮೂರು ವರುಷಗಳನಂತರ ಎರಡನೆಯ ಬಾರಿ ಹೋಗುತ್ತಿದ್ದಾನೆ. ವಿಚಿತ್ರ! ಹೀಗಾಗುವುದು ಅಪರೂಪ ಎನ್ನಿಸಿತು ಅವನಿಗೆ.

ಗೌರಿಯ ನೆನಪಾದಾಗ ಅವಳು ಈಗ ಹೇಗಿದ್ದಾಳೊ, ಎನ್ನಿಸಿತು.

ತೆಳ್ಳಗೆ ಬೆಳ್ಳಗೆ ಹಾಗೇ ಇದ್ದರೆ ಈಗ ಎಷ್ಟು ಚೆನ್ನಾಗಿರುತ್ತದೆ! ಎಂದುಕೊಂಡ. ಅವನಿಗೆ ತನ್ನ ಹೆಂಡತಿ ತೆಳ್ಳಗೆಬೆಳ್ಳಗೆ ಹೊನ್ನಿನ ಬಳ್ಳಿಯಾಗಿ ಸೀತೆಯಂತೆ, ಶಕುಂತಲೆಯಂತೆ ಇರಬೇಕೆಂದು ಇಷ್ಟ. ಗೌರಿಯ ನೆನಪಾದಾಗಲೆಲ್ಲ ತೆಳ್ಳಗೆ ಬೆಳ್ಳಗೆ ಮುದ್ದಾಗಿರುವ ಗೌರಿ ಕಣ್ಣ ಮುಂದೆ ಬಂದು ನಿಲ್ಲುತ್ತಿದ್ದಳು.

ಈಗ ಅವಳಿಗೆ ಹದಿನಾರು ವರುಷ ತುಂಬುತ್ತದೆ. ಅವಳು ದೊಡ್ಡವಳಾಗಿದಾಳೆ. ಈಗ ಅವಳು ಇನ್ನೂ ಚೆನ್ನಾಗಿರಬಹುದು, ಇನ್ನೂ ಸ್ವಲ್ಪ ಉದ್ದವಾಗಿ ಬೆಳೆದಿರಬಹುದು, ಬಣ್ಣ ಇನ್ನೂ ಉತ್ತಮಗೊಂಡಿರಬಹುದು. ವಯಸ್ಸು ಮುಖಕ್ಕೊಂದು ವಿಶಿಷ್ಟ ಲಕ್ಷಣವನ್ನು ನೀಡಿರಬಹುದು, ಎಂದು ಮನಸ್ಸು ಏನೇನೊ ಊಹಿಸಿಕೊಂಡು ಆನಂದಿಸಿತು.

ನಿಂಗ ಅಂಗಡಿಯಲ್ಲಿರಲಿಲ್ಲ. ನಿಂಗನ ಮಗ ಏಳು ವರುಷದ ಪುಟ್ಟನಿಂಗ ಗಲ್ಲದ ಮೇಲೆ ಕುಳಿತಿದ್ದ.

ರಾಮುಸ್ವಾಮಿ "ನಿಂಗ ಎಲ್ಲಯ್ಯ?" ಎಂದು ಆ ಮರಿ ಸಾಹುಕಾರನನ್ನು ಕೇಳಿದ. ನಿಂಗನದು ಪುಟ್ಟ ಬೀಡಿ ಅಂಗಡಿ. ಒಂದು ಅಂಗಡಿ, ಒಂದು ಜಟಕಾ ಗಾಡಿ ಅವನ ಸಂಸಾರವನ್ನು ಸಾಗಿಸುತ್ತಿದ್ದುವು. ಹುಡುಗ "ಇಲ್ಲ ಬುದ್ಧಿ, ಈಗ ಗಾಡಿ ತಕ್ಕೊಂಡು ಇತ್ತ ಹೋದ" ಎಂದ.

"ಯಾವ ಕಡೆ?" ಎಂದು ರಾಮುಸ್ವಾಮಿ ಕೇಳಿದ.

"ಈ ಕಡೆ, ರಾಮುಶೆಟ್ಟರ ಅಂಗಡಿ ತಾವಕೆ. ಅವರಂಗಡೀಲಿ ಒಂದು ಮೂಟೆ ಕಳ್ಳೆ ಒಟ್ಟಿತ್ತು, ಅದನ್ನ ತರಾವಾಂತೇಳಿ ಓದ. ಈಗ ಬತ್ತಾನೆ ಯಾಕೆ ಗಾಡಿ ಬೇಕಿತ್ತ?" ಎಂದು ಹುಡುಗ ಎದ್ದು ನಿಂತು ಕೇಳಿದ.

"ಬೇಕಾಗಿತ್ತು. ಅವನು ಈಗ ಗಾಡೀನ ಇಲ್ಲಿಗೆ ತರ್ತಾನ ?"

"ಬರುತ್ತೆ ಬುದ್ಧಿ. ನಮುಗೇ ಕಳ್ಳೆ ಒಟ್ಟು. ಗಾಡಿ ಇಲ್ಲಿಗೆ ಬಂದೇ ಬತ್ತದೆ"

"ಹಾಗಾದರೆ ಒಂದ್ಕೆಲ್ಸ ಮಾಡು. ಬಂದ ಕೂಡಲೆ ಅವನಿಗೆ ಹೇಳು. ರಂಗಣ್ಣೋರ ಮನೆಗೆ ಗಾಡಿಬೇಕಂತೆ, ಮೈಸೂರು ಗಾಡಿಗೆ ಹೋಗ್ತಾರಂತೆ ಅವರು, ಬೇಗ ಹೋಗಬೇಕಂತೆ ಅಂತ ಹೇಳು" ಎಂದು ರಾಮುಸ್ವಾಮಿ ಹೇಳಿದ. ಹುಡುಗ ಎಲ್ಲವನ್ನೂ ಕಿವಿಗೊಟ್ಟು ಕೇಳಿ "ಆಗಲಿ ಬುದ್ಧಿ. ನಾಕಳಿಸ್ತೀನಿ" ಎಂದು ಕುಳಿತುಕೊಂಡ.

ರಾಮುಸ್ವಾಮಿ ಹಿಂದಿರುಗಿ ಮನೆಯ ಕಡೆಗೆ ನಡೆಯತೊಡಗಿದ. ಅವನಿಗೆ ಹೊಳೆನರಸೀಪುರದ್ದೇ ಯೋಚನೆ. ಈಗ ಮಾವನ ಮನೆ ಹೇಗಿದೆಯೊ, ಮಾವನವರು ಹೇಗಿದ್ದಾರೊ, ಅತ್ತೆಯವರು ಹೇಗಿದ್ದಾರೊ, ನಾದಿನಿ ಹೇಮಾವತಿ ಹೇಗಿದಾಳೊ, ಹೊಳೆನರಸೀಪುರ ಹೇಗಿದೆಯೊ!

ಮನೆಗೆ ಬಂದಾಗ ರಂಗಣ್ಣನವರು ಕಾಫಿ ಬೆರಸುತ್ತಿದ್ದರು. ಇಬ್ಬರೂ ಕಾಫಿ ಕುಡಿದು, ಪಾತ್ರೆ ತೊಳೆದು ಬಾಗಿಲುಗಳನ್ನು ಸರಿಯಾಗಿ ಹಾಕಿ ಪಡಸಾಲೆಗೆ ಬಂದಾಗ ಗಡಿಯಾರದಲ್ಲಿ ಮೂರೂಮುಕ್ಕಾಲಾಗಿತ್ತು.

ರಂಗಣ್ಣನವರು "ಇದೇನೊ ಇನ್ನೂ ಗಾಡಿ ಬರ್ಲಿಲ್ಲ?" ಎಂದರು.

ರಾಮುಸ್ವಾಮಿ "ಇನ್ನೇನು ಬರಬಹುದು. ನಾಲ್ಕು ಗಂಟೆ ಒಳಗೆ ಬರ್ತಾನೆ. ಐದೂ ಇಪ್ಪತ್ತಕ್ಕೆ ತಾನೆ ರೈಲು ಬರೋದು. ಐದಕ್ಕೆ ಸ್ಟೇಷನ್ ಹತ್ತಿರದ ಇದ್ದರೂ ಸಾಕು" ಎಂದ, ರಾಮುಸ್ವಾಮಿ ಕಿಟಕಿಯಲ್ಲಿಟ್ಟಿದ್ದ ಪುಟ್ಟಕನ್ನಡಿಯ ಮುಂದೆ ನಿಂತು ತಲೆ ಬಾಚಿಕೊಳ್ಳುತ್ತ. ತಲೆ ಬಾಚಿ ಕೊಂಡಾದ ಮೇಲೆ ಒಗೆದ ಷರಟು ಹಾಕಿಕೊಂಡು, ಎಂದೋ ಇಸ್ತ್ರಿಮಾಡಿ ಸಿದ್ಧ ಬಿಳಿಯ ಷರಾಯಿಯನ್ನು ಕಾಲಿಗೆ ತೂರಿಸಿದ. ಮೂರು ವರುಷಗಳ ಹಿಂದೆ ಮಾವನವರು ಕೊಡಿಸಿದ್ದ ಕಾಲುಚೀಲ ಬೂಟ್ಸುಗಳನ್ನು ಬಲವಂತ

ವಾಗಿ ಕಾಲಿಗೆ ಸಿಕ್ಕಿಸಿದ್ದಾಯಿತು. ಪರೀಕ್ಷೆಗೆ ಸ್ವಲ್ಪ ಮುಂಚೆ ಮೈಸೂರಿನಲ್ಲೇ ಹೊಲಿಸಿದ್ದ ಕರಿಯಕೋಟನ್ನು ಧರಿಸಿಕೊಂಡ. ಷರಟಿನ ಬಿಳಿಯ ಕಾಲರನ್ನು ಕೋಟಿನ ಕಾಲರ ಮೇಲೆ ಸಾಡಿ ಮಡಿಸಿ ಕನ್ನಡಿ ನೋಡಿಕೊಂಡ. ಮುಖ ತೊಳೆದುಕೊಂಡಾಗ ಹುಬ್ಬಿನ ಮೇಲಿದ್ದ ನೀರು ಇನ್ನೂ ಹಾಗೇ ಇತ್ತು. ಎಡಗೈಯಲ್ಲಿ ಕನ್ನಡಿ ಹಿಡಿದುಕೊಂಡು ಜೇಬಿನಲ್ಲಿದ್ದ ಕರವಸ್ತ್ರದಿಂದ ಮುಖವನ್ನು ಚೆನ್ನಾಗಿ ಒರಸಿಕೊಂಡ. ಗುಂಡಾದ ಮುಖಕ್ಕೆ ಆಗತಾನೆ ಬಾಚಿಕೊಂಡ ಕ್ರಾಪು ಚೆನ್ನಾಗಿ ಒಪ್ಪಿತ್ತು. ಬೆಳಗ್ಗೆ ತಾನೆ ಕ್ಷೌರಮಾಡಿಕೊಂಡಿದ್ದುದರಿಂದ ಕೆನ್ನೆಗಳೆರಡೂ ನುಣುಪಾಗಿದ್ದುವು. ಮೇಲ್ತುಟಿಯ ಮೇಲಿದ್ದ ಸಾಲುಹಸಿಯನ್ನು ಕರವಸ್ತ್ರ ಒರಸಿದ್ದರೂ ಮತ್ತೆ ಹಸಿಮೂಡುತ್ತಿತ್ತು.

ರಾಮಸ್ವಾಮಿ ಚೆಲುವ. ತಂದೆಯಂತೆಯೇ ದುಂಡು ಮುಖ. ಆದರೆ ಬಣ್ಣದಲ್ಲಿ ತಾಯಿಯನ್ನು ಹೊತ್ತಿದ್ದ. ಮೈಬಣ್ಣ ಒಳ್ಳೆ ಕೆಂಪು. ಐದು ಅಡಿ ಮೂರಂಗುಲ ಮಾತ್ರ ಎತ್ತರವಾಗಿದ್ದರೂ ಆ ಎತ್ತರಕ್ಕೆ ತಕ್ಕ ಮೈ ಇತ್ತು. ಅನ್ನ ಆರೈಕೆ ಸರಿಯಾಗಿಲ್ಲದೆ ಎರಡು ವರುಷ ಕಷ್ಟದಲ್ಲಿ ತಳ್ಳಿದ್ದರೂ ಮೈ ನೋಡುವ ಹಾಗಿತ್ತು. ಓದು ಮುಗಿಯಿತು. ಇನ್ನು ತಾನು ವಿದ್ಯಾರ್ಥಿಯಲ್ಲ, ಕೆಲಸಕ್ಕೆ ಸೇರಿ ಸಂಪಾದಿಸುವ ಸ್ವತಂತ್ರ ವ್ಯಕ್ತಿ ಎಂದು ಮನಸ್ಸು ನೆಮ್ಮದಿಗೊಂಡು ನಲಿಯುತ್ತಿತ್ತು. ಮಾವನ ಮನೆಗೆ ತಕ್ಕ ಅಳಿಯನಾಗಿ, ಬೆಳೆದುನಿಂತ ಗೌರಿಗೆ ತಕ್ಕ ಗಂಡನಾಗಿ ರಾಮಸ್ವಾಮಿ ಶೋಭಿಸುತ್ತಿದ್ದ.

ಊರಿಗೆ ಬಂದ ಮೇಲೆ ರಾಮಸ್ವಾಮಿ ಸೂಟು ಹಾಕಿದ್ದೇ ರಂಗಣ್ಣನವರು ನೋಡಿರಲಿಲ್ಲ. ಮಗ ಕನ್ನಡಿಯ ಮುಂದೆ ನಿಂತಿದ್ದುದನ್ನು ನೋಡಿ "ಪರವಾಯಿಲ್ಲ, ನಿನಗೆ ಸೂಟು ಚೆನ್ನಾಗಿ ಒಪ್ಪುತ್ತೆ. ಆ ರೇಂಜರ ಮನೆ ಲಕ್ಷ್ಮೀನಾರಾಯಣ' ಹಾಕ್ತಾನೆ ನೋಡು, ನೋಡೋಕಾಗಲ್ಲ ಥೂ" ಅಂದರು. ಅವರೂ ಮಗನ ಅಲಂಕಾರವನ್ನು ಮೆಚ್ಚಿದ್ದರು.

"ನಿಂದಾಗಿದ್ದರೆ ಕನ್ನಡಿ ಕೊಡ್ತೀಯಾ?" ಎಂದು ಬಿಚ್ಚಿ ಹೋದ ಹರುಕು ಜರೀ ರುಮಾಲನ್ನು ಬಲಗೈಯಲ್ಲಿ ಹಿಡಿದು ಕಿಟಕಿಯ ಹತ್ತಿರಕ್ಕೆ ಬಂದರು.

ರಾಮಸ್ವಾಮಿ "ಇಲ್ಲೀ ಬಾ, ನಂದಾಯ್ತು" ಎಂದು ಸರಿದ.

ರಂಗಣ್ಣನವರು ರುಮಾಲು ಕಟ್ಟಿಕೊಳ್ಳುತ್ತಾ "ಗಾಡೀನೇ ಬರ್ಲಿಲ್ಲವಲ್ಲೋ, ಆಗಲೆ ನಾಲ್ಕು ಗಂಟೇಂತ ಕಾಣುತ್ತೆ. ಸ್ವಲ್ಪ ನೋಡಿಕೊಂಡಾದರೂ ಬಾ" ಎಂದರು.

ಅಷ್ಟು ಹೊತ್ತಿಗೆ ಸರಿಯಾಗಿ ನಿಂಗನ ಗಾಡಿ ಮನೆಯ ಮುಂದೆ ಬಂದು ನಿಂತಿತು. ಹಾಸಿಗೆ ಟ್ರಂಕು ಗಾಡಿಯಲ್ಲಿಟ್ಟು ಪಡಸಾಲೆಯ ಕಿಟಕಿ ಬಾಗಿಲು ಬೀದಿ ಬಾಗಿಲು ಎಲ್ಲ ಹಾಕಿ ಚಿಲಕಕ್ಕೆ ಬೀಗ ಸಿಕ್ಕಿಸಿದಾಗ ಪಕ್ಕದ ಮನೆಯ ಗಡಿಯಾರ ನಾಲ್ಕು ಗಂಟೆ ಹೊಡೆಯಿತು.

ರಂಗಣ್ಣನವರು "ನೋಡು, ನಾಲ್ಕು ಗಂಟೆ ಆಯ್ತು" ಎನ್ನುತ್ತಾ ತಮ್ಮ ಪಕ್ಕದ ಮನೆಯ ಬಾಗಿಲನ್ನು ತಟ್ಟಿದರು.

ಸೀತಮ್ಮ ಬದುಕಿದ್ದಾಗ ಅದು ಅವರ ಮನೆಯ ಒಂದು ಕೋಣೆಯಾಗಿತ್ತು. ಅವಳು ಹೋದ ಮೇಲೆ ಪಡಸಾಲೆಗೆ ಅಡ್ಡಲಾಗಿ ಒಂದು ಗೋಡೆ ಎಬ್ಬಿಸಿ ಮನೆಯನ್ನೇ ಸರಿಯಾಗಿ ಅರ್ಧಭಾಗ ಮಾಡಲಾಗಿತ್ತು. ಆ ಮುಂದಿನ ಕೋಣೆ ಆ ಭಾಗಕ್ಕೆ ಪಡಸಾಲೆಯಾಗಿಬಿಟ್ಟಿತ್ತು. ತಾಲ್ಲೂಕು ಕಚೇರಿಯ ಗುಮಾಸ್ತೆ ಚಂದ್ರಶೇಖರಯ್ಯನವರು, ಅದನ್ನು ಭಾಗಮಾಡಿದಾಗಿನಿಂದಲೂ ಅದರಲ್ಲಿ ಬಾಡಿಗೆ ಇದ್ದಾರೆ. ಬಾಡಿಗೆ ಕೇವಲ ಹತ್ತು ರೂಪಾಯಿ ಆದರೂ ಮನೆ ಅಚ್ಚುಕಟ್ಟಾಗಿದೆ. ರಂಗಣ್ಣನವರು ಬಾಗಿಲು ತಟ್ಟಿದಾಗ ಚಂದ್ರಶೇಖರಯ್ಯನವರು ಮನೆಯಲ್ಲಿರಲಿಲ್ಲ. ಅವರ ಹೆಂಡತಿ ನರಸಮ್ಮನವರು ಮಗುವಿಗೆ ಹಾಲು ಕುಡಿಸುತ್ತಿದ್ದರು. ರಂಗಣ್ಣನವರ ಕೂಗು ಕೇಳಿ "ಬಂದೇ" ಎಂದರು. ಆದರೆ ಬರಲು ಮೂರು ನಿಮಿಷ ಬೇಕಾಯಿತು. ಮಗುವಿಗೆ ಪೂರ್ತ ಹಾಲು ಕುಡಿಸಿ ಹಾಲಿನ ಸೀಸೆ ಬಟ್ಟಲು ಎಲ್ಲ ತೆಗೆದಿಟ್ಟು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿದ ಮೇಲೆ ನರಸಮ್ಮ ಸರಸರ ಬಂದು ಬೀದಿಯ ಬಾಗಿಲು ತೆರೆದರು.

"ಓಹೊ ನೀವೋ, ನಾನು ಯಾರೋಂತಿದ್ದೆ. ಹೊರಟರಾ ಊರಿಗೆ?" ಎಂದು ಆಕೆ ಕೇಳಿದಳು.

"ಹೌದಮ್ಮ ಹೊರಟದೀವಿ. ಮನೇ ಕಡೆ ಜೋಪಾನಾಂತ ಹೇಳಿ ಹೋಗೋಣಾಂತ ಕೂಗಿದೆ. ಯಜಮಾನರು ಇನ್ನೂ ಬಂದಿಲ್ಲವೇನು?"

"ಇಲ್ಲ, ಇನ್ನೂ ಬಂದಿಲ್ಲ"

"ಅವರಿಗೆ ಹೇಳಿಬಿಡ್ತೀರಾ ?"

"ಹೇಳ್ತೀನಿ. ಯಾವತ್ತು ಬರ್ತೀರಿ ?"

"ಶುಕ್ರವಾರ ಅಥವಾ ಶನಿವಾರ"

"ಜೊತೇಲಿ ಸೊಸೇನ ಕರ್ಕೊಂಡ್ಬರ್ತೀರಾ ?

"ಇಲ್ಲ ಇಲ್ಲ. ಈಗ ಕರ್ಕೊಂಡ್ಬರೊಲ್ಲ. ಇನ್ನೊಂದೆರಡು ಮೂರು ತಿಂಗಳು ಅಲ್ಲೇ ಇರ್ತಾಳೆ"

"ಸರಿ"

"ಹೇಳ್ತೀರಾ ನಿಮ್ಮ ಯಜಮಾನರಿಗೆ? ಸ್ವಲ್ಪ ಮನೇ ಕಡೆ ದಯ ವಿಟ್ಟು ನೋಡ್ಕೊಳ್ಳಿ"

"ಆಗಲಿ ಆಗಲಿ" ಎಂದು ಆಕೆ ಬಾಗಿಲ ಹಿಂದೆಯೇ ನಿಂತು, ತಲೆ ಮಾತ್ರ ಹೊರಗೆ ಹಾಕಿ ಹೇಳಿದರು.

ರಂಗಣ್ಣನವರು "ಬರ್ತೀವಿ" ಎನ್ನುತ್ತ ಬಾಗಿಲ ಬೀಗವನ್ನು ಪುನಃ ಎಳೆದುನೋಡಿ ಗಾಡಿಯ ಕಡೆಗೆ ಹೋದರು. ನರಸಮ್ಮನವರು ಬಾಗಿಲು ಹಾಕಿಕೊಂಡರು. ರಾಮುಸ್ವಾಮಿ ಗಾಡಿಯ ಪಟ್ಟೆ ಹಿಡಿದು ನಿಂತಿದ್ದ. ರಂಗಣ್ಣನವರು ಗಾಡಿ ಹತ್ತಿದ ಮೇಲೆ ರಾಮುಸ್ವಾಮಿ ಹತ್ತಿ ಕುಳಿತ. ಗಾಡಿ ಹೊರಟಿತು.

ರೈಲು ನಿಲ್ದಾಣ ತಲಪಿದಾಗ ಐದು ಗಂಟೆ. ಗಾಡಿಯವನಿಗೆ ಬಾಡಿಗೆ ಕೊಟ್ಟು, ಸಾಮಾನಿನೊಡನೆ ನಿಲ್ದಾಣದೊಳಕ್ಕೆ ಬಂದುದಾಯಿತು.

ರೈಲು ಐದೂವರೆ ಗಂಟೆಗೆ ಬಂತು. ಗಾಡಿಗಳಲ್ಲಿ ಹೆಚ್ಚು ರಷ್ಷಿರ ಲಿಲ್ಲ. ಅಲ್ಲದೆ ಬಹಳ ಮಂದಿ ಹಾಸನದಲ್ಲಿಳಿದರು. ಆದ್ದರಿಂದ ಇಬ್ಬರಿಗೂ ಅನುಕೂಲವಾದ ಜಾಗ ಸಿಕ್ಕಿತು.

ರೈಲು ಹೊಳೆನರಸೀಪುರ ತಲಪಿದಾಗ ಆರೂ ಮುಕ್ಕಾಲು ಗಂಟೆ. ನಿಲ್ದಾಣದಲ್ಲಿ ಶಿರಸ್ತೇದಾರ್ ಶಾಮಣ್ಣನವರು ಅಳಿಯ ಮತ್ತು ಬೀಗರಿ ಗಾಗಿ ಕಾದುನಿಂತಿದ್ದರು. ಗಾಡಿ ನಿಂತ ಕೂಡಲೆ ಹಾಗೂ ಹೀಗೂ ನೋಡಿ ಇಬ್ಬರನ್ನೂ ಪತ್ತೆಮಾಡಿದರು. ಹಾಸಿಗೆ ಟ್ರಂಕು ಎರಡನ್ನೂ ಕೆಳಗೆ

ಇಳಿಸಿದ್ದಾಯಿತು. ರಾಮುಸ್ವಾಮಿ ಇನ್ನೂ ಗಾಡಿಯಲ್ಲೇ ಇದ್ದ. ಶಾಮಣ್ಣ ನವರು "ಇನ್ನೇನಿದೆ ಸಾಮಾನು?" ಎಂದು ಕೇಳಿದರು. ರಾಮುಸ್ವಾಮಿ "ಇನ್ನೇನೂ ಇಲ್ಲ ಆಯ್ತು ಎರಡೇ" ಎಂದು ಕೆಳಗೆ ಇಳಿದ. ಕೆಂಪು ರುಮಾಲಿನ ಒಬ್ಬ ಮುದುಕ ಬಂದು "ಕೂಲಿ ಬರಲಾ ಬುದ್ದಿ?" ಎಂದು ಕೇಳಿದ. ಶಾಮಣ್ಣನವರು "ಬ್ಯಾಡಕಣೊ ಗಾಡಿ ಬೇಕು" ಎಂದರು. ಪಕ್ಕದಲ್ಲಿಯೇ ಹೋಗುತ್ತಿದ್ದ ಜಟಕಾ ಸಾಬಿ, "ಗಾಡಿ ಬೇಕಾ ಸಾಮಿ" ಎಂದು ಅಲ್ಲೆ ನಿಂತು ಕೇಳಿದ. ಶಾಮಣ್ಣನವರು "ಬೇಕು ಬಾ, ತೊಗೋ" ಎಂದು ನೆಲದ ಮೇಲಿದ್ದ ಹಾಸಿಗೆ ಟ್ರಂಕು ತೋರಿಸಿದರು. ಜಟಕಾಸಾಬಿ ಒಂದೊಂದು ಕೈಯಲ್ಲಿ ಒಂದೊಂದು ತೆಗೆದುಕೊಂಡ. ಶಾಮಣ್ಣನವರು "ಬನ್ನಿ" ಎಂದು ಇಬ್ಬರನ್ನೂ ಕರೆದು ಗಾಡಿಯವನ ಹಿಂದೆ ಹೊರಟರು. ತಂದೆ ಮಗ ಗಾಡಿಯಲ್ಲಿ ಕುಳಿತ ಮೇಲೆ ಶಾಮಣ್ಣನವರು ಹತ್ತಿದರು. ಅನಂತರ ಗಾಡಿ ಹೊರಟಿತು.

ಗಾಡಿ ಬೀಡಿ ಸೀನಪ್ಪನ ಅಂಗಡಿ ತಲಪಿದಾಗ ರಾಮುಸ್ವಾಮಿಗೆ ಅನ್ನಿಸಿತು. ಇನ್ನೇನು ಮನೆ ಬಂತು ಎಂದು; ಒಂದು ನಿಮಿಷದಲ್ಲಿಯೇ ಗಾಡಿ ನಿಂತಿತು. ಮೊದಲು ಶಾಮಣ್ಣನವರು ಇಳಿದರು; ಆಮೇಲೆ ರಾಮುಸ್ವಾಮಿ ಇಳಿದ; ಅವನ ಹಿಂದೆ ರಂಗಣ್ಣನವರು ಇಳಿದರು.

ರಾಮುಸ್ವಾಮಿ ಮಾವನವರ ಮನೆಯ ಕಡೆ ನೋಡಿದ. ಅದೇ ಮನೆ. ಮದುವೆಯಲ್ಲಿ ಬಂದಿದ್ದಾಗ ಮುಂದೆ ವಿಶಾಲವಾದ ಚಪ್ಪರ ಹಾಕಿತ್ತು. ಈಗ ಅದಿಲ್ಲ; ಮನೆಯ ಆ ಕಡೆ ಈ ಕಡೆ ಎರಡು ತೆಂಗಿನ ಮರ ಮನೆಗಿಂತ ಎತ್ತರವಾಗಿ, ಗೊನೆತುಂಬಿ ಗಾಳಿಗೆ ಓಲಾಡುತ್ತಿದೆ. ಮೊನ್ನೆ ಮೊನ್ನೆ ಮತ್ತೆ ಸುಣ್ಣ ಬಣ್ಣ ಮಾಡಿದ್ದುದರಿಂದ ನೋಡುವುದಕ್ಕೆ ಬಹಳ ಚೆನ್ನಾಗಿದೆ. ಚರಂಡಿಗೆ ಹಾಸಿರುವ ಹಾಸುಗಲ್ಲು ದಾಟಿ ಮೆಟ್ಟಲು ಹತ್ತಿ ಕಾಂಪೌಂಡಿನೊಳಕ್ಕೆ ಮೂವರೂ ಬಂದರು. ಮನೆಯ ಮುಂದಿನ ವಿಶಾಲವಾದ ಅಂಗಳದಲ್ಲಿ ಹುಲುಸಾಗಿ ಬೆಳೆದ ಹೂದೋಟ ಕಾಣಿಸಿತು. ವೆರಾಂಡಾದಲ್ಲಿ ನಿಂತಿದ್ದ ಹೆಂಗಸರಾರೊ ಸರ್‍ರನೆ ಒಳಗೆ ಓಡಿಹೋದರು. ಯಾರು ಎಂಬುದು ರಾಮುಸ್ವಾಮಿಗೆ ಗೊತ್ತಾಗಲಿಲ್ಲ.

ಮೂವರೂ ವೆರಾಂಡಾವನ್ನು ಪ್ರವೇಶಿಸಿದರು. ವೆರಾಂಡಾದಲ್ಲಿ ಮಧ್ಯದ ಬಾಗಿಲ ಆ ಕಡೆ ಈ ಕಡೆ ಎರಡು ಕುರ್ಚಿ ಹಾಕಿದ್ದರು. ರಾಮು ಸ್ವಾಮಿ ಬೂಟ್ಸ್ ಬಿಚ್ಚಲು ಅಲ್ಲಿದ್ದ ಒಂದು ಕುರ್ಚಿಯ ಮೇಲೆ ಕುಳಿತು ಕೊಂಡ. ರಂಗಣ್ಣನವರು ಚಪ್ಪಲಿಯನ್ನು ಅಲ್ಲಿಯೆ ಮೂಲೆಯಲ್ಲಿ ಬಿಟ್ಟು ಇನ್ನೊಂದು ಕುರ್ಚಿಯ ಮೇಲೆ ಕುಳಿತುಕೊಂಡರು. ಅವರಿಬ್ಬರಿಗೂ ಮುಂಚೆ ಹೊರಟ ಶಾಮಣ್ಣನವರು ನೇರವಾಗಿ ಪಡಸಾಲೆಗೆ ಹೋಗಿ ಹಿಂತಿರುಗಿ ನೋಡಿದರು. ಬೀಗರು, ಅಳಿಯ ವೆರಾಂಡಾದಲ್ಲೇ ಉಳಿದುದು ಗೊತ್ತಾಯಿತು. ತಕ್ಷಣವೆ ವೆರಾಂಡಾಕ್ಕೆ ಬಂದು "ಇದೇನು ಇಲ್ಲೇ ಕೂತು ಬಿಟ್ರಿ, ಒಳಗೆ ಬನ್ನಿ ರೂಮಿಗೆ" ಎಂದರು. ರಂಗಣ್ಣನವರು "ಪರವಾಯಿಲ್ಲ, ಇಲ್ಲೇ ಆರಾಮಾಗಿದೆ" ಎಂದರು. ರಾಮುಸ್ವಾಮಿ "ಇಲ್ಲ, ಬೂಟ್ಸ್ ಬಿಚ್ಕೋಣಾಂತ ಕೂತುಕೊಂಡೆ" ಎಂದ. ಮಾವನವರು "ಬೂಟ್ಸ್ ಇದ್ದರೆ ಪರವಾಯಿಲ್ಲ, ರೂಮಿನಲ್ಲೇ ಬಿಚ್ಚಬಹುದು ಏಳಿ" ಎಂದರು. ಜಟಕಾ ಸಾಬಿ ಟ್ರಂಕು ಹಾಸಿಗೆಯನ್ನು ವೆರಾಂಡಾದಲ್ಲಿ ತಂದಿಟ್ಟ. ಶಾಮಣ್ಣನವರು "ಒಳಗೆ ತೊಗೊಂಡ್ಬಾರಯ್ಯ, ಅಲ್ಯಾಕಿಟ್ಟೆ" ಎಂದು ಕೂಗಿದ ಮೇಲೆ ಸಾಬಿ ಪುನಃ ಬಂದು ಅವುಗಳನ್ನು ತೆಗೆದುಕೊಂಡು ಪಡಸಾಲೆಯನ್ನು ಪ್ರವೇ ಶಿಸಿದ. ಶಾಮಣ್ಣನವರು ಅವನಿಗೆ ಎಡಭಾಗದ ರೂಮು ತೋರಿಸಿದರು. ಅಳಿಯ ಮತ್ತು ಬೀಗರಿಗಾಗಿ ಆ ದೊಡ್ಡ ರೂಮನ್ನು ತೆರವುಮಾಡ ಲಾಗಿತ್ತು. ನೆಲಕ್ಕೆ ಅಗಲವಾದ ಕೆಂಪು ಜಮಖಾನೆಯನ್ನು ಹಾಸಿತ್ತು. ಗೋಡೆಯ ಎರಡು ಮಗ್ಗುಲಲ್ಲಿ ಎರಡು ಮಂಚ ಹಾಕಿತ್ತು. ಇನ್ನೊಂದು ಮಗ್ಗುಲಲ್ಲಿ ಒಂದು ಬಟ್ಟೆಯ ಸ್ಟ್ಯಾಂಡನ್ನು ಇಡಲಾಗಿತ್ತು. ಸ್ಟ್ಯಾಂಡಿನ ಮೇಲೆ, ಅಗಸನ ಮನೆಯಿಂದ ಬಂದ ಟವಲೊಂದನ್ನು ಮಡಿಸಿದ ಹಾಗೆಯೇ ಹಾಕಿತ್ತು. ಒಂದು ಮಂಚದ ಮುಂದೆ ಸುಂದರ್ ಕುರ್ಚಿಯೊಂದು ಖಾಲಿಯಾಗಿ ಕುಳಿತಿತ್ತು. ಶಾಮಣ್ಣನವರು ಗಾಡಿಯ ಸಾಬಿಗೆ "ಈ ಕಡೆ ಇಡು" ಎಂದು, ಸ್ಟ್ಯಾಂಡಿನ ಪಕ್ಕದಲ್ಲಿ ಉಳಿದಿದ್ದ ಜಾಗ ತೋರಿಸಿದರು. ಜಟಕಾ ಸಾಬಿ ಟ್ರಂಕು ಹಾಸಿಗೆಯನ್ನು ಅಲ್ಲಿ ಒಂದರ ಮೇಲೊಂದು ಇಟ್ಟ. ಬಾಡಿಗೆ ಕೊಟ್ಟ ಮೇಲೆ ಸಲಾಂ ಮಾಡಿ ಹೊರಟುಹೋದ.

ಶಾಮಣ್ಣನವರು ರೂಮಿನ ದೀಪ ಹಾಕಿ ವೆರಾಂಡಾಕ್ಕೆ ಬಂದರು. ರಂಗಣ್ಣನವರು ಸುಮ್ಮನೆ ಕುರ್ಚಿಯ ಮೇಲೆ ಕುಳಿತಿದ್ದರು. ರಾಮುಸ್ವಾಮಿ ಬೂಟ್ಸ್ ಬಿಚ್ಚಿ, ಅಲ್ಲೇ ಗೋಡೆಯ ಮಗ್ಗುಲಲ್ಲಿಡುತ್ತಿದ್ದ.

"ಬನ್ನಿ ಒಳಗೆ" ಎಂದು ಶಾಮಣ್ಣನವರು ಕರೆದರು.

ರಾಮುಸ್ವಾಮಿ ಎದ್ದ. ಅವನ ಹಿಂದೆ ರಂಗಣ್ಣನವರೂ ಎದ್ದು ಹೊರಟರು. ಶಾಮಣ್ಣನವರು ಇಬ್ಬರಿಗೂ ಅವರ ಕೋಣೆ ತೋರಿಸಿದರು. ದೀಪದ ಸ್ವಿಚ್ ಹಾಕಿ, "ನಿಮಗೋಸ್ಕರ ಎಲ್ಲ ಅಣಿ ಮಾಡಿಸಿದೀನಿ. ಏನಾದರೂ ಬೇಕಾದರೆ ದಯವಿಟ್ಟು ಕೇಳಿ. ಸಂಕೋಚ ಪಟ್ಟುಕೊಳ್ಳಬೇಡಿ" ಎಂದರು. ಮದುವೆಯಲ್ಲಿ ಅವರು ಇಷ್ಟು ಮುತವರ್ಜಿ ವಹಿಸಿರಲಿಲ್ಲ. ಆಗ ಆದ ವಿರಸವೇ ಇದಕ್ಕೆ ಕಾರಣವೊ, ಅಥವಾ ಶಾಮಣ್ಣನವರು ಈಗ ತುಂಬ ಸುಧಾರಿಸಿಬಿಟ್ಟಿದಾರೊ ತಿಳಿಯದು. ಸುಸಜ್ಜಿತವಾದ ಕೋಣೆ ನೋಡಿ ರಾಮುಸ್ವಾಮಿ ಬೆರಗಾದ.

ಕೋಟು ಬಿಚ್ಚಿ ಬಟ್ಟೆ ಸ್ಟ್ಯಾಂಡಿಗೆ ಹಾಕಿದ. ಶಾಮಣ್ಣನವರು ಟ್ರಂಕಿನ ಮೇಲಿದ್ದ ಹಾಸಿಗೆಯನ್ನು ಎತ್ತಿ ಹತ್ತಿರದಲ್ಲಿಯೇ ಇದ್ದ ಮಂಚದ ಮೇಲೆ ಇಟ್ಟರು. ರಾಮುಸ್ವಾಮಿ "ಛೆ ಛೆ, ನಾನು ಇಟ್ಟುಕೊಳ್ತಿದ್ದೆ, ನೀವ್ಯಾಕೆ!" ಎಂದ. ಶಾಮಣ್ಣನವರು "ಪರವಾಯಿಲ್ಲ" ಎಂದು ಒಳಗೆ ಹೋದರು. ರಾಮುಸ್ವಾಮಿ ಹಾಸಿಗೆ ಬಿಚ್ಚಿ ಅದರೊಳಗಿದ್ದ ಪಂಚೆ ಮತ್ತು ಎರಡು ಟವಲನ್ನು ಹೊರಗೆ ತೆಗೆದ. ಷರಾಯಿ ಬಿಚ್ಚಿ ಸ್ಟ್ಯಾಂಡಿನ ಮೇಲೆ ಹಾಕಿ ಪಂಚೆ ಉಟ್ಟುಕೊಂಡ. ರಂಗಣ್ಣನವರು ಸುಮ್ಮನೆ ಮಂಚದ ಮೇಲೆ ಕುಳಿತಿದ್ದರು. ಶಾಮಣ್ಣನವರು ಪ್ರವೇಶಿಸಿ "ಕೋಟು ಬಿಚ್ಚಿ ಏಳ ಬಹುದಲ್ಲ, ಬಿಸಿನೀರಿದೆ; ಸ್ವಲ್ಪ ಕೈಕಾಲು ತೊಳೆದುಕೊಂಡು...."ಎಂದರು. ಆಗ ರಂಗಣ್ಣನವರು ಎದ್ದು ಕೋಟು ಬಿಚ್ಚಿ ಅದನ್ನು ಎಲ್ಲಿ ಹಾಕಬೇಕೆಂದು ಮೊಳೆಗಾಗಿ ಹುಡುಕುತ್ತಿದ್ದರು. ಶಾಮಣ್ಣನವರು "ಆ ಸ್ಟ್ಯಾಂಡಿಗೆ ಹಾಕಿ" ಎಂದರು. ರಂಗಣ್ಣನವರು "ನಮಗ್ಯಾಕೆ ಸ್ಟ್ಯಾಂಡು" ಎಂದರು. ಶಾಮಣ್ಣನವರು ಮಾತಾಡಲಿಲ್ಲ. ರಂಗಣ್ಣನವರು ಕೋಟನ್ನು ಸ್ಟ್ಯಾಂಡಿಗೆ ಸಿಕ್ಕಿಸಿ ಅದರ ತಲೆಯ ಮೇಲೆ ತಮ್ಮ ರುಮಾಲನ್ನಿಟ್ಟರು.

ಶಾಮಣ್ಣನವರು "ಏಳಿ ಟವಲಿದೆ ತೊಗೊಳ್ಳಿ" ಎಂದು ಸ್ಟ್ಯಾಂಡಿನ ಮೇಲಿದ್ದ ಟವಲನ್ನು ತೆಗೆದು ರಂಗಣ್ಣನವರ ಕೈಗೆ ಕೊಡಲು ಹೋದರು. ರಂಗಣ್ಣನವರು "ಬ್ಯಾಡ ಬ್ಯಾಡ ಇದೆ" ಎಂದು ರಾಮುಸ್ವಾಮಿಯ ಹತ್ತಿರ ಇದ್ದ ಒಂದು ಟವಲನ್ನು ತೆಗೆದುಕೊಂಡು ಭುಜದ ಮೇಲೆ ಹಾಕಿಕೊಂಡರು. ಶಾಮಣ್ಣನವರು ಇಬ್ಬರಿಗೂ ಬಚ್ಚಲು ಮನೆ ತೋರಿಸಲು ಮುಂದೆ ನಡೆದರು. ಹಿಂದೆ ರಂಗಣ್ಣನವರು ಅವರ ಹಿಂದೆ ರಾಮುಸ್ವಾಮಿ ಹೊರಟರು. ಇವರು ಊರಿಗೆ ಬಂದಾಗ ಇನ್ನೂ ಚೆನ್ನಾಗಿ ಕತ್ತಲಾಗಿರಲಿಲ್ಲ. ಆದ್ದರಿಂದ ಒಳಗೆ ದೀಪ ಹಚ್ಚಿರಲಿಲ್ಲ. ಈಗ ಚೆನ್ನಾಗಿ ಕತ್ತಲಾಗಿದ್ದುದರಿಂದ ಎಲ್ಲ ಕಡೆಯೂ ದೀಪ ಉರಿಯುತ್ತಿತ್ತು. ವಿದ್ಯುದ್ದೀಪದ ಬೆಳಕಿನಲ್ಲಿ ಆ ಮನೆ ಇನ್ನೂ ಚೆಲುವಾಗಿ ಕಾಣಿಸಿತು. ಪಡಸಾಲೆಯಲ್ಲಿ ನಡುಮನೆಯ ಬಾಗಿಲ ಹತ್ತಿರ ಅತ್ತೆ ನಂಜಮ್ಮನವರು ನಿಂತಿದ್ದರು. ಇವರು ಬಂದುದನ್ನು ನೋಡಿ ಅವರು ಅಡಿಗೆ ಮನೆಯ ಕಡೆ ಹೊರಟು ಹೋದರು.

ರಂಗಣ್ಣನವರು ಮುಖ ತೊಳೆದುಕೊಂಡಾದ ಮೇಲೆ "ನನಗೆ ಒಂದು ಪಂಚಪಾತ್ರೆ ಉದ್ಧರಣೆ ಬೇಕು, ಸಂಧ್ಯಾವಂದನೆಗೆ" ಎಂದು ಕೇಳಿದರು. ಶಾಮಣ್ಣನವರು "ಇದೋ, ಸಿದ್ಧವಾಗಿದೆ. ಊಟದ ಮನೇಲಿ" ಎಂದರು. ರಂಗಣ್ಣನವರು ಕಾಲಿಗೆ ನೀರು ಹಾಕಿಕೊಂಡು ಕೋಣೆಗೆ ಹೋಗಿ ಹಾಸಿಗೆಯಲ್ಲಿದ್ದ ಮಡಿ ತೆಗೆದು ಉಟ್ಟುಕೊಂಡರು. ರಾಮುಸ್ವಾಮಿ ಮುಖ ಒರಸಿಕೊಳ್ಳುತ್ತ ಕೋಣೆಯ ಬಾಗಿಲಿಗೆ ಬಂದ. ತಂದೆಯವರು ಮಡಿ ಉಟ್ಟುಕೊಂಡು ಸಂಧ್ಯಾವಂದನೆ ಮಾಡಲು ಒಳಗೆ ಹೋಗಿದ್ದರು. ಶಾಮಣ್ಣನವರು ಬಹುಶಃ ತಂದೆಯವರ ಹತ್ತಿರ ಇದ್ದರೊ ಏನೋ. ಕೋಣೆಯಲ್ಲಿ ಯಾರೂ ಇಲ್ಲ, ಎಂದುಕೊಂಡು ಪ್ರವೇಶಿಸಿದ ರಾಮುಸ್ವಾಮಿಗೆ ಆಶ್ಚರ್ಯವಾಯಿತು. ವೆರಾಂಡಾದಲ್ಲಿ ಬಿಟ್ಟಿದ್ದ ಬೂಟ್ಸನ್ನು ತಂದು ಬಟ್ಟೆ ಸ್ಟ್ಯಾಂಡಿನ ಕೆಳಗಿಡಲು ಬಂದಿದ್ದ ಗೌರಿ ಗಂಡನಿಗೆ ಕಾಣಿಸಿಕೊಂಡಳು. ಅವಳು ಬೂಟ್ಸ್ ಇಡುವುದಕ್ಕಾಗಿ ಆಗತಾನೇ ಬಾಗಿದ್ದಳು. ಹಿಂದೆ ಯಾರೋ ಪ್ರವೇಶಿಸಿದುದು ಕಾಲಿನ ಸಪ್ಪಳದಿಂದ ಗೊತ್ತಾಯಿತು.

ಚಕ್ಕನೆ ಎದ್ದು ನಿಂತಳು. ರಾಮಸ್ವಾಮಿ ನೋಡಿದ. 'ಗೌರಿಯೆ' ಎಂದು ದೀಪಕ್ಕೆ ಎದುರಾಗಿ ನಿಂತಿದ್ದ ಅವಳ ಮುಖ ಹೇಳಿತು. ಆದರೆ ಅವಳು ಅಷ್ಟು ದಪ್ಪವಾಗಿದ್ದಾಳೆಂದು ರಾಮಸ್ವಾಮಿ ಕನಸಿನಲ್ಲಿಯೂ ಎಣಿಸಿರಲಿಲ್ಲ. ಗೌರಿ ಗಜಗೌರಿ ಆಗಿಬಿಟ್ಟಿದ್ದಳು!

ಕಾಲಿನ ಸಪ್ಪಳ ಕೇಳಿದ ಕೂಡಲೆ ಅವಳು ತಿರುಗಿ ನಿಂತು ಬಾಗಿಲ ಕಡೆ ನೋಡಿದಳು. ಗಂಡ ಬಾಗಿಲಲ್ಲಿಯೇ ನಿಂತು ಇವಳ ಮುಖ ನೋಡಿದ. ಗೌರಿಯ ತುಟಿ ಮುಗಳ್ನಗೆ ನಕ್ಕಿತು. ರಾಮಸ್ವಾಮಿಗೆ ನಗು ಬರಲಿಲ್ಲ. ಅವಳ ಮುಖವನ್ನೇ ದಿಟ್ಟಿಸಿ ನೋಡಿದ. ಗೌರಿಗೆ ನಾಚಿಕೆಯಾಯಿತು. ತಲೆತಗ್ಗಿಸಿದಳು. ರಾಮಸ್ವಾಮಿಯ ಕಣ್ಣು ಹೆಂಡತಿಯನ್ನು ತಲೆಯಿಂದ ಕಾಲ ವರೆಗೂ ಒಮ್ಮೆ ಪರೀಕ್ಷಿಸಿತು.

ಮನಸ್ಸು 'ಗೌರಿ ಈ ಮೂರುವರ್ಷದಲ್ಲಿ ತುಂಬ ಬೆಳೆದುಬಿಟ್ಟಿದಾಳೆ' ಎಂದಿತು. ಆದರೆ ಮುಖ ಮಾತ್ರ ಅದೇ ಚೆಲುವಿನಿಂದ ಕೂಡಿ 'ನಾನು ಗೌರಿಯೇ!' ಎಂದಿತು.

ಗಂಡ ಬಾಗಿಲಿಗೆ ಅಡ್ಡಲಾಗಿ ನಿಂತಿದ್ದುದರಿಂದ ಹೊರಗೆ ಓಡಿ ಹೋಗಲು ಗೌರಿಗೆ ಅವಕಾಶವಿರಲಿಲ್ಲ. ರಾಮಸ್ವಾಮಿಗೆ ಇದು ತಿಳಿದ ಮೇಲೆ ಅವನು ಸುಮ್ಮನೆ ಕೋಣೆಯೊಳಕ್ಕೆ ಬಂದು ಮಂಚದ ಮೇಲೆ ಕುಳಿತುಕೊಂಡ. ಬಾಗಿಲು ಖಾಲಿ ಆಯಿತೊ ಇಲ್ಲವೊ ಗೌರಿ ಸರ್‍ರನೆ ಓಡಿಹೋದಳು.

ಸ್ವಲ್ಪ ಹೊತ್ತಾದ ಮೇಲೆ ಪಡಸಾಲೆಯಲ್ಲಿ ಮತ್ತೆ ಬಳೆಯ ಸದ್ದಾಯಿತು. ಯಾರೋ ಇಬ್ಬರು ಮೆಲ್ಲಗೆ ಮಾತಾಡುತ್ತಿದ್ದಂತೆ ತೋರಿತು. ರಾಮಸ್ವಾಮಿ ಆಲಿಸಿದ. ಇವನಿಗೆ ಕಾಫಿ ಕೊಡುವ ವಿಷಯದಲ್ಲಿ ಅಕ್ಕ ತಂಗಿ ಇಬ್ಬರೂ ಜಗಳ ಆಡುತ್ತಿದ್ದರು.

ಗೌರಿ "ಹೇಮಾ ಕೊಡೇ" ಎಂದಳು.

ಹೇಮಾವತಿ "ಇಲ್ಲಮ್ಮ, ನೀನೇ ತೊಗೊಂಡ್ಹೋಗ್ ಕೊಡು. ನಿನ್ನ ಗಂಡಂಗೆ ನಾನ್ಯಾಕೆ ಕೊಡಲಿ?" ಎಂದಳು.

"ನಿಂಭಾವಂಗೆ ಕೊಡು"

"ಇಲ್ಲಮ್ಮ ನಾ ಕೊಡೊಲ್ಲ"
"ಬೇಗ ಕೊಡೆ, ಅಣ್ಣ ಬಂದ್ಬಿಡ್ತಾರೆ"
"ಬಂದರೆ ಬರ್ಲಿ ನಾ ಕೊಡೊಲ್ಲ"
"ಕೊಡೇ"
"ಇಲ್ಲ. ನಾನು ಹೇಳಿದ್ಹಾಗೆ ಕೇಳಿದರೆ?"
"ಏನು?"
"ಹೆಸರ್ಹೇಳಿದರೆ"
"ಹೋಗೇ ನೀನು"
"ನಡೀ ಹಾಗಾದರೆ ನಾ ಕೊಡೊಲ್ಲ, ನೀನೇ ಕೊಟ್ಕೊ"
"ಇಲ್ಲ, ಕೊಡೇ"
"ಹಾಗಾದರೆ ಹೆಸರ್ಹೇಳು"
"ಥೂ, ನಂಗ್ ನಾಚಿಕೇಮ್ಮ"
"ಕಣ್ಣು ಮುಚ್ಚಿಕೊಂಡ್ ಹೇಳು"

ಇಬ್ಬರಿಗೂ ನಗು ಬಂತು, ನಕ್ಕರು. ತಕ್ಷಣವೆ ಗೌರಿ ನಗುವನ್ನು ತಡೆದುಕೊಂಡು,

"ಏ ಹೇಮಾ, ತಡಮಾಡಬೇಡ ಕಣೆ, ಆರ್ಹೋಗುತ್ತೆ"
"ಆದ್ದರಿಂದ ನೀನೇ ತೊಗೊಂಡ್ಹೋಗ್ ಕೊಡು"
"ನಾನು ಈಗ ಹೋಗಿದ್ದೆ ಕಣೇ"
"ಇನ್ನೊಂದ್ಸಲ ಹೋಗಿ ಮಾತಾಡಿಸ್ಕೊಂಡ್ಬಾ"
"ಹೋಗೇ ನಂಗ್ ನಾಚ್ಕೆ"
"ನಂಗೂ ನಾಚ್ಕೆ"
"ನಿಂಭಾವಂಗ್ ಕೊಡೋಕೇನ್ ನಾಚ್ಕೇನೆ"
"ಏನೋ ನಾಚ್ಕೆ, ನಿಂಗೆಲ್ಲ ಯಾಕೆ"
"ಕೊಡೇ ಅಣ್ಣ ಬಂದ್ಬಿಡ್ತಾರೆ"
"ಹಾಗಾದರೆ ಬೇಗ ಹೆಸರೇಳ್ಬಿಡು"

ನಡುಮನೆಯಲ್ಲಿ ಕಾಲಿನ ಸಪ್ಪಳವಾಯಿತು.

ಗೌರಿ "ಅವರ ಸಂಧ್ಯಾವಂದನೆ ಮುಗೀತೋ ಏನೋ; ಬೇಗ ಕೊಟ್ಬಿಟ್ಟು ಬಾರೆ, ಅಣ್ಣ ಬಂದ್ಬಿಡ್ತಾರೆ" ಎಂದಳು.

"ಹಾಗಾದರೆ ಬೇಗ ಹೆಸರ್ಹೇಳ್ಬಿಡು"

ಗೌರಿ ಹೇಳಲೇ ಬೇಕಾಯಿತು. ಮೆಲ್ಲಗೆ "ರಾಮುಸ್ವಾಮಿ" ಎಂದಳು. ಹೇಮಾವತಿ "ಸರಿ, ಹಾಗಿರ್ಬೇಕು ನೋಡು" ಎಂದು ಕಾಫಿಯ ಬಟ್ಟಲನ್ನು ತೆಗೆದುಕೊಂಡು ಕೋಣೆಯನ್ನು ಪ್ರವೇಶಿಸಿದಳು. ಭಾವ ಮಂಚದ ಮೇಲೆ ಸುಮ್ಮನೆ ಕುಳಿತಿದ್ದರು. ಹೇಮಾವತಿಯೇ ಬಂದುದು ಎಂದು ಅವನಿಗೆ ಗೊತ್ತಾಯಿತು. ತಿರುಗಿ ನೋಡಿದ. ಹೇಮಾ ಕಾಫಿಯ ಬಟ್ಟಲನ್ನು ಮಂಚದ ಮೇಲಿಡುತ್ತಿದ್ದಳು. ಮೊದಲು ರಾಮುಸ್ವಾಮಿ ಕಾಫಿ ಇಡುತ್ತಿದ್ದ ಅವಳ ಕೈ ನೋಡಿದ. ತೆಳ್ಳಗೆ ಬೆಳ್ಳಗೆ ಎಸಳಾಗಿರುವ ಕೈ ಎರಡು ಬೆಳ್ಳಿ ಬಳೆಗಳ ನಡುವೆ ಮೂರು ಕೆಂಪು ಬಳೆ ಧರಿಸಿ ಚೆಲುವಾಗಿತ್ತು. ಮುಖ ನೋಡಿದ. ಗೌರಿಯ ಹಾಗೇ ಮುಖ. ಆದರೆ ಹಲ್ಲು ಸ್ವಲ್ಪ ಉಬ್ಬು. ತುಟಿ, ಆಗತಾನೇ ಆದ ಜಗಳವನ್ನು ನೆನಸಿಕೊಂಡು ನಗುತ್ತಿತ್ತು. ಕಾಫಿಯ ಬಟ್ಟಲನ್ನು ಮಂಚದ ಮೇಲಿಟ್ಟು "ಆರ್ಹೋಗುತ್ತೆ ತೊಗೊಳ್ಳಿ ಭಾವ" ಎಂದು ಹೇಳಿ ಹೇಮಾ ಓಡಿಹೋದಳು. ಅವಳು ಓಡುವಾಗ ರಾಮುಸ್ವಾಮಿ ಅವಳ ಕಡೆ ನೋಡಿದ. ಗೌರಿ ಮದುವೆಯಲ್ಲಿ ಹೇಗಿದ್ದಳೊ ಹಾಗೆ ಹೇಮಾವತಿ ಈಗ ಆಗಿದ್ದಾಳೆ, ಎನ್ನಿಸಿತು. ಆದರೆ ಗೌರಿಯನ್ನು ಈಗ ನೋಡುವುದಕ್ಕಾಗುವುದಿಲ್ಲ. ತುಂಬ ದಪ್ಪ ಆಗಿಬಿಟ್ಟಿದ್ದಾಳೆ!

ರಾಮುಸ್ವಾಮಿ ಕಾಫಿಯನ್ನು ಕುಡಿಯುತ್ತಿದ್ದಾಗ ರಂಗಣ್ಣನವರು ಕೋಣೆಯನ್ನು ಪ್ರವೇಶಿಸಿದರು. ಶಾಮಣ್ಣನವರು ಅವರ ಹಿಂದೆ ಬಂದುದನ್ನು ರಾಮುಸ್ವಾಮಿ ನೋಡಲಿಲ್ಲ. "ನಿಂದಾಯ್ತ ಕಾಫಿ?" ಎಂದ. ರಂಗಣ್ಣನವರು "ಆಯ್ತು" ಎಂದು ಕೈಗೆ ಪಂಚೆ ತೆಗೆದುಕೊಂಡರು. ಶಾಮಣ್ಣನವರು "ಬೇಕಾದರೆ, ಬಟ್ಟೆ ಹಾಕ್ಕೊಂಡು ಹಾಗೇ ಸ್ವಲ್ಪ ಸುತ್ತಾಡಿಕೊಂಡು ಬರಬಹುದು; ಟವನ್ ಕಡೆ ಹೋಗಿಬಿಟ್ಟು ಬರಬಹುದು" ಎಂದು ಸಲಹೆ ಮಾಡಿದರು. ರಾಮುಸ್ವಾಮಿ "ಆಗಲಿ, ಇಲ್ಲೇನು

ಮಾಡೋದು ಕೂತ್ಕೊಂಡು" ಎಂದು ಎದ್ದ. ರಂಗಣ್ಣನವರು ಪಂಚೆ ಉಟ್ಟುಕೊಂಡು, ಷರಟು ಕೋಟು ರುಮಾಲು ಧರಿಸಿದರು. ರಾಮುಸ್ವಾಮಿ ಅದೇ ಬಿಳಿಯ ಷರಾಯಿ, ಷರಟು, ಕರೀಕೋಟು ಧರಿಸಿ, ಬೂಟ್ಸು ಕಾಲು ಚೀಲ ಹಾಕಿಕೊಂಡ. ಶಾಮಣ್ಣನವರು ಕೋಟು ಪೇಟ ಹಾಕಿಕೊಂಡು ಕೈಯಲ್ಲಿ ಬೆಳ್ಳಿಯ ಕಟ್ಟಿನ ಕೋಲು ಹಿಡಿದು ಸಿದ್ಧವಾದರು. ಮೂವರೂ ವೆರಾಂಡಾಕ್ಕೆ ಬಂದಾಗ ಪಡಸಾಲೆಯ ಬಾಗಿಲ ಹತ್ತಿರಕ್ಕೆ ಹೇಮಾವತಿ ಮತ್ತು ನಂಜಮ್ಮ ಬಂದರು. ಇಬ್ಬರೂ ಬಾಗಿಲ ಹತ್ತಿರ ಮರೆಯಾಗಿ ನಿಂತು ನೋಡುತ್ತಿದ್ದರು. ಅವರ ಹಿಂದೆ ಯಾರೋ ಸುಳಿದಂತೆ ಕಾಣಿಸಿತು. ಗೌರಿಯೊ ಏನೊ!

ಊರೆಲ್ಲ ಒಂದು ಸುತ್ತು ಹಾಕಿಕೊಂಡು ಬಂದಾಗ ಎಂಟೂ ಮುಕ್ಕಾಲು ಗಂಟೆಯಾಗಿತ್ತು. ನಂಜಮ್ಮನವರು ಅಡಿಗೆ ಮುಗಿಸಿ ಎಲೆ ಹಾಕುವುದಕ್ಕೆ ಸಿದ್ಧವಾಗಿದ್ದರು. ಗಂಡಸರು ಬಂದ ಕೂಡಲೆ ಎಲೆ ಹಾಕಿ ಬಡಿಸಿದ್ದಾಯಿತು. ಊಟದ ಮನೆಯಲ್ಲಿಯೇ ಮೂವರು ಗಂಡಸರಿಗೂ, ಗೌರಿ ಮತ್ತು ಹೇಮಾವತಿಗೂ ಎಲೆ ಹಾಕಿದ್ದರು. ರಂಗಣ್ಣನವರು, ಶಾಮಣ್ಣನವರು, ಹೇಮಾವತಿ ಒಂದು ಸಾಲಿನಲ್ಲಿ ಕುಳಿತು ಕೊಳ್ಳಬೇಕಾಯಿತು. ರಾಮುಸ್ವಾಮಿ ಮತ್ತು ಗೌರಿಗೆ ಒಂದು ಸಾಲಿನಲ್ಲಿ ಎಲೆ ಹಾಕಿತ್ತು. ಗಂಡ ಹೆಂಡತಿ ಅಕ್ಕಪಕ್ಕದಲ್ಲಿ ಕುಳಿತು ಊಟಮಾಡಿದರು. ಊಟಮಾಡುತ್ತಿದ್ದಾಗ ಎರಡು ಮೂರು ಬಾರಿ ರಾಮುಸ್ವಾಮಿ ಗೌರಿಯ ಕೈ ನೋಡಿದ. ಗುಲಾಬಿ ಬಣ್ಣದ ಆ ಕೈ ಈಗ ಸ್ವಲ್ಪ ತುಂಬಿಕೊಂಡಿದ್ದರೂ ನೋಡುವುದಕ್ಕೆ ಬಹಳ ಚೆನ್ನಾಗಿತ್ತು. ಹೊಸದಾಗಿ ಇಟ್ಟುಕೊಂಡಿದ್ದ ನೀಲಿ ಬಳೆ ಚಿನ್ನದ ಬಳೆಯೊಡನೆ ಆ ಕೈಗೆ ಚೆನ್ನಾಗಿ ಒಪ್ಪಿತ್ತು.

ಊಟವಾದ ಮೇಲೆ ತಂದೆ ಮಗ ರೂಮಿಗೆ ಹೋಗಿ ಕುಳಿತಾಗ, ಗೌರಿ ಅಡಕೆಲೆ ತಟ್ಟೆ ತಂದು ಮಂಚದಮೇಲಿಟ್ಟು ಹೊರಟುಹೋದಳು. ಅವಳೇ ತಟ್ಟೆಯಲ್ಲಿ ಎಂಟು ಎಲೆ ಮಡಿಸಿ ಸಿದ್ಧಪಡಿಸಿಟ್ಟಿದ್ದಳು. ಪಕ್ಕದಲ್ಲಿಯೇ ಇನ್ನೂ ಸ್ವಲ್ಪ ಎಲೆ ಇಟ್ಟಿದ್ದಳು. ಬಣ್ಣ ಹಚ್ಚಿದ ಅಡಕೆ ತುಂಬಿದ ಡಬ್ಬಿ, ಹದವಾಗಿರುವ ಸುಣ್ಣದ ಡಬ್ಬಿ ತಟ್ಟೆಯಲ್ಲಿ ಸಿದ್ಧವಾಗಿದ್ದುವು.

ರಂಗಣ್ಣನವರ ಹಲ್ಲುಗಳೆಲ್ಲ ಎಂದೋ ಬಿದ್ದು ಹೋಗಿದ್ದುದರಿಂದ ರಾಮಸ್ವಾಮಿ ಒಬ್ಬನೇ ನಾಲ್ಕು ಎಲೆ ಹಾಕಿಕೊಂಡ.

ಆಮೇಲೆ ಶಾಮಣ್ಣನವರು ಒಂದು ಹಾಸಿಗೆ ತಂದು ರಂಗಣ್ಣನವರು ಕುಳಿತಿದ್ದ ಮಂಚದ ಮೇಲೆ ಹಾಕಿದರು.

ರಂಗಣ್ಣನವರು "ಯಾಕೆ, ಹಾಸಿಗೆ ತಂದಿದೇವೆ. ಇಬ್ಬರಿಗೂ ಅದೇ ಸಾಕಾಗಿತ್ತು. ಎಲ್ಲ ತಂದಿದೇವೆ" ಎಂದರು.

ಶಾಮಣ್ಣನವರು "ಪರವಾಯಿಲ್ಲ", ಎಂದು ಹಾಸಿಗೆಯನ್ನು ಬಿಚ್ಚಿ ಹಾಸತೊಡಗಿದರು. ರಂಗಣ್ಣನವರು ಎದ್ದು ತಡೆದು "ಬ್ಯಾಡಿ ಬ್ಯಾಡಿ, ನಾ ಹಾಸ್ಕೊಳ್ತೀನಿ ಬಿಡಿ" ಎಂದು ಅವರ ಕೈಯಿಂದ ಹಾಸಿಗೆಯನ್ನು ಬಿಡಿಸಿದರು.

ಶಾಮಣ್ಣನವರು ಏತಕ್ಕೋ ಪುನಃ ಒಳಗೆ ಹೋದರು.

ರಾಮಸ್ವಾಮಿ ಎದ್ದು ತನ್ನ ಹಾಸಿಗೆ ಹಾಸಿಕೊಂಡ. ರಂಗಣ್ಣನವರಿಗೆ ಅಚ್ಚುಕಟ್ಟಾದ ಹಾಸಿಗೆಯೇ ಸಿಕ್ಕಿದ್ದುದರಿಂದ ತನ್ನ ಹಾಸಿಗೆಯಲ್ಲಿದ್ದ ಹೆಚ್ಚಿಗೆ ಕಂಬಳಿ ದುಪಟಿಗಳನ್ನು ತಾನೇ ಹಾಸಿಕೊಂಡ. ಬಟ್ಟೆಗಳನ್ನು ಮಡಿಸಿ ತಲೆ ದಿಂಬಾಗಿ ಮಾಡಿಕೊಂಡ.

ಶಾಮಣ್ಣನವರು ಒಂದು ಹಿತ್ತಾಳೆ ರೈಲು ತಂಬಿಗೆ ತುಂಬ ನೀರು, ಒಂದು ಲೋಟ ತಂದು ಅಳಿಯನ ಟ್ರಂಕಿನ ಮೇಲಿಟ್ಟರು.

ರಾಮಸ್ವಾಮಿ "ಗಂಟೆ ಎಷ್ಟಾಯ್ತೊ?" ಎಂದು ಕೇಳಿದ.

ಶಾಮಣ್ಣನವರು "ಒಂಬತ್ತೂವರೆ ಆಯ್ತು" ಎಂದು ರಂಗಣ್ಣನವರ ಕಡೆಗೆ ತಿರುಗಿ "ಇನ್ನೇನಾದರೂ ಬೇಕೆ?" ಎಂದು ಕೇಳಿದರು.

ರಂಗಣ್ಣನವರು "ಏನೂ ಬೇಡ. ನೀವು ಹೊರಡಬಹುದು. ಮಲಕ್ಕೊಳ್ಳಿ, ಬೇಗ ಏಳಬೇಕಾಗುತ್ತೆ. ಆಗಬೇಕಲ್ಲ ಏರ್ಪಾಟೆಲ್ಲ" ಎಂದರು.

ಶಾಮಣ್ಣನವರು "ಎಲ್ಲ ಆಗಿದೆ. ನಿನ್ನೇನೇ ಎಲ್ಲ ಕೆಲಸಾನೂ ಮುಗಿಸಿಬಿಟ್ಟಿದೀವಿ. ಪುರೋಹಿತರಿಗೂ ಹೇಳಿದ್ದಾಗಿದೆ. ಅದೂ ಅಲ್ದೆ ನಾಳೆ ಒಂದು ದಿನ ಇದೆಯಲ್ಲ ಅವಕಾಶ" ಎಂದು ಬಾಗಿಲ ಹತ್ತಿರ

ಹೋಗಿ "ನಾನು ಹೋಗಲಾ? ಬೇಕಾದರೆ ದೀಪ ಆರಿಸ್ಬಿಡಿ. ದೀಪ ಇಲ್ದೆ ನಿದ್ದೆ ಬರದೇ ಹೋದರೆ ಬೆಡ್‌ಲ್ಯಾಂಪ್ ತಂದಿಡ್ತೀನಿ" ಎಂದರು.

ರಂಗಣ್ಣನವರು "ಬೇಡ ಬೇಡ, ದೀಪ ಆರಿಸ್ಬಿಡ್ತೇವೆ, ನೀವು ಹೊರಡಿ" ಎಂದು ಅದಕ್ಕಾಗಿ ಎದ್ದು ನಿಂತರು.

ಶಾಮಣ್ಣನವರು ಬಾಗಿಲನ್ನು ಮುಂದಕ್ಕೆ ಮಾಡಿಕೊಂಡು ಹೊರಟು ಹೋದರು.

ರಂಗಣ್ಣನವರು "ದೀಪ ಆರಿಸ್ಲೇನೊ?" ಎಂದು ಆಗಲೇ ಮಲಗಿದ್ದ ಮಗನನ್ನು ಕೇಳಿದರು. ಮಗ "ಆರಿಸು" ಎಂದು ಕಂಬಳಿಯನ್ನು ಮುಖದ ಮೇಲೆಳೆದುಕೊಂಡ.

ಎಷ್ಟು ಹೊತ್ತಾದರೂ ರಾಮುಸ್ವಾಮಿಗೆ ನಿದ್ದೆಯೇ ಬರಲಿಲ್ಲ. ರಂಗಣ್ಣನವರೂ ಮಂಚದ ಮೇಲೆ ಸುಮ್ಮನೆ ಹೊರಳಾಡುತ್ತಿದ್ದರು. ಅವರಿಗೂ ನಿದ್ದೆ ಬಂದಿಲ್ಲ, ಎಂಬುದು ರಾಮುಸ್ವಾಮಿಗೆ ಗೊತ್ತಾಯಿತು. ಆದರೆ ಅವರನ್ನು ಮಾತಾಡಿಸದೆ ಸುಮ್ಮನೆ ಮಲಗಿದ್ದ. ರಂಗಣ್ಣನವರು ಹೊಸ ಜಾಗ ಎಂದುಕೊಂಡು ಸುಮ್ಮನೆ ಕಣ್ಣು ಮುಚ್ಚಿ ಬಿದ್ದುಕೊಂಡಿದ್ದರು. ಸ್ವಲ್ಪ ಹೊತ್ತಿನಲ್ಲಿಯೇ ಅವರಿಗೆ ತಿಳಿಯದಂತೆ ನಿದ್ದೆ ಬಂದುಬಿಟ್ಟಿತು; ಎಂದಿನಂತೆ ಅವಲಕ್ಕಿ ಬತ್ತ ಕುಟ್ಟುವಂತೆ ಗೊರಕೆ ಷುರುವಾಯಿತು. ಇದು ಅಭ್ಯಾಸವಾಗಿಬಿಟ್ಟಿದ್ದುದರಿಂದಲೂ ಮನಸ್ಸು ಬೇರೆ ಕಡೆ ಇದ್ದುದರಿಂದಲೂ ರಾಮುಸ್ವಾಮಿ ಈ ಗೊರಕೆಯ ಕಡೆ ಗಮನ ಕೊಡಲಿಲ್ಲ. ಅವನ ಮನಸ್ಸು ಗೌರಿಯ ಮುಂದೆ ನಿಂತಿತ್ತು. 'ಗೌರಿ ತುಂಬ ಬೆಳೆದುಬಿಟ್ಟಿದಾಳೆ; ತುಂಬ ದಪ್ಪ ಆಗಿಬಿಟ್ಟಿದಾಳೆ. ಹೇಮಾವತಿ ಪರವಾಯಿಲ್ಲ. ಮಟ್ಟಸವಾಗಿದಾಳೆ' ಎಂದಿತು.

ಗೌರಿ ಇಷ್ಟು ಬೆಳೆಯುತ್ತಾಳೆ, ಹೀಗೆ ದಪ್ಪ ಆಗಿಬಿಡುತ್ತಾಳೆ ಎಂದು ರಾಮುಸ್ವಾಮಿ ಊಹಿಸಿರಲಿಲ್ಲ. ಅವನ ಊಹೆಯೇ ಬೇರೆಯಾಗಿತ್ತು. ಶ್ರೀರಾಮನ ಧರ್ಮಪತ್ನಿ ಸೀತೆಯಂತೆ ದುಷ್ಯಂತ ಮಹಾರಾಜನ ರಾಣಿ ಶಕುಂತಲೆಯಂತೆ ತೆಳ್ಳಗೆ ಬೆಳ್ಳಗೆ ಹೊನ್ನಿನ ಬಳ್ಳಿಯಾಗಿ ಬಳುಕುವ ಳೆಂದುಕೊಂಡಿದ್ದ. ಆದರೆ ಗೌರಿ ಗಜಗೌರಿಯಾಗಿಬಿಟ್ಟಿದ್ದಾಳೆ.

ತನ್ನ ಎದುರಿಗೆ ದೀಪದ ಬೆಳಕಿನಲ್ಲಿ ನಿಂತಿದ್ದ ಅವಳ ಚಿತ್ರ ಮತ್ತೆ ಕಣ್ಣುಮುಂದೆ ಬಂತು. ಅದನ್ನು ನೋಡಿ ಮನಸ್ಸಿಗೆ ಸ್ವಲ್ಪ ನಿರಾಸೆ ಯಾಯಿತು. ಮೂರು ವರುಷಗಳಿಂದ ಊಹಿಸಿದ್ದೇ ಬೇರೆ, ಇಲ್ಲಿ ಇರುವುದೇ ಬೇರೆ. ಮಧ್ಯ ಇಷ್ಟು ಕಾಲ ಹರಿಯದಿದ್ದರೆ ಈ ನಿರಾಸೆಗೆ ಕಾರಣವಿರುತ್ತಿರಲಿಲ್ಲವೊ ಏನೊ, ಎಂದುಕೊಂಡ.

ಎಷ್ಟೋ ಹೊತ್ತಿನ ಮೇಲೆ ನಿದ್ದೆ ಬಂತು.

ಕೆಟ್ಟ ಕನಸು.

'ಜುಗುಜುಗು ರೈಲು ಹೋಗುತ್ತಾ ಇದೆ. ಅದು ಇದ್ದಕ್ಕಿದ್ದಂತೆ ವಿಶಾಲವಾದ ಮನೆಯೊಂದರ ಮುಂದೆ ನಿಂತಿತು. ಮನೆಯ ಅಂಗಳದಲ್ಲಿ ದೊಡ್ಡ ಚಪ್ಪರ ಹಾಕಿದ್ದಾರೆ. ಆ ಚಪ್ಪರದಲ್ಲಿ ಮದುವೆ ಆಗುತ್ತಿದೆ. ವರ ರಾಮಸ್ವಾಮಿಯೇ. ವಧು ಯಾವುದೋ ಹುಡುಗಿ. ತೆಳ್ಳಗೆ ಬೆಳ್ಳಗೆ ಚೆನ್ನಾಗಿದ್ದಾಳೆ. ಸಂಜೆ ಹೇಮಾವತಿ ಉಟ್ಟುಕೊಂಡಿದ್ದ ಹಸಿರು ಸೀರೆ ಯನ್ನೇ ಉಟ್ಟುಕೊಂಡಿದ್ದಾಳೆ. ಹೇಮಾವತಿಯೇ ವಧುವಾಗಿದ್ದಾಳೆ! ಆಕೆಯನ್ನು ಯಾರೊ ಕರೆದುಕೊಂಡು ಬಂದರು. ಆ ಹುಡುಗಿ ಏಕೋ 'ಬರುವುದಿಲ್ಲ' ಎಂದು ಹಟ ಮಾಡುತ್ತಿದ್ದಳು. ಮಂಟಪದಲ್ಲಿ ಇದ್ದಕ್ಕಿದ್ದಂತೆ ಗದ್ದಲವಾಯಿತು. ಆದರೆ ಮರುಕ್ಷಣವೆ ಏನೂ ಗದ್ದಲವಿರಲಿಲ್ಲ. ಜೋಯಿಸರು ಅಂತರ ಪಟ ತೆಗೆದರು. ರಾಮಸ್ವಾಮಿ ವಧುವನ್ನು ನೋಡಿದ. ಚಾಕೊಲೆಟ್ ಬಣ್ಣದ ಸೀರೆ ಉಟ್ಟುಕೊಂಡಿದ್ದ ದಪ್ಪ ಹುಡುಗಿ ಗೌರಿ ಮುಂದೆ ತಲೆಬಾಗಿ ನಿಂತಿದ್ದಳು. ಅವಳು ಹಾಗೆಯೇ ಹೆಚ್ಚು ಹೊತ್ತು ನಿಂತಿರಲಿಲ್ಲ. ತಲೆಯೆತ್ತಿ ನೋಡಿದಳು. ಮುಖದ ಮೇಲೆ ಯಾವುದೋ ಬೆಳಕು ಬೀಳುತ್ತಿತ್ತು. ಅವಳ ತುಟಿ ಕಿರುನಗೆ ನಕ್ಕಿತ್ತು. ರಾಮಸ್ವಾಮಿ ಅವಳನ್ನೇ ದಿಟ್ಟಿಸಿ ನೋಡಿದ. ಸುತ್ತ ಏನೋ ಗದ್ದಲ ವಾಗುತ್ತಿತ್ತು. ಗೌರಿ ಇದ್ದಕ್ಕಿದ್ದಂತೆಯೇ ಅಳುತ್ತ ಓಡಿಹೋದಳು; ದೂರದೂರ ಹೋದಳು. ರಾಮಸ್ವಾಮಿ ಅವಳ ಹಿಂದೆಯೇ ಹೋದ. ಅವಳು ಆಗ ದಪ್ಪಗಿರಲಿಲ್ಲ, ತೆಳ್ಳಗಿದ್ದಳು, ಹಸಿರು ಸೀರೆ ಉಟ್ಟಿದ್ದಳು. ಜಿಂಕೆಯಂತೆ ಅತ್ತ ಇತ್ತ ನೆಗೆದು ಓಡಿಹೋದಳು; ಎದುರಿಗೆ ದಟ್ಟವಾದ

ಹಸಿರು ಕಾಡು. ಗೌರಿ ಅದರೊಳಗೆ ಹೋದಳು. ರಾಮಸ್ವಾಮಿಗೆ ಅವಳು ಕಾಣಿಸಲಿಲ್ಲ. ಅವನು ದೂರದಲ್ಲಿಯೇ ನಿಂತು ನೋಡಿದ. ಇಬ್ಬರ ಮಧ್ಯದಲ್ಲಿ ಇದ್ದಕ್ಕಿದ್ದಂತೆಯೇ ದೊಡ್ಡ ಹೊಳೆ ಹರಿಯಿತು. ರಾಮಸ್ವಾಮಿ ಹರಿಯುತ್ತಿರುವ ನೀರನ್ನೇ ನೋಡುತ್ತಿದ್ದ. ಯಾರೋ ಗುಂಡು ಹೊಡೆದರು, 'ಡಬಾರ್' ಎಂಬ ಸದ್ದಾಯಿತು.'

ತಕ್ಷಣವೆ ರಾಮಸ್ವಾಮಿ ಕಣ್ಣು ಬಿಟ್ಟ. ಕೋಣೆಯ ತುಂಬ ಕಗ್ಗತ್ತಲು.

'ಥೂ, ಎಂಥ ಕೆಟ್ಟಕನಸು' ಎಂದುಕೊಂಡ. ದೀಪ ಹಚ್ಚ ಬೇಕೆನ್ನಿಸಿತು. ಎದ್ದು ಕುಳಿತ. ದೀಪದ ಸ್ವಿಚ್ ಯಾವ ಕಡೆ ಇದೆಯೊ ಗೊತ್ತಾಗಲಿಲ್ಲ. ತಾನು ಮಲಗಿರುವುದು ಹೇಗೊ ಅದೂ ಈಗ ಗೊತ್ತಾಗು ವಂತಿರಲಿಲ್ಲ. ತಲೆಯ ಕಡೆ ಸ್ವಲ್ಪ ದೂರದಲ್ಲಿ ಕಿಟಕಿಯ ಬಾಗಿಲೊ ಏನೊ ಸ್ವಲ್ಪ ತೆರೆದಿದ್ದಂತೆ ಕಾಣಿಸಿತು. ಮೆಲ್ಲಗೆ ಎದ್ದು ಆ ಕಡೆಗೆ ಹೋದ. ಕೈಗೆ ಬಟ್ಟೆಯ ಸ್ಟ್ಯಾಂಡು ಸಿಕ್ಕಿತು. ಅದನ್ನು ಬಿಟ್ಟು ಹಿಂದಕ್ಕೆ ಕೈ ಹಾಕಿದಾಗ ಅರೆಮುಚ್ಚಿದ ಕಿಟಕಿಯ ಬಾಗಿಲು ಸಿಕ್ಕಿತು. ಅದನ್ನು ಸಂಪೂರ್ಣವಾಗಿ ತೆರೆದ. ಒಳಗೆ ಸ್ವಲ್ಪ ಬೆಳಕು ಬಂತು. ಆ ಕಿಟಕಿಯ ಇನ್ನೊಂದು ಬಾಗಿಲನ್ನು ತೆರೆದ. ಹಿಂದಿರುಗಿ ನೋಡಿದ. ಆಗ ರೂಮಿ ನಲ್ಲಿರುವುದೆಲ್ಲ ಮಸುಕು ಮಸುಕಾಗಿ ಕಾಣಿಸಿತು. ಎದುರಿಗೆ ಗೋಡೆಯ ಮೇಲೆ ಕಪ್ಪಗೆ ಗುಂಡಗೆ ಸ್ವಿಚ್ ಗೋಚರವಾಯಿತು. ನೇರವಾಗಿ ಹೋಗಿ ದೀಪಹಚ್ಚಿದ. ತಂದೆ ಮಲಗಿ ನಿರಾಂತಕವಾಗಿ ನಿದ್ರಿಸುತ್ತಿದ್ದರು. ಅವರ ತಲೆದಿಂಬಿನ ಹತ್ತಿರದಲ್ಲಿದ್ದ ನಸ್ಯದ ಡಬ್ಬಿ ನೆಲದ ಮೇಲೆ ಬಿದ್ದು ನಸ್ಯವೆಲ್ಲ ಚೆಲ್ಲಿಹೋಗಿತ್ತು. ಇದು ಬಿದ್ದಾಗಲೇ ಗುಂಡು ಹೊಡೆದಂತಾಗಿರಬೇಕು, ಎಂದುಕೊಂಡ.

'ಥೂ, ನಾನು ಅದೇ ಯೋಚನೆ ಮಾಡುತ್ತಿದ್ದುದರಿಂದ ಇಂಥ ಕನಸು' ಎನ್ನಿಸಿತು.

ನಸ್ಯದ ಡಬ್ಬಿಯನ್ನು ಮೇಲೆತ್ತಿಕೊಂಡ. ಅದರ ಮುಚ್ಚಳ ಎಲ್ಲೋ ಕಾಣಿಸಲಿಲ್ಲ. ಬಗ್ಗಿ ನೋಡಿದ. ತಂದೆಯ ಮಂಚದ ಕೆಳಗೆ ಆ ಮುಚ್ಚಳ

ಉರುಳಿಹೋಗಿ ಬಿದ್ದಿತ್ತು. ಅದನ್ನು ತೆಗೆದುಕೊಂಡು ಮುಚ್ಚಿ, ಡಬ್ಬಿಯನ್ನು ಪೆಟ್ಟಿಗೆಯ ಮೇಲಿಟ್ಟ. ಅಲ್ಲಿ ಗಡಿಯಾರ ಇಲ್ಲದಿದ್ದುದರಿಂದ ಗಂಟೆ ಎಷ್ಟಾಗಿತ್ತೋ ಗೊತ್ತಾಗಲಿಲ್ಲ. ಬೀದಿಯಲ್ಲಿ ಗಸ್ತು ತಿರುಗುತ್ತಿದ್ದ ಪೋಲಿಸಿನವನು ಮನೆಯ ಮುಂದೆಯೇ ಸೀಟಿ ಊದಿದ; ರಾಮಸ್ವಾಮಿ ದೀಪ ಆರಿಸಿ ಮಲಗಿಕೊಂಡ.

ನಿದ್ದೆ ಬರಲಿಲ್ಲ.

ಮನಸ್ಸು ಆ ಕನಸನ್ನೇ ಮೆಲುಕು ಹಾಕುತ್ತಿತ್ತು.

ಹೇಮಾವತಿಯಂತಿದ್ದ ಗೌರಿ ಈಗ ಗಜಗೌರಿಯಾಗಿದ್ದರೂ ಹೇಮಾವತಿಯನ್ನು ತೋರಿಸಿ ಗಜಗೌರಿಯನ್ನು ಮದುವೆ ಮಾಡಿಸಿದಂತೆ ಕನಸು ಚಿತ್ರಿಸಿತ್ತು!

ರಾಮಸ್ವಾಮಿ "ಥೂ, ಎಂಥ ಕನಸೊ!" ಎಂದುಕೊಂಡು, ಎರಡು ಕೈಗಳಲ್ಲೂ ತಲೆಗೂದಲನ್ನೊಮ್ಮೆ ಉಜ್ಜಿಕೊಂಡ. 'ನಾರಾಯಣ ಕೃಷ್ಣಾ' ಎಂದು, ಆ ಯೋಚನೆಯನ್ನೇ ಮಾಡದೆ ಎಡಮಗ್ಗುಲಾಗಿ ಮಲಗಿಕೊಂಡ. ಆದರೆ ಕಣ್ಣು ಮುಚ್ಚಿದ ಕೂಡಲೆ ಮತ್ತೆ ಆ ಕನಸಿನ ನೆನಪೇ ಆಯಿತು. ಇದನ್ನು ಮರೆಯುವ ಸಲುವಾಗಿ, ಹೊರಗೆ ಪೋಲಿಸಿನವನು ಸೀಟಿ ಹಾಕಿದುದನ್ನು ನೆನಸಿಕೊಂಡು ಏನೇನೋ ಯೋಚನೆ ಮಾಡುತ್ತಾ ಮಲಗಿಕೊಂಡ. ಅವನಿಗೆ ಯಾವಾಗ ನಿದ್ದೆ ಬಂತೋ ತಿಳಿಯದು.

ಎದ್ದಾಗ ಚೆನ್ನಾಗಿ ಬೆಳಕಾಗಿತ್ತು.

ರಂಗಣ್ಣನವರು ಎದ್ದು ಹಾಸಿಗೆ ಸುತ್ತಿ ಮಂಚದ ಮೇಲೆ ಕುಳಿತಿದ್ದರು. ಪೆಟ್ಟಿಗೆಯ ಮೇಲಿದ್ದ ನಸ್ಯದ ಡಬ್ಬಿ ಅವರ ಕೈಗೆ ಸಿಕ್ಕಿತ್ತು. ರಾಮಸ್ವಾಮಿಗೆ ಎಚ್ಚರವಾದುದನ್ನು ನೋಡಿ, "ನಸ್ಯದ ಡಬ್ಬೀನ ನೀನು ತೆಗೆದಿಟ್ಯಾ?" ಎಂದು ಕೇಳಿದರು.

ರಾಮಸ್ವಾಮಿ ಮಲಗಿಕೊಂಡೇ "ಹೌದು. ರಾತ್ರಿ ಒಂದ್ಹೊತ್ನಲ್ಲಿ ಏನೋ ಬಿದ್ದಹಾಗಾಯ್ತು. ಎದ್ದು ದೀಪ ಹಾಕಿ ನೋಡಿದೆ. ನಸ್ಯದ ಡಬ್ಬಿ ಕೆಳಗೆ ಬಿದ್ದು ಎಲ್ಲ ಚೆಲ್ಲಿಹೋಗಿತ್ತು. ಮುಚ್ಚಳ ಹಾಕಿ ಡಬ್ಬೀನ ಪೆಟ್ಟಿಗೆ ಮೇಲೆ ತೆಗೆದಿಟ್ಟಿದ್ದೆ" ಎಂದ.

ರಂಗಣ್ಣನವರು "ಎಲ್ಲ ಚೆಲ್ಲ್ಹೋಗಿದೆ!" ಎಂದು, ನೆಲದ ಮೇಲೆ ಚೆಲ್ಲಿದ್ದ ನಸ್ಯವನ್ನೇ ನೋಡಿ, ಹೇಳಿದರು. ಅವರು ವ್ಯಕ್ತಪಡಿಸದಿದ್ದರೂ ಆ ನೋಟದಲ್ಲಿ ಸ್ವಲ್ಪ ದುಃಖವಿತ್ತು. ತಕ್ಷಣವೇ ಎದ್ದು ಬಾಗಿ, ಚೆಲ್ಲಿದ ನಸ್ಯದ ಮೇಲೇ ಕೈಹಾಕಿ ಒಂದು ಚುಟಿಕೆ ತೆಗೆದುಕೊಂಡರು. ಅದನ್ನೇ ಮೂಗಿಗೆ ಏರಿಸುತ್ತಾ "ಏಳು ಹೊತ್ತಾಯ್ತು, ಆಗಲೆ ಏಳು ಗಂಟೆ ಅಂತ ಕಾಣುತ್ತೆ," ಎಂದರು.

ರಾಮಸ್ವಾಮಿ ಎದ್ದು ಹಾಸಿಗೆ ಸುತ್ತಿ, ಮುಂದಕ್ಕೆ ಮಾಡಿದ್ದ ಕೋಣೆಯ ಬಾಗಿಲು ತೆರೆದ. ಪಡಸಾಲೆಯಲ್ಲಿ ಯಾರೂ ಇರಲಿಲ್ಲ. ಆದ್ದರಿಂದ ಪುನಃ ಬಂದು ಮಂಚದ ಮೇಲೆ ಕುಳಿತುಕೊಂಡ. ಸ್ವಲ್ಪ ಹೊತ್ತಿನಲ್ಲಿಯೇ ಶಾಮಣ್ಣನವರು ಕೋಣೆಗೆ ಬಂದರು.

"ಎದ್ದಿರಾ, ತುಂಬ ಹೊತ್ತಾಯ್ತು ಎದ್ದು, ನಿದ್ದೆ ಚೆನ್ನಾಗಿ ಬಂತಾ ?" ಎಂದು ಒಟ್ಟಿಗೆ ಮೂರು ಪ್ರಶ್ನೆ ಹಾಕಿದರು.

ರಂಗಣ್ಣನವರು "ಪರವಾಯಿಲ್ಲ, ನಿದ್ದೆ ಚೆನ್ನಾಗಿ ಬಂತು. ನಾನು ಆಗಲೆ ಎದ್ದೆ. ಇವನು ಈಗ ಎದ್ದ" ಎಂದರು.

ಶಾಮಣ್ಣನವರು "ಏಳಿ ಮುಖ ತೊಳೆದುಕೊಳ್ಳಿ, ನೀರು ಕಾದಿದೆ" ಎಂದು ಎಚ್ಚಿಸಿದರು.

ರಂಗಣ್ಣನವರು "ಇಲ್ಲ, ನಾನು ಸ್ನಾನಾನೇ ಮಾಡಿಬಿಡ್ತೀನಿ, ಜಪಾತಪಾ ಎಲ್ಲ ಆಗಬೇಕಲ್ಲ" ಎಂದು ಮಗುಟ, ಪಂಚೆ, ಟವಲು, ತೆಗೆದುಕೊಂಡು ಎದ್ದರು.

ಶಾಮಣ್ಣನವರು "ಆಗಲಿ, ಹ್ಯಾಗೆ ಬೇಕಾದರೂ. ನೀರು ಚೆನ್ನಾಗಿ ಕಾದಿದೆ. ಹಾಗಾದರೆ ನೀವು ಮುಖ ತೊಳೆದುಕೊಂಡ್ಬಿಡ್ತೀರ?" ಎಂದು ರಾಮಸ್ವಾಮಿಯ ಕಡೆ ತಿರುಗಿ ಕೇಳಿದರು.

ರಾಮಸ್ವಾಮಿ "ಆಗಲಿ. ನಾನು ಆಮೇಲೆ ಸ್ನಾನ ಮಾಡ್ತೀನಿ. ಈಗ ಮುಖ ತೊಳಕೊಂಡ್ಬಿಡ್ತೀನಿ" ಎಂದು ಅವನೂ ಎದ್ದ.

ರಾಮಸ್ವಾಮಿ ಮುಖ ತೊಳೆದುಕೊಂಡು ಪಡಸಾಲೆಗೆ ಬರುವ ಹೊತ್ತಿಗೆ, ಗೌರಿ ಹಸಿರು ಸೀರೆ ಉಟ್ಟು ಮೂರು ನಾಲ್ಕು ಬೆಳ್ಳಿ ತಟ್ಟೆ ಬೆಳ್ಳಿ

ಕಪ್ಪು ಹಿಡಿದು ಇನ್ನೊಂದು ಕೋಣೆಯಿಂದ ಪ್ರವೇಶಿಸಿದಳು. ಅವಳು ನಡುಮನೆಯ ಬಾಗಿಲ ಮೂಲಕ ಅಡಿಗೆಮನೆಗೆ ಹೋಗಬೇಕಾಗಿತ್ತು. ರಾಮಸ್ವಾಮಿ ಅದೇ ಬಾಗಿಲಿಂದ ಪಡಸಾಲೆಗೆ ಬರುತ್ತಿದ್ದ. ಗಂಡ ಬರುತ್ತಿದ್ದುದನ್ನು ನೋಡಿ ತಲೆ ತಗ್ಗಿಸಿ ಒಂದೆರಡು ಕ್ಷಣ ಅಲ್ಲೇ ನಿಂತಳು. ರಾಮಸ್ವಾಮಿ ಅವಳನ್ನು ನೋಡಿದರೂ ನೋಡದವನಂತೆ, ಟವಲಿನಲ್ಲಿ ಮುಖ ಒರಸಿಕೊಳ್ಳುತ್ತ ತನ್ನ ಕೋಣೆಗೆ ಹೋದ.

ಹಿಂದಿನ ದಿನ ರಾತ್ರಿ ನಂಜಮ್ಮನವರಿಂದ ಗೌರಿಗೆ ಚೆನ್ನಾಗಿ ಪೂಜೆ ಆಗಿತ್ತು; "ನೀನೇ ತೊಗೊಂಡ್ಹೋಗಿ ಕೊಡೆ, ಅಂದರೆ ಹೇಮಾ ಕೈಲಿ ಕಳಿಸಿದಿಯಾ? ಮದುವೆ ಮಾಡಿಕೊಂಡ ಗಂಡನಿಗೆ ಕಾಫಿ ಕೊಡೋಕೆ ಇಷ್ಟು ನಾಚ್ಕೊಂಡರೆ ಆಯ್ತು. ಈಗಿನ ಕಾಲದ ಹುಡುಗರು ಹೇಗಿರಬೇಕು!" ಎಂದು, ಹೇಮಾವತಿಯನ್ನು ಕರೆದರು. "ನೀನ್ಯಾಕೆ ತೊಗೊಂಡ್ಹೋದೆ?" ಎಂತ ಅವಳನ್ನು ಗದರಿಸಿದಾಗ ಹೇಮಾವತಿ "ನಾನೇನ್ಮಾಡಲಮ್ಮ, ತುಂಬ ಬಲವಂತ ಮಾಡಿದಳು; ನಾ ಹೋಗಲ್ಲ, ನಂಗ್ ನಾಚ್ಕೆ ಅಂದಳು. ನಾನೂ ಹೋಗಲ್ಲ, ಅಂದೆ. ಕೇಳ್ಲಿಲ್ಲ. ತುಂಬ ಪೀಡಿಸಿದಳು. ಹೆಸರ್ಹೇಳು ಅಂದರೆ ನಾಚ್ಕೊಂಡು ಹೇಳ್ದೆ ತಾನೇ ಹೋಗಿ ಕೊಟ್ಟುಬರ್ತಾಳೇನೋ ಅಂತ ಹೆಸರ್ಹೇಳೇಂದರೆ, ರಾಮಸ್ವಾಮಿ ಅಂತ ಹೇಳಿ ಕಾಫೀ ಬಟ್ಟಲನ್ನ ನನ್ನ ಕೈಲಿ ಕೊಟ್ಟು ಓಡಿಹೊರಟುಹೋದಳು. ಹೋಗ್ಲಿ ಪಾಪ, ಹೆಸರ್ಹೇಳಿದಳಲ್ಲಾಂತ ನಾನೇ ತೊಗೊಂಡ್ಹೋಗಿ ಕೊಟ್ಟುಬಿಟ್ಟು ಬಂದೆ" ಎಂದು ವಿವರಿಸಿದಳು. ತಾಯಿ "ಅವಳು ಹೆಸರೇಳ್ತಾಳೇಂತ ಇನ್ಮೇಲೆ ನೀನ್ತೊಗೊಂಡ್ಹೋಗಿ ಕೊಟ್‌ಗಿಟ್ಟೀಯ! ನೀನ್ಹಾಗ್ ಮಾಡ್ತಿದ್ರೆ ನಾಚ್ಕೆ ನಾಚ್ಕೇಂತ ಮೂಲೇಲೇ ಕೂತಿರ್ತಾಳೆ ಅವಳು ಅಷ್ಟೆ" ಎಂದು ಚಿಕ್ಕ ಮಗಳಿಗೆ ಬುದ್ಧಿ ಹೇಳಿದರು. ಅದರ ಫಲವಾಗಿ ಗೌರಿ ಈಗ ಗಂಡನಿಗೆ ತಿಂಡಿ ಕಾಫಿ ಕೊಡಲು ಸಿದ್ಧಮಾಡಿ ಕೊಳ್ಳುತ್ತಿದ್ದಳು. ಹೇಮಾವತಿ ಉಪ್ಪಿಟ್ಟಿಗೆ ಕೊಬ್ಬರಿ ತುರಿಯುತ್ತಿದ್ದಳು.

ರಂಗಣ್ಣನವರು ಸ್ನಾನ ಮುಗಿಸಿ ಊಟದ ಮನೆಯಲ್ಲಿ ಜಪಕ್ಕೆ ಕುಳಿತರು.

ಗೌರಿ ಒಂದು ಪುಟ್ಟ ಬೆಳ್ಳಿಯ ತಟ್ಟೆಯ ತುಂಬ ಬಿಸಿಬಿಸಿ ಉಪ್ಪಿಟ್ಟು, ಒಂದು ಬೆಳ್ಳಿಯ ಲೋಟದ ತುಂಬ ನೀರು, ಇನ್ನೊಂದು ಬೆಳ್ಳಿಯ ಲೋಟದ ತುಂಬ ಬಿಸಿಬಿಸಿ ಕಾಫಿ ಇಷ್ಟನ್ನೂ ದೊಡ್ಡ ತಟ್ಟೆಯೊಂದರಲ್ಲಿ ಟ್ಟುಕೊಂಡು ರಾಮುಸ್ವಾಮಿ ಇದ್ದ ಕೋಣೆಯ ಬಾಗಿಲಿಗೆ ಬಂದಳು. ನೇರವಾಗಿ ಕೋಣೆಯನ್ನು ಪ್ರವೇಶಿಸುವ ಧೈರ್ಯ ಬರಲಿಲ್ಲ. ಬಾಗಿಲ ಹತ್ತಿರ ಸ್ವಲ್ಪ ನಿಂತುಕೊಂಡಳು. ಕೈ ನಡುಗುತ್ತಿತ್ತು. ನೀರಿನ ಲೋಟ ಮತ್ತು ಕಾಫಿಯ ಲೋಟ ತಟ್ಟೆಯಲ್ಲಿ ಆಡುತ್ತಿದ್ದುವು. ನೀರು ಎಲ್ಲಿ ಚೆಲ್ಲಿ ಹೋಗುವುದೋ ಎಂದು ಭಯವಾಯಿತು. ಬೇಗ ಕೊಟ್ಟುಬಂದು ಬಿಡೋಣ, ಎಂದು ಗಟ್ಟಿ ಮನಸ್ಸು ಮಾಡಿ ಕೋಣೆಯನ್ನು ಪ್ರವೇಶಿಸಿದಳು.

ರಾಮುಸ್ವಾಮಿ, ತಾನೇ ಊರಿಂದ ತಂದಿದ್ದ ಪುಟ್ಟ ಕನ್ನಡಿಯನ್ನು ತನ್ನ ಟ್ರಂಕಿನ ಮೇಲಿಟ್ಟುಕೊಂಡು ತಲೆ ಬಾಚಿಕೊಳ್ಳುತ್ತ ಕುರ್ಚಿಯ ಮೇಲೆ ಕುಳಿತಿದ್ದ. ಬಳೆಯ ಸದ್ದು ಕೇಳಿಸಿತು. ಹಿಂದಿರುಗಿ ನೋಡಿದ. ಗೌರಿ ಕಾಫಿತಿಂಡಿಯ ತಟ್ಟೆಯನ್ನು ಮಂಚದ ಮೇಲಿಟ್ಟು ಸುಮ್ಮನೆ ನಿಂತಿದ್ದಳು. ರಾಮುಸ್ವಾಮಿ ಅವಳ ಕಡೆ ನೋಡಿದಾಗ ಅವಳೂ ಇವನ ಕಡೆ ನೋಡುತ್ತಿದ್ದಳು. ಆದರೆ ತಕ್ಷಣವೆ ತಲೆ ತಗ್ಗಿಸಿಕೊಂಡು ಓಡಿ ಹೋದಳು. ರಾಮುಸ್ವಾಮಿಗೆ ಇದು ವಿಚಿತ್ರವಾಗಿ ಕಾಣಿಸಿತು. ಅವನು ತಿಂಡಿಯ ಕಡೆಯೇ ನೋಡದೆ ತಲೆ ಬಾಚಿಕೊಳ್ಳತೊಡಗಿದ. ಆದರೆ ಅವನ ಹಿಂದೆ ಪುನಃ ಬಳೆಯ ಸದ್ದಾಯಿತು. ಹಿಂದಿರುಗಿ ನೋಡಿದ. ಗೌರಿ ಬಲಗೈಯಲ್ಲಿ ದೊಡ್ಡ ಕನ್ನಡಿ, ಎಡಗೈಯಲ್ಲಿ ಸ್ವಾಸ್ತಿಕ್ ಕೋಕೊನಟ್ ಆಯಿಲ್ ಸೀಸೆ ಹಿಡಿದು ನಿಂತಿದ್ದಳು. ಈ ಬಾರಿ ಅವಳು ರಾಮುಸ್ವಾಮಿಗೆ ಇನ್ನೂ ಸ್ವಲ್ಪ ಹತ್ತಿರದಲ್ಲಿಯೇ ನಿಂತಿದ್ದಳು. ರಾಮುಸ್ವಾಮಿ ಅವಳ ಕೈಯಿಂದ ಕನ್ನಡಿ ಮತ್ತು ಎಣ್ಣೆಯ ಸೀಸೆಯನ್ನು ತೆಗೆದುಕೊಳ್ಳಬೇಕಾಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ. ಅವಳನ್ನೊಮ್ಮೆ ನೋಡಿ, ಮುಂದಲೆ ಬಾಚಿಕೊಂಡ. ಅವಳು ಹಾಗೆಯೇ ನಿಂತಿದ್ದಳು. ಅವಳಿಗೆ ಇವನ ಉತ್ತರ ಬೇಕಾಗಿತ್ತು.

ರಾಮುಸ್ವಾಮಿ "ಬೇಡ ತೊಗೊಂಡ್ಹೋಗು ಆಯ್ತು" ಎಂದ.

ಗೌರಿ "ಇಲ್ಲೇ ಇರಲಿ" ಎಂದಳು.

ರಾಮುಸ್ವಾಮಿ "ಹಾಗಾದರೆ ಅಲ್ಲಿಡು" ಎಂದು ಪಕ್ಕದ ಕಿಟಕಿ ತೋರಿಸಿದ. ಕಿಟಕಿಯ ಬಾಗಿಲು ಹಾಕಿದ್ದುದರಿಂದ ಗೌರಿ ಕನ್ನಡಿ ಮತ್ತು ಎಣ್ಣೆಯ ಸೀಸೆಯನ್ನು ಅಲ್ಲಿಟ್ಟಳು. ಗಂಡ ತಲೆ ಬಾಚಿಕೊಂಡು ದಾಯಿತು, ಎಂದು ತಿಳಿದಮೇಲೆ "ಉಪ್ಪಿಟ್ಟು ಕಾಫಿ ಆರ್ಹೋಗುತ್ತೆ" ಎಂದು ಮೆಲ್ಲಗೆ ನುಡಿದಳು.

ರಾಮುಸ್ವಾಮಿ "ಪರವಾಯಿಲ್ಲ, ಅಲ್ಲಿಡು ನಾ ತೊಗೋತೇನೆ" ಎಂದು ಹಾಗೆಯೇ ಕುಳಿತಿದ್ದ. ಆದರೆ ಗೌರಿ ಆ ದೊಡ್ಡ ತಟ್ಟೆಯಲ್ಲಿಟ್ಟಿದ್ದ ಉಪ್ಪಿಟ್ಟಿನ ತಟ್ಟೆಯನ್ನು ತೆಗೆದುಕೊಂಡು ಸುಮ್ಮನೆ ನಿಂತಿದ್ದಳು. ಕೈ ನಡುಗುತ್ತಿತ್ತು; ಬಳೆ ಸದ್ದಾಗುತ್ತಿತ್ತು. ರಾಮುಸ್ವಾಮಿ ಹಿಂದಿರುಗಿ ನೋಡಿದ. ಗೌರಿ ಉಪ್ಪಿಟ್ಟಿನ ತಟ್ಟೆ ಹಿಡಿದು ನಿಂತಿದ್ದಳು, ಗಂಡನ ಕೈಗೆ ಕೊಡಬೇಕೆಂದು. ತೆಗೆದುಕೊಳ್ಳಬೇಕೆಂಬ ಮನಸ್ಸಿದ್ದರೂ ರಾಮುಸ್ವಾಮಿಗೆ ಸ್ವಲ್ಪ ನಾಚಿಕೆಯುಂಟಾಗಿತ್ತು. ಆದ್ದರಿಂದ ಹಿಂಜರಿಯುತ್ತಿದ್ದ. ಆದರೆ ಅವಳನ್ನು ಇನ್ನೊಮ್ಮೆ ನೋಡಿದಾಗ ಧೈರ್ಯ ಬಂತು. ಎದ್ದು ಮಂಚದ ಮೇಲೆ ಬಂದು ಕಳಿತುಕೊಂಡ. ಗೌರಿ ಉಪ್ಪಿಟ್ಟಿನ ತಟ್ಟೆಯನ್ನು ಗಂಡನ ಮಂಚದ ಮೇಲಿಟ್ಟಳು. ಪಾಪ, ಕೈ ತುಂಬ ನಡುಗುತ್ತಿತ್ತು. ರಾಮುಸ್ವಾಮಿ ಅವಳ ಮುಖ ನೋಡಿದ. ಮುಖವೆಲ್ಲ ಕೆಂಪಾಗಿತ್ತು. ದೊಡ್ಡ ತಟ್ಟೆಯಲ್ಲಿದ್ದ ನೀರಿನ ಲೋಟವನ್ನು ತೆಗೆದು ಗಂಡನ ಮುಂದಿಟ್ಟಳು; ಕೈ ನಡುಗಿ ಲೋಟ ಅಲುಗಾಡಿ ಮಂಚದ ಮೇಲೆ ಸ್ವಲ್ಪ ನೀರು ಚೆಲ್ಲಿತು. ತಕ್ಷಣವೆ ಕಾಫಿಯ ಲೋಟವನ್ನು ತೆಗೆದು ಮುಂದಿಟ್ಟು, ದೊಡ್ಡ ತಟ್ಟೆಯನ್ನು ಮರೆತು ಅಲ್ಲೇ ಬಿಟ್ಟು, 'ಗೆದ್ದೆ' ಎಂದುಕೊಂಡು ಒಳಗೆ ಓಡಿಹೋದಳು.

ರಾಮುಸ್ವಾಮಿ ಉಪ್ಪಿಟ್ಟು ಕಾಫಿ ಮುಗಿಸಿದ. ತಂದೆಯವರು ಏಕೊ ಇನ್ನೂ ಕೋಣೆಗೆ ಬರಲಿಲ್ಲ. ಬಹುಶಃ ಅಲ್ಲಿಯೇ ಕುಳಿತು ತಿಂಡಿ ಕಾಫಿ ತೆಗೆದುಕೊಳ್ಳುತ್ತಿದ್ದಾರೊ, ಏನೊ, ಅನ್ನಿಸಿದಾಗ "ಛೆ, ಗೌರಿಯ ಹತ್ತಿರ

ಸ್ವಲ್ಪ ಮಾತಾಡಿದ್ದರೆ ಚೆನ್ನಾಗಿತ್ತು” ಎನ್ನಿಸಿತು. ಆದರೆ ಕಾಲ ಮಿಂಚಿ ಹೋಗಿತ್ತು. ಗೌರಿ ಹೊರಟುಹೋಗಿದ್ದಳು. ಅವಳ ಹತ್ತಿರ ಅವನು ಸರಿಯಾಗಿ ಮಾತಾಡಿರಲಿಲ್ಲ. ನೀರಿನ ಮತ್ತು ಕಾಫಿಯ ಲೋಟಗಳನ್ನು ಉಪ್ಪಿಟ್ಟು ತಿಂದ ತಟ್ಟೆಯಲ್ಲಿಟ್ಟು, ಮಂಚದ ಮೇಲೆ ಸುತ್ತಿಟ್ಟಿದ್ದ ಹಾಸಿಗೆಗೆ ಒರಗಿ ಸುಮ್ಮನೆ ಕುಳಿತ.

ಸ್ವಲ್ಪ ಹೊತ್ತಿನ ಮೇಲೆ ತಂದೆಯವರು ಬಂದರು. ರಾಮುಸ್ವಾಮಿ “ನಿಂದು ತಿಂಡಿ ಕಾಫಿ ಆಯ್ತ?” ಎಂದು ಕೇಳಿದ. ರಂಗಣ್ಣನವರು “ಆಯ್ತಪ್ಪ” ಎಂದರು.

ಶಾಮಣ್ಣನವರು ಕೋಣೆಗೆ ಬಂದು “ಬೇಕಾದರೆ ಒಂಬತ್ತು ಗಂಟೆ ಮೇಲೆ ಹಾಗೇ ಒಂದು ರೌಂಡು ಹೋಗಿಬರಬಹುದು. ನಾನೂ ಬರ್ತೇನೆ” ಎಂದರು.

ರಂಗಣ್ಣನವರು “ಆಗಲಿ, ಇಲ್ಲೇನು ಕೆಲಸ?'' ಎಂದರು.

* * * * *

ಮೂವರೂ ಮನೆಗೆ ಬಂದಾಗ ಹನ್ನೊಂದು ಗಂಟೆಯಾಗಿತ್ತು. ಊಟ ಮುಗಿದಾಗ ಹನ್ನೆರಡೂವರೆ ಗಂಟೆಯ ಸಮಯ. ಹಿಂದಿನ ದಿನದ ರಾತ್ರಿಯಂತೆಯೇ ಗೌರಿ ಎಂಟು ಎಲೆ ಮಡಿಸಿ ಅಡಕೆಲೆ ತಟ್ಟೆಯಲ್ಲಿಟ್ಟು ಕೊಂಡು ಬಂದಳು. ಕೋಣೆಯಲ್ಲಿ ರಂಗಣ್ಣನವರೂ ಇದ್ದುದರಿಂದ, ತಟ್ಟೆಯನ್ನು ಬೇಗ ಮಂಚದ ಮೇಲಿಟ್ಟು ಒಳಗೆ ಓಡಿಹೋದಳು. ರಾಮುಸ್ವಾಮಿ ಎಲೆ ಅಡಕೆ ಹಾಕಿಕೊಂಡ. ಅಷ್ಟು ಹೊತ್ತಿಗೆ ಶಾಮಣ್ಣ ನವರು ಬಂದರು; “ಸ್ವಲ್ಪ ಹೊತ್ತು ಹಾಗೇ ವಿಶ್ರಮಿಸಿಕೊಳ್ಳಬಹುದು.” ಎಂದರು. ರಂಗಣ್ಣನವರು “ಆಗಲಿ, ಆಗಲಿ” ಎಂದರು. ಶಾಮಣ್ಣನವರು “ನೀರುಗೀರು ಏನಾದರೂ ಬೇಕೊ?” ಎಂದು ಕೇಳಿದರು. ರಂಗಣ್ಣ ನವರು “ಬೇಡ ಬೇಡ” ಎಂದು ಮಂಚದ ಮೇಲಿದ್ದ ತಮ್ಮ ಹಾಸಿಗೆಗೆ ಒರಗಿಕೊಳ್ಳುತ್ತಾ ಹೇಳಿದರು.

ರಾಮುಸ್ವಾಮಿ ಎದ್ದು ಹಾಸಿಗೆಯನ್ನು ಉರುಳಿಸಿ ಅದರ ಮೇಲೆ ಬಿದ್ದುಕೊಂಡ. ರಂಗಣ್ಣನವರು ಹಾಗೆಯೇ ಹಾಸಿಗೆಯನ್ನು ಒರಗಿ

ಕೊಂಡೇ ಕಣ್ಣು ಮುಚ್ಚಿಕೊಂಡರು. ಶಾಮಣ್ಣನವರು ಇವರಿಬ್ಬರನ್ನೂ ಮಲಗಿಸಿ, ಮಾರನೆಯ ದಿನದ ಕಾರ್ಯಕ್ರಮಕ್ಕೆ ಆಗಬೇಕಾದ ಏರ್ಪಾಟಿಗೆ ಹೋದರು. ಆ ದಿನ ಬೆಳಗ್ಗೆಯೇ ಬರಬೇಕಾಗಿದ್ದ ಅಡಿಗೆಯವನು ಇನ್ನೂ ಬಂದಿರಲಿಲ್ಲ; ಸಂಜೆ ಬೀಗರ ಜೊತೆಯಲ್ಲಿ ಸುತ್ತಬೇಕಾಗಿರುವುದರಿಂದ ತರಕಾರಿ, ಬಾಳೆ ಎಲೆ, ವೀಳೆ ದೆಲೆ, ಹೂ ಮುಂತಾದುವುಗಳನ್ನು ನಾಲ್ಕು ಗಂಟೆಯೊಳಗಾಗಿ ತಂದುಬಿಡಬೇಕು, ಎಂದು ತೀರ್ಮಾನಿಸಿಕೊಂಡಿದ್ದರು. ಮೊದಲು ಅಡಿಗೆಯವನನ್ನು ನೋಡಿಕೊಂಡು ಆಮೇಲೆ ತರಕಾರಿಗೆ ಹೋಗುವುದು, ಎಂದುಕೊಂಡು ಶಾಮಣ್ಣನವರು ಮನೆ ಬಿಟ್ಟರು.

ರಾಮಸ್ವಾಮಿಗೆ ನಿದ್ದೆ, ಬರಲಿಲ್ಲ. ಸುಮ್ಮನೆ ಕಣ್ಣು ಮುಚ್ಚಿಕೊಂಡು ಮಲಗಿದ್ದ. ಮನೆ ಶಾಂತವಾಗಿತ್ತು. ಶಾಮಣ್ಣನವರಿಗೆ ಇಬ್ಬರೇ ಮಕ್ಕಳಿದ್ದುದರಿಂದ ಮನೆಯಲ್ಲಿ ಗಲಾಟೆ ಕಡಮೆ. ಅದರಲ್ಲೂ ಮಧ್ಯಾಹ್ನ ಊಟವಾದ ಮೇಲೆ ಕೆಲವು ಗಂಟೆ ಸ್ವಲ್ಪವೂ ಗದ್ದಲವಿರುತ್ತಿರಲಿಲ್ಲ. ಎಲೆ ಗೋಮ ಕಸಮುಸರೆ ಆಗುವ ವರೆಗೆ ಊಟದ ಮನೆ ಅಡಿಗೆಮನೆ, ಬಚ್ಚಲು ಮನೆಗಳಲ್ಲಿ ಮಣೆ, ಪಾತ್ರೆ, ಲೋಟಾಗಳ ಸದ್ದುಮಾತ್ರ ಆಗೊಮ್ಮೆ ಈಗೊಮ್ಮೆ ಆಗುತ್ತಿತ್ತು. ಅದಾದಮೇಲೆ ಮನೆಯಲ್ಲಿ ನಿಶ್ಶಬ್ದ. ನಂಜಮ್ಮ ನವರು ನಡುಮನೆಯಲ್ಲಿ ಚಾಪೆ ಹಾಸಿಕೊಂಡು ಸ್ವಲ್ಪಹೊತ್ತು ನಿದ್ರಿಸುತ್ತಿ ದ್ದರು. ಆದರೆ ಇವತ್ತು ಅವರು ಮಲಗಿರಲಿಲ್ಲ. ಹಿತ್ತಲಲ್ಲಿ ಏನೋ ಕೆಲಸ ಮಾಡುತ್ತಿದ್ದರು. ನಡುಮನೆಯಲ್ಲಿ ಅವರ ಸ್ಥಳವನ್ನು ಹೇಮಾವತಿ ಆಕ್ರಮಿಸಿ ದ್ದಳು. ಅವಳ ತಲೆಯ ಹತ್ತಿರ ಗೌರಿ ಕುಳಿತು ಅರಿಸಿನದ ಪೊಟ್ಟಣ ಕಟ್ಟುತ್ತಿ ದ್ದಳು. ಸಹಾಯಕ್ಕಾಗಿ ತಂಗಿಯನ್ನು ಎರಡು ಮೂರು ಬಾರಿ ಬೆನ್ನು ತಿವಿದು ಎಬ್ಬಿಸಿದಳು. ಆದರೆ ಹೇಮಾವತಿ ಏಳಲಿಲ್ಲ. 'ಹೋಗೆ ನಂಗೆ ನಿದ್ದೆ' ಎಂದು ಮುಖಕ್ಕೆ ಸೆರಗು ಮುಚ್ಚಿಕೊಂಡು ಮಲಗಿಬಿಟ್ಟದ್ದಳು. ನಿತ್ಯವೂ ಆ ಹೊತ್ತಿನಲ್ಲಿ ಇವರಿಬ್ಬರೂ ಮಲಗುತ್ತಿದ್ದ ಮುಂದಿನ ಎಡಭಾಗದ ಕೋಣೆ ಮಾರನೆಯ ದಿನದ ಕಾರ್ಯಕ್ರಮಕ್ಕಾಗಿ ಶೃಂಗರಿಸಿಕೊಳ್ಳುತ್ತಿತ್ತು. ನಂಜಮ್ಮ ನವರ ತಮ್ಮನ ಮಗ ಶಂಕರು ಎರಡು ದಿನಗಳ ಹಿಂದೆಯೇ ಬಂದು 'ಬೇಡ, ಆಮೇಲೆ ಮಾಡಿಕೊಳ್ಳೋಣ' ಎಂದು ದೊಡ್ಡಮ್ಮ ಎಷ್ಟು

ಹೇಳಿದರೂ ಕೇಳದೆ ರೂಮನ್ನೆಲ್ಲ ಖಾಲಿಮಾಡಿಸಿ, ದೊಡ್ಡಮಂಚ, ಒಂದು ಸೋಫ ಹಾಕಿಸಿ, ಅಂದಾಜು ಸಾಮಾನಿಗಾಗಿ ಬೆಂಚಿನ ಮೇಲೆ ಬೆಂಚು ನಿಲ್ಲಿಸಿ ಅಂತಸ್ತು ಮಾಡಿದ್ದ. "ಪರದೆ ಫೊಟೊ ಎಲ್ಲ ಈಗಲೇ ಹಾಕಿ ಬಿಡ್ತೀನಿ" ಎಂದು ಅವನು ತುಂಬು ಉತ್ಸಾಹದಿಂದ ಹೇಳಿದಾಗ ನಂಜಮ್ಮನವರು "ಬೇಡ ಕಣೋ. ಅವರು ಊರಿಗೆ ಬಂದು ಇಳೀಲಿ. ಆಮೇಲೆ ಉಳಿದದ್ದನ್ನು ಮಾಡ್ಕೊಳ್ಳೋಣ" ಎಂದು ಎರಡು ಮೂರು ಸಲ ಹೇಳಿದ ಮೇಲೆ ಶಂಕರು ಆ ಕೆಲಸವನ್ನು ಅಲ್ಲಿಗೆ ಬಿಟ್ಟು ಮನೆಗೆ ಹೋಗಿದ್ದ. ಹೋಗುವಾಗ ಹೇಳಿದ್ದಂತೆ ಅವನು ಮಂಗಳವಾರ ಮಧ್ಯಾಹ್ನ ಮೂರು ಗಂಟೆಗೆ ಬಂದ. ನಂಜಮ್ಮನವರು ಹಿತ್ತಲಲ್ಲೆಲ್ಲೋ ಇದ್ದುದರಿಂದ ಗೌರಿಯೇ ಶಂಕರುವಿಗೆ ವೆರಾಂಡಾದ ಬಾಗಿಲು ತೆರೆದಳು. ಹೊರಗೆ ಯಾರೋ ಕೂಗುತ್ತಿದ್ದುದು ಕೇಳಿಸಿದರೂ ರಾಮಸ್ವಾಮಿ 'ಯಾರೋ ಏನೋ' ಎಂದುಕೊಂಡು ಸುಮ್ಮನೆ ಮಲಗಿದ್ದ. ರಂಗಣ್ಣನವರಿಗೆ ಚೆನ್ನಾಗಿ ನಿದ್ದೆ ಬಂದಿತ್ತು. ಯಾರೋ ಹೆಂಗಸರು ಬಂದು ಬಾಗಿಲು ತೆರೆದುದೂ, ಯಾರೋ ಒಳಗೆ ಬಂದುದೂ, ರಾಮಸ್ವಾಮಿಗೆ ಗೊತ್ತಾಯಿತು. ಸ್ವಲ್ಪ ಹೊತ್ತಿನ ಮೇಲೆ ಪಕ್ಕದ ಕೋಣೆಯಲ್ಲಿ ಪಟಪಟ ಮೊಳೆ ಹೊಡೆಯುವ ಶಬ್ದ ಕೇಳಿಸತೊಡಗಿತು. ಕುರ್ಚಿಯೋ ಮೇಜೋ ಅಲ್ಲಿಂದಿಲ್ಲಿಗೆ ಎಳೆದಂತಾಯಿತು. ಮೊದಲು ಅದೇನು ಎಂಬುದು ರಾಮಸ್ವಾಮಿಗೆ ಹೊಳೆಯಲಿಲ್ಲ. ಏನಿರಬಹುದು ಎಂದು ಹಾಗೆಯೇ ಯೋಚಿಸಿದ. ಆಮೇಲೆ ಹೊಳೆಯಿತು; 'ಅಯ್ಯೊ ಮಂಕೇ!' ಎಂದುಕೊಂಡ.

ಆಗ ಗೌರಿಯ ನೆನಪಾಯಿತು. ಬೆಳಗ್ಗೆ ಅವನು ಗೌರಿಯೊಡನೆ ಸರಿಯಾಗಿ ಮಾತಾಡಿರಲಿಲ್ಲ. ಅವಳು ತನಗಾಗಿ ಮುತುವರ್ಜಿಯಿಂದ ತಂದಿದ್ದ ಕನ್ನಡಿ ಮತ್ತು ಎಣ್ಣೆ ಸೀಸೆಯನ್ನು ಇವನು ತೆಗೆದುಕೊಳ್ಳಲಿಲ್ಲ. 'ಉಪ್ಪಿಟ್ಟು ಕಾಫಿ ಆರ್ಹೋಗುತ್ತೆ' ಅಂದರೆ 'ಪರವಾಯಿಲ್ಲ ಅಲ್ಲಿಡು, ನಾ ತೊಗೋತೇನೆ' ಎಂದುಬಿಟ್ಟಿದ್ದ. ಆ ಮಾತು ಕೇಳಿ ಅವಳು ಎಷ್ಟು ನೊಂದುಕೊಂಡಳೊ, ತಾನು ಅವಳ ಕೈಯಿಂದ ನೇರವಾಗಿ ಉಪ್ಪಿಟ್ಟು ಕಾಫಿ

ತೆಗೆದುಕೊಳ್ಳಬೇಕಾಗಿತ್ತು. 'ಕೂತ್ಕೊ ಸ್ವಲ್ಪ' ಎನ್ನಬಹುದಾಗಿತ್ತು. 'ಏನು ವಿಶೇಷ' ಎಂದು ಕೇಳಬಹುದಾಗಿತ್ತು. ರಾಮಸ್ವಾಮಿ ಈಗ ಏನೇನೋ ಅಂದುಕೊಂಡ. ಆದರೆ ಎಲ್ಲ ನಡೆದುಹೋಗಿತ್ತು. ಮತ್ತೊಮ್ಮೆ ಗೌರಿಯನ್ನು ಭೇಟಿಮಾಡಿ ಮಾತಾಡಿಸಬೇಕೆನ್ನಿಸಿತು.

'ಅವಳು ದಪ್ಪ, ನೋಡುವುದಕ್ಕೆ ತಾನು ಚಿತ್ರಿಸಿಕೊಂಡಿದ್ದಷ್ಟು ಚೆನ್ನಾಗಿಲ್ಲ' ಎಂದು ನಿರಾಸೆಗೊಂಡಿದ್ದರೂ ತಾಳಿ ಕಟ್ಟಿದ ಅಂತಃಕರಣ, ಅಚ್ಚಂಭಟ್ಟರು, ಮಾಧವರಾಯರು, ರಂಗಸ್ವಾಮಿ, ನಂಜುಂಡಸ್ವಾಮಿ ಮುಂತಾದವರೆಲ್ಲರ ಬುದ್ಧಿವಾದ, ಮಾಗಿದ ಯೌವನ ರಾಮಸ್ವಾಮಿಯನ್ನು ಗೌರಿಯ ಕಡೆ ಮನಸೋಲುವಂತೆ ಮಾಡಿದ್ದುವು. ತಂದೆಯೂ ದಾರಿಗೆ ಬಂದರು. ಪಾಲಿಗೆ ಬಂದುದು ಪಂಚಾಮೃತವೆಂದು ಅವಳೊಡನೆ ಸುಖವಾಗಿ ಸಂಸಾರ ಮಾಡಬೇಕೆಂದು ಹೃದಯ ಹೇಳುತ್ತಿತ್ತು. ಅದಕ್ಕಾಗಿಯೇ ಈಗ ಆ ಎರಡು ಹೃದಯಗಳೂ ಹತ್ತಿರ ಬಂದಿದ್ದುವು.

ಈಗಿನ ಕಾಲದಲ್ಲಿ ದಂಪತಿಗಳು ಹೀಗಿರುವುದಿಲ್ಲ. ಮದುವೆಯಾದ ದಿನವೇ ರಸರಸವಾಗಿ ಮಾತಾಡುತ್ತ ಬಾಳ ಗೆಳೆಯ ಗೆಳತಿಯರಾಗಿ ಬಿಡುತ್ತಾರೆ. ನಿಷೇಕ ಪ್ರಸ್ತಕ್ಕೆ ಮುಂಚೆ ಈ ರೀತಿ ಬಾಂಧವ್ಯ ಬೆಳೆಯುವುದು ಅಗತ್ಯ, ಎಂದು ತಿಳಿದವರು ಹೇಳುತ್ತಾರೆ. ಆದರೆ ತಾನು ಹೆಂಡತಿಯನ್ನು ನೋಡಿ ಮೂರು ವರ್ಷಗಳಾಗಿದ್ದುವು. ಇಷ್ಟು ದಿನಗಳ ಮೇಲೆ, ಮುಹೂರ್ತ ಎರಡು ದಿನ ಇದೆ ಎನ್ನುವಾಗ ಊರಿಗೆ ಬಂದು ಹೆಂಡತಿಯ ಮುಖವನ್ನು ಎರಡನೆಯ ಬಾರಿ ನೋಡಿದ್ದಾನೆ. ವಿಚಿತ್ರ! ಆದ್ದರಿಂದಲೇ ಅವಳನ್ನು ನೋಡಿದಾಗ ಏಕೊ ದಪ್ಪಗೆ ಕಂಡು ಮನಸ್ಸಿಗೆ ನಿರಾಸೆ ಆಗಿರಬಹುದು. "ಅದನ್ನೆಲ್ಲ ಮರೆಯಬೇಕು. ನೀವಿಬ್ಬರೂ ಗಂಡಹೆಂಡಿರಾಗಿ ಮೂರು ವರುಷವಾಯಿತು. ನೀವು ನಿಮ್ಮಜ್ಜನ ಕಾಲದವರಲ್ಲ. ಈಗಿನ ಕಾಲದವರು. ಹೊಂದಿಕೊಂಡು ಚೆನ್ನಾಗಿ ಬಾಳಬೇಕು" ಎಂದು ಯಾವುದೋ ವಿವೇಕ ರಾಮಸ್ವಾಮಿಯ ಮನಸ್ಸಿಗೆ ಬುದ್ಧಿ ಹೇಳುತ್ತಿತ್ತು.

"ಮಾರನೆಯ ದಿನದೊಳಗೆ ಗೌರಿಯನ್ನೊಮ್ಮೆ ನೋಡಬೇಕು; ಅವಳ ಮನಸ್ಸಿಗೆ ಹರ್ಷವಾಗುವಂತೆ ಒಂದೆರಡು ಮಾತಾಡಬೇಕು,

ಅವಳನ್ನು ತಾನು ಪ್ರೀತಿಸುತ್ತಿರುವುದು ಅವಳಿಗೆ ತಿಳಿಯಬೇಕು, ಎಂದು ಮನಸ್ಸು ತುಂಬ ಹಂಬಲಿಸಿತು. ಆದರೆ ದುರದೃಷ್ಟ, ಅವಕಾಶವಾಗಲೇ ಇಲ್ಲ. ಗೌರಿ ಅಂದು ಮತ್ತೆ ಆ ಕೋಣೆಯ ಕಡೆ ಸುಳಿಯಲಿಲ್ಲ.

ಕಾಫಿ ತಿಂಡಿ ಮಾಡಿ ನಂಜಮ್ಮನವರು ನಾಲ್ಕು ಗಂಟೆಯ ವರೆಗೆ ಗಂಡಸಿಗಾಗಿ ಕಾದರು. ಅವರು ಬರಲಿಲ್ಲ. ಆಗ ಹೇಮಾವತಿಯನ್ನು ಕರೆದು "ಇಬ್ಬರೂ ಎದ್ದಿದ್ದಾರೇನೊ ನೋಡಿಕೊಂಡು ಬಾ" ಎಂದು ಕಳಿಸಿದರು. ಹೇಮಾವತಿ ಕೋಣೆಯ ಬಾಗಿಲ ಹತ್ತಿರ ಬಂದು ನೋಡಿದಳು. ರಂಗಣ್ಣನವರು ಎದ್ದು ನಸ್ಯ ತೀಡುತ್ತ ಕುಳಿತಿದ್ದರು. ರಾಮುಸ್ವಾಮಿಯೂ ಎದ್ದು ಮಂಚದ ಮೇಲೆ ಸುಮ್ಮನೆ ಕುಳಿತಿದ್ದ. ಹೇಮಾವತಿ ಬಂದಾಗ ರಾಮುಸ್ವಾಮಿ ಗೌರಿಯೇ ಬಂದಳೆಂದುಕೊಂಡ. ಆದರೆ ಇಬ್ಬರಿಗೂ ತಿಂಡಿ ಕಾಫಿ ತಂದುಕೊಟ್ಟಾಗ ತಿಳಿಯಿತು ಬಿಳಿಯ ಸೀರೆ ಉಟ್ಟುಕೊಂಡು ಆಗ ಬಂದಿದ್ದವಳು ಹೇಮಾವತಿಯೆ, ಗೌರಿಯಲ್ಲ ಎಂಬುದು. ಸರಿ, ಏಕೊ ಗೌರಿ ತಿಂಡಿ ಕಾಫಿ ತಂದುಕೊಡಲಿಲ್ಲ.

ಶಂಕರುವಿನ ಮನೆ ಹೊಳೆನರಸೀಪುರ ಟವನ್ನಿನಲ್ಲಿದೆ. ಅಲ್ಲಿಂದ ಮನೆಯವರೆಲ್ಲ ಸಂಜೆ ಆರು ಗಂಟೆಗೆ ಬಂದರು. ಶಂಕರು, ಶಂಕರುವಿನ ತಂದೆ, ಮಕ್ಕಳು ಇದ್ದುದರಿಂದ ರಾತ್ರಿ ಗಂಡಸರಿಗೆಲ್ಲ ಪಡಸಾಲೆಯಲ್ಲಿ, ಹೆಂಗಸರಿಗೆಲ್ಲ ಊಟದ ಮನೆಯಲ್ಲಿ ಎಲೆ ಹಾಕಲಾಯಿತು. ಬೆಳಗ್ಗೆ ಆದಂತೆ ಆದರೆ ರಾತ್ರಿ ಊಟಕ್ಕೆ ಕುಳಿತುಕೊಳ್ಳುವಾಗ ಗೌರಿಯನ್ನು ನೋಡಬಹುದು ಎಂದುಕೊಂಡಿದ್ದ ರಾಮುಸ್ವಾಮಿಗೆ ಆಗಲೂ ನಿರಾಸೆಯಾಯಿತು. ಊಟವಾದ ಮೇಲೆ ಹಿಂದಿನ ರಾತ್ರಿಯಂತೆ ಗೌರಿ ಎಲೆ ಅಡಕೆ ಮಡಿಸಿ ಕೊಡುತ್ತಾಳೇನೊ, ಎಂದುಕೊಂಡಿದ್ದರೆ ಅದಕ್ಕೂ ಸೊನ್ನೆಯಾಯಿತು. ಹೇಮಾವತಿಯೇ ಒಂದು ತಟ್ಟೆಯಲ್ಲಿ ಎಲೆ ಅಡಕೆ ಸುಣ್ಣ ಎಲ್ಲ ಇಟ್ಟುಕೊಂಡು ತಂದು, ತಮ್ಮ ಕೋಣೆಯ ಮಧ್ಯದಲ್ಲಿ ಹಾಸಿದ್ದ ಚಾಪೆಯ ಮೇಲೆ ಇಟ್ಟು ಹೊರಟುಹೋದಳು. ಊಟಮಾಡಿದ ಗಂಡಸರೆಲ್ಲರೂ ಅದರ ಸುತ್ತ ಕುಳಿತು ಎಲೆ ಅಡಕೆ ಹಾಕಿಕೊಂಡರು. ರಾಮುಸ್ವಾಮಿಯೂ ಅವರೊಳಗೊಬ್ಬನಾಗಬೇಕಾಯಿತು. ಅಂತೂ ಅಂದು ಮತ್ತೆ ಗೌರಿಯ ದರ್ಶನವಾಗಲಿಲ್ಲ!

ಎಲ್ಲ ಮಲಗಿಕೊಂಡಾಗ ಹನ್ನೊಂದು ಗಂಟೆ. ಕೋಣೆಯಲ್ಲಿ ತಂದೆ ಮಗ ಇಬ್ಬರೇ ಮಲಗಿದ್ದರು. ಶಂಕರು ಶಂಕರುವಿನ ತಂದೆ, ಅವನ ತಮ್ಮಂದಿರು ಎಲ್ಲ ಪಡಸಾಲೆಯಲ್ಲಿ ಮಲಗಿದ್ದರು. ಹೆಂಗಸರೆಲ್ಲ ಊಟದ ಮನೆಯಲ್ಲಿ ಹಾಸಿಗೆ ಹಾಸಿಕೊಂಡಿದ್ದರು.

ಹೊತ್ತಾಗಿದ್ದುದರಿಂದ ರಂಗಣ್ಣನವರಿಗೆ ಬೇಗ ನಿದ್ದೆ ಬರಲಿಲ್ಲ; ರಾಮಸ್ವಾಮಿಗೂ ನಿದ್ದೆ ಬರಲಿಲ್ಲ; ಇಬ್ಬರೂ ಸುಮ್ಮನೆ ಹೊರಳಾಡುತ್ತಿದ್ದರು. ಎಷ್ಟೋ ಹೊತ್ತಿನ ಮೇಲೆ ರಂಗಣ್ಣನವರಿಗೆ ನಿದ್ದೆ ಬಂದುದು ರಾಮಸ್ವಾಮಿಗೆ ಗೊತ್ತಾಯಿತು. ಅವನಿಗೆ ಮಾತ್ರ ನಿದ್ದೆ ಬರಲಿಲ್ಲ.

ಬೆಳಗ್ಗೆಯಿಂದ ಆದುದನ್ನೆಲ್ಲ ನೆನಸಿಕೊಳ್ಳುತ್ತ ಮಲಗಿದ್ದ. ಗೌರಿಯನ್ನೊಮ್ಮೆ ನೋಡಬೇಕಾಗಿತ್ತು. ನೋಡಿ, ಕುಳಿತು, ಮಾತಾಡಿಸಿದ್ದರೆ ಅವಳು ತನ್ನೊಡನೆ ಹೊಂದಿಕೊಳ್ಳುತ್ತಿದ್ದಳು. ಅವಳು ಗಂಡನನ್ನು ಕಂಡರೆ ತುಂಬ ಹೆದರುತ್ತಾಳೆ. ಒಂದೆರಡು ಬಾರಿ ಮಾತಾಡಿದ್ದರೆ ಆ ಹೆದರಿಕೆ ಹೋಗುತ್ತಿತ್ತು, ಎಂದುಕೊಂಡ. ಆದರೆ ದಿನ ಮುಗಿದಿತ್ತು; ಅವನಿಗೆ ತುಂಬ ನಿರಾಸೆಯಾಗಿತ್ತು.

ಎಷ್ಟೋ ಹೊತ್ತಿನ ಮೇಲೆ ಅವನಿಗೆ ನಿದ್ದೆ ಬಂತು.

ಆದರೆ ಮತ್ತೆ ಕನಸು.

'ಆಗ ಗೌರಿ ಅವನ ಕೋಣೆಗೆ ಬಂದಳು. ಕೋಣೆಯಲ್ಲಿ ಬಳೆಯ ಸದ್ದಾಯಿತು. ರಾಮಸ್ವಾಮಿ "ಯಾರು?" ಅಂದ. ಗೌರಿ "ನಾನು" ಎಂದಳು. ಇದ್ದಕ್ಕಿದ್ದಂತೆ ದೀಪ ಹೊತ್ತಿಕೊಂಡಿತು. ರಾಮಸ್ವಾಮಿ "ಇಲ್ಲಿ ಯಾಕೆ ಬಂದೆ, ನಡಿ ನೀನು" ಎಂದು ಗದರಿಸಿಕೊಂಡ. ಅವಳು ಅಳುತ್ತಾ ಹೊರಟುಹೋದಳು'

ರಾಮಸ್ವಾಮಿಗೆ ಎಚ್ಚರವಾಯಿತು. ಕಣ್ಣುಬಿಟ್ಟು ನೋಡಿದ. ಕೋಣೆಯೆಲ್ಲ ಕಗ್ಗತ್ತಲು. ಕಣ್ಣುಜ್ಜಿಕೊಂಡು ಮಗ್ಗುಲಾಗಿ ತಲೆಯೆತ್ತಿ ಮತ್ತೊಮ್ಮೆ ನೋಡಿದ. ಯಾರೂ ಬಂದ ಸುಳಿವು ಕಾಣಲಿಲ್ಲ.

"ಥೂ ಕೆಟ್ಟ ಕನಸು, ಅದೇ ಯೋಚನೆ ಮಾಡುತ್ತಿದ್ದುದರ ಫಲ" ಎಂದುಕೊಂಡು 'ನಾರಾಯಣ ಕೃಷ್ಣಾ' ಎಂದು ಎಡಮಗ್ಗುಲಾಗಿ ಮಲಗಿ

ಕೊಂಡ. ಗೌರಿಯ ಚಿತ್ರ ಕಣ್ಣು ಮುಂದೆ ಬಂದರೂ ನಿದ್ರೆಗಾಗಿ ಅವಳನ್ನು ಮರೆಯತೊಡಗಿದ. ಅವನಿಗೆ ಯಾವಾಗ ನಿದ್ದೆ ಬಂತೊ ತಿಳಿಯಲಿಲ್ಲ.

* * * * *

ಮಾರನೆಯ ದಿನ ಬೆಳಗ್ಗೆ ಅಷ್ಟು ಹೊತ್ತಿಗೇ ಶಾಸ್ತ್ರ ಪ್ರಾರಂಭವಾಯಿತು. ಬೆಳಗ್ಗೆ ಎಂಟು ಗಂಟೆಗೆ ಹಸೆಮಣೆಯ ಮೇಲೆ ಬಂದು ಕುಳಿತಾಗಲೆ ಅವನು ಗೌರಿಯನ್ನು ಅಂದು ಮೊದಲನೆಯ ಬಾರಿ ನೋಡಿದ್ದು. ಜೋಯಿಸರು ಶಾಸ್ತ್ರಗಳನ್ನು ನಡಸುವಾಗಲೇ ಗಂಡಹೆಂಡಿರ ಬಾಂಧವ್ಯವನ್ನು ಚೆನ್ನಾಗಿ ಬೆಳಸಿದರು. ಎಲ್ಲ ಮುಗಿಯುವ ಹೊತ್ತಿಗೆ ಹನ್ನೊಂದೂವರೆ ಗಂಟೆಯಾಗಿತ್ತು. ಎಲ್ಲರ ಊಟವಾದಾಗ ಒಂದು ಗಂಟೆ.

ಮಧ್ಯಾಹ್ನ ಮತ್ತೆ ರಾಮಸ್ವಾಮಿಗೆ ಸ್ವಲ್ಪ ವಿರಾಮ ಸಿಕ್ಕಿತ್ತು. ತಂದೆಯವರೂ ಮಂಚದ ಮೇಲೆ ಮಲಗಿ ನಿದ್ದೆಗಾಗಿ ಕಣ್ಣು ಮುಚ್ಚಿಕೊಂಡು ಕಾದಿದ್ದರು. ರಾಮಸ್ವಾಮಿಗೆ ನಿದ್ದೆ ಬರುವಹಾಗಿರಲಿಲ್ಲ. ಮಂಚದ ಮೇಲೆ ಸುಮ್ಮನೆ ಕುಳಿತಿದ್ದ.

ಮುಂದಕ್ಕೆ ಹಾಕಿದ್ದ ಕೋಣೆಯ ಬಾಗಿಲನ್ನು ಯಾರೋ ತಟ್ಟಿದರು. ರಾಮಸ್ವಾಮಿ ಬಾಗಿಲ ಕಡೆ ನೋಡಿದ. ಜೋಯಿಸರು ಬಾಗಿಲು ತೆರೆದುಕೊಂಡು ಒಳಗೆ ಪ್ರವೇಶಿಸಿ ಮತ್ತೆ ಬಾಗಿಲನ್ನು ಮುಂದಕ್ಕೆ ಮಾಡಿದರು.

ಅವರು ಶಾಮಣ್ಣನವರ ಮನೆಯ ಪುರೋಹಿತರು, ಶಂಕರ ಜೋಯಿಸರಿಲ್ಲದೆ ಶಾಮಣ್ಣನವರ ಮನೆಯಲ್ಲಿ ಯಾವ ಶಾಸ್ತ್ರವೂ ನಡೆಯುತ್ತಿರಲಿಲ್ಲ. ರಾಮಸ್ವಾಮಿಯ ಮದುವೆಯನ್ನೂ ಅವರೇ ಮಾಡಿಸಿದ್ದರು. ಅರುವತ್ತು ಮೀರಿದ್ದರೂ ಆ ಸಾಮಿ ಗುಂಡುಗುಂಡಗೆ ಗಟ್ಟಿಮುಟ್ಟಾಗಿದ್ದರು. ಸದಾ ಹಾಸ್ಯ ಕುಚೋದ್ಯ ಮಾಡಿಕೊಂಡು ಹಸನ್ಮುಖಿಗಳಾಗಿರುತ್ತಿದ್ದರು. ಆದರೆ, ರಾಮಸ್ವಾಮಿಯ ಮದುವೆಯಲ್ಲಿ ಅವರು ಸ್ವಲ್ಪ ಹುಷಾರಾಗಿರಬೇಕೆಂದು ಶಾಮಣ್ಣನವರು ಎಚ್ಚರಿಕೆ ಕೊಟ್ಟಿದ್ದರು. ಶಂಕರ ಜೋಯಿಸರು

ಬಹಳ ಹುಷಾರಾಗಿಯೇ ಆ ಮದುವೆ ನಡಸಿದ್ದರು. ಈ ದಿನವೂ ಎಲ್ಲ ಹುಷಾರಾಗಿಯೇ ನಡೆಯಬೇಕೆಂದು ಮನೆಯ ಯಜಮಾನರ ಅಪ್ಪಣೆ ಯಾಗಿತ್ತು. ಆದರೆ ಅಳಿಯ ಸ್ವಲ್ಪ ಬದಲಾಯಿಸಿದ್ದಾನೆ, ಎಂಬುದು ಜೋಯಿಸರಿಗೆ ಗೊತ್ತಾದ ಮೇಲೆ ಅವರು ಸ್ವಲ್ಪ ಸಡಿಲಬಿಟ್ಟಿದ್ದರು. ಅದೂ ಅಲ್ಲದೆ ಈ ಶಾಸ್ತ್ರದ ದಿನ ಅಳಿಯನನ್ನು ಕುಚೋದ್ಯಮಾಡುವುದೂ ಆ ದಿನ ನಡಸಲೇಬೇಕಾದ ಶಾಸ್ತ್ರಗಳಲ್ಲೊಂದು, ಎಂದುಕೊಂಡಿದ್ದ ಜೋಯಿಸರು ಊಟ, ಎಲೆ ಅಡಕೆ ಎಲ್ಲ ಮುಗಿಸಿಕೊಂಡು, ಹೆಂಗಸರ ಕಡೆ ವಿಚಾರಿಸಿಕೊಂಡು ಕೋಣೆಯನ್ನು ಪ್ರವೇಶಿಸಿದ್ದರು.

"ಏನು ರಾಮಸ್ವಾಮಿ ಸುಮ್ನೆ ಕೂತ್ಬಿಟ್ಟೆ? ಯಜಮಾನರು ಮಲಗಿಬಿಟ್ರೇನು?" ಎಂದು ಕೇಳಿ, ಮಂಚದ ಮುಂದಿದ್ದ ಕುರ್ಚಿಯ ಮೇಲೆ ಬಂದು ಕುಳಿತುಕೊಂಡರು.

ರಾಮಸ್ವಾಮಿ "ನಿದ್ದೆ ಬರ್ಲಿಲ್ಲ ಸುಮ್ನೆ ಕೂತ್ಕೊಂಡೆ" ಎಂದು ನೆಟ್ಟಗೆ ಕುಳಿತುಕೊಂಡ.

"ಒಂದು ಗುಟ್ಟಿನ ಮಾತು ಹೇಳ್ಬೇಕೂಂತ ಬಂದೆ" ಎಂದು ಮೆಲ್ಲಗೆ ಹೇಳಿದರು.

ರಾಮಸ್ವಾಮಿ "ಏನು ?" ಎಂದು ಗಾಬರಿಗೊಂಡು ಕೇಳಿದ.

"ಏನೂ ತಿಳಿಕೊಳ್ಳಲ್ಲತಾನೆ ?"

"ಇಲ್ಲ ಹೇಳಿ. ಅದಕ್ಕೇನು ?"

"ಏನಿಲ್ಲ. ಇವತ್ತು ನೀನು ಪುರೋಹಿತರು ಹೇಳಿದ್ಹಾಗೆ ಕೇಳ್ಬೇಕೂಂತ"

"ಆಗಲಿ—ಅದಕ್ಕೇನು, ಇದುವರೆಗೆ ಕೇಳ್ಲಿಲ್ಲವೆ ?"

"ಇವತ್ತು ಮುಹೂರ್ತ ಇರೋದು ಹತ್ತೂವರೆ ಗಂಟೆಗೆ. ಅಷ್ಟೊತ್ತಿನ ವರೆಗೂ ನೀನು ಎದ್ದಿರಬೇಕಾಗುತ್ತೆ. ಆದ್ದರಿಂದ ಈಗ ಮಲ ಕ್ಕೊಂಡು ಚೆನ್ನಾಗಿ ಒಂದು ನಿದ್ದೆ ತೆಗೀಂತ ಗುಟ್ಟಾಗಿ ಹೇಳೋಣಾಂತ ಬಂದೆ"

ರಾಮಸ್ವಾಮಿಗೆ ನಗು ಒಂತು. ಜೋಯಿಸರ ಗುಟ್ಟುಮಾತು ಚೆನ್ನಾಗಿ ಅರ್ಥವಾಗಿತ್ತು. "ಅಯ್ಯೋ, ಅಷ್ಟೇ ತಾನೇ!" ಎಂದು ನಕ್ಕ.

"ಈಗ ನನಗೆ ನಿದ್ದೆ ಬರೋದಿಲ್ಲವಲ್ಲಾ?"

"ಬರಸ್ಕೋಬೇಕಪ್ಪ" ಜೋಯಿಸರು ಹೇಳಿದರು.

"ಅದ್ಹೇಗೆ ಸಾಧ್ಯ!"

"ಬಲವಂತವಾಗಿ ಕಣ್ಣುಮುಚ್ಕೊಂಡು ಮಲಕ್ಕೊಂಡರೆ ಬರುತ್ತೆ ಬರುತ್ತೆ, ಹಾಸಿಗೆ ಹಾಸ್ಕೊ, ಪ್ರಯತ್ನಮಾಡು, ಅಷ್ಟೆ. ಅದನ್ನ ಹೇಳಿ ಹೋಗೋಣಾಂತ ಬಂದೆ" ಎಂದು ನಗುತ್ತಾ ಎದ್ದರು.

ಜೋಯಿಸರು ಹೊರಟುಹೋದಮೇಲೆ ರಾಮುಸ್ವಾಮಿ ಹಾಸಿಗೆಯನ್ನು ಉರುಳಿಸಿಕೊಂಡ. ಜೋಯಿಸರ ಮಾತು ನೆನಸಿಕೊಂಡು ನಗುತ್ತಾ ಮಲಗಿಕೊಂಡ. ಸ್ವಲ್ಪಹೊತ್ತು ನಿದ್ದೆ ಬರಲಿಲ್ಲ. ಆಮೇಲೆ ಬಂತು.

ಶಂಕರು ಕಾಫಿಯ ಕಪ್ಪುಹಿಡಿದು ಬಾಗಿಲು ತಳ್ಳಿದಾಗ ಎಚ್ಚರವಾಯಿತು. ತಂದೆಯವರು ಇನ್ನೂ ಮಲಗಿದ್ದರು. ಅವರಿಗೆ ಒಳ್ಳೆ ಗಾಢನಿದ್ದೆ ಬಂದುಬಿಟ್ಟಿತ್ತು.

ರಾಮುಸ್ವಾಮಿ "ಗಂಟೆ ಎಷ್ಟು ಈಗ?" ಎಂದು ಕೇಳಿದ. ಕಾಫಿಯ ಬಟ್ಟಲನ್ನು ರಾಮುಸ್ವಾಮಿಯ ಕೈಗೆ ಕೊಡುತ್ತ ಶಂಕರು "ನಾಲ್ಕು" ಅಂದ. ಆಗ ಇದ್ದಕ್ಕಿದ್ದಂತೆ ರಂಗಣ್ಣನವರಿಗೆ ಎಚ್ಚರವಾಯಿತು. ಏನು "ನಾಲ್ಕು ಗಂಟೇನೆ!" ಎಂದು ಎದ್ದು ಕುಳಿತರು.

ಹಾಸಿಗೆ ಸುತ್ತಿಡುತ್ತಾ "ಎಷ್ಟೊಂತ್ತು ಮಲಕ್ಕೊಂಡ್ಬಿಟ್ಟೆ" ಎಂದುಕೊಂಡರು. ಅವರದೂ ಕಾಫಿ ಆಯಿತು.

*   *   *   *

ರಾತ್ರಿ ಆರತಿ ಅಕ್ಷತೆ ಊಟ ಶಾಸ್ತ್ರ ಎಲ್ಲ ಮುಗಿದ ಮೇಲೆ ಹತ್ತು ಗಂಟೆಗೆ ಮುತ್ತೈದೆಯರು ದಂಪತಿಗಳನ್ನು ಮಲಗುವ ಕೋಣೆಯ ಸುಪ್ಪತ್ತಿಗೆಯ ಮೇಲೆ ಕೂಡಿಸಿದರು. ಎಲೆ ಅಡಕೆ ಕೊಡಿಸಿ ಆರತಿ ಬೆಳಗಿದರು. ಹೆಂಗಸರ ಶಾಸ್ತ್ರಗಳೆಲ್ಲ ಮುಗಿದ ಮೇಲೆ ಬಾಗಿಲು ಮುಂದಕ್ಕೆ ಹಾಕಿಕೊಂಡು ಎಲ್ಲ ಹೊರಗೆ ಬಂದರು.

ಬಾಗಿಲು ಮುಚ್ಚಿದ ಕೂಡಲೆ ರಾಮುಸ್ವಾಮಿಯ ಮೈಯಲ್ಲಿ ಮಿಂಚು ಹರಿದಂತಾಯಿತು. ಪಕ್ಕದಲ್ಲಿ ಕುಳಿತಿದ್ದ ಗೌರಿಯ ಮುಖ ನೋಡಿದ.

ಅಂಜೂರಬಣ್ಣದ ಹೊಸ ಸೀರೆ, ಹಸುರು ಜರಿ ಕುಪ್ಪಸ ತೊಟ್ಟುಕೊಂಡು ಚೆನ್ನಾಗಿ ಶೃಂಗರಿಸಿಕೊಂಡಿದ್ದ ಗೌರಿ ಆಗ ಅವನ ಕಣ್ಣಿಗೆ ರತಿಯಾಗಿ ಕಾಣಿಸಿದಳು. ತಕ್ಷಣವೆ ಅವಳ ಕೈ ಹಿಡಿದುಕೊಳ್ಳಬೇಕೆನಿಸಿತು. ಅವಳ ತೊಡೆಯ ಮೇಲಿದ್ದ ಬಲಗೈಯನ್ನು ಹಿಡಿದು ಬಲವಾಗಿ ಹಿಂಡಿದ. ಗೌರಿಗೆ ವಿಚಿತ್ರಾನುಭವವಾಯಿತು. ಗೌರಿ ಇದ್ದಕ್ಕಿದ್ದಂತೆ ಎದ್ದು, ಕಂಬನಿ ಸುರಿಸುತ್ತಾ ಗಂಡನ ಕಾಲಮೇಲೆ ಬಿದ್ದುಬಿಟ್ಟಳು.

ರಾಮುಸ್ವಾಮಿಗೆ ಗಾಬರಿಯಾಯಿತು, ಆಶ್ಚರ್ಯವಾಯಿತು.

"ಯಾಕೆ ಗೌರಿ ?" ಎಂದ.

ತನ್ನ ಗಂಡ ತನ್ನನ್ನು 'ಗೌರಿ' ಎಂದು ಕರೆದದ್ದು ಅದೇ ಮೊದಲು. ಅದನ್ನು ಕೇಳಿ, ಎರಡು ಕಣ್ಣುಗಳಲ್ಲೂ ಆನಂದ ಬಾಷ್ಪ ಧಾರಾಕಾರವಾಗಿ ಸುರಿಯಿತು.

ರಾಮುಸ್ವಾಮಿ ಮತ್ತೊಮ್ಮೆ "ಯಾಕೆ ಗೌರಿ ?" ಎಂದು ಕೇಳಿದ.

ಗೌರಿ ತಲೆಯೆತ್ತಿ, ಗಂಡನ ಮೊಳಕಾಲುಗಳೆರಡನ್ನೂ ಅಪ್ಪಿಕೊಂಡು ಕುಳಿತುಕೊಂಡಳು. ಅವಳು ತಲೆ ಎತ್ತಿ ನೋಡಿದಾಗ ಕಣ್ಣು ಕಂಬನಿ ಸುರಿಸುತ್ತಿದ್ದರೂ ಮುಖವೆಲ್ಲ ಕೆಂಪೇರಿದ್ದರೂ ತುಟಿ ಕಿರುನಗೆ ನಗುತ್ತಿತ್ತು.

ರಾಮುಸ್ವಾಮಿ ಅವಳ ಮುಂದಲೆಯನ್ನು ನೇವರಿಸಿ "ಯಾಕೆ ಗೌರಿ ಅತ್ತದ್ದು?" ಎಂದು ಕುತೂಹಲದಿಂದ ಕೇಳಿದ.

ಗೌರಿ "ಯಾಕೂ ಇಲ್ಲ" ಎಂದಳು.

"ನಾಚಿಕೋಬೇಡ ಹೇಳು"

ಗೌರಿ ತಲೆತಗ್ಗಿಸಿಕೊಂಡು ಸುಮ್ಮನೆ ಕುಳಿತ್ತಿದ್ದಳು.

"ಹೇಳು ಗೌರಿ, ನನ್ನೆದುರಿಗೆ ನಾಚ್ಕೇನೆ? ಹೇಳು, ಯಾಕೆ ಅತ್ತದ್ದು?"

"ಇಲ್ಲ, ಅಳಲಿಲ್ಲ ನಾನು"

"ಈಗ ನನ್ನೆದುರಿಗೇ ಅತ್ತಿ?"

"ಇಲ್ಲ. ಅದು ನಗು" ಎಂದು ತಲೆಯೆತ್ತಿ ಕಿರುನಗೆ ನಕ್ಕಳು.

"ತಮಾಷೆ ಮಾಡ್ತೀಯ! ನೀನು ಈಗ ಅಳಲಿಲ್ಲವೆ ?"

"ಇಲ್ಲ, ನೀವು ನನ್ನನ್ನ ಇಷ್ಟರಮಟ್ಟಿಗೆ ಪ್ರೀತಿಸ್ತೀರಿ ಅಂತ ನಾನು ಎಣಿಸಿರಲಿಲ್ಲ. ನಿಮ್ಮ ಮಾತು ಕೇಳಿ ತುಂಬ ಆನಂದವಾಯ್ತು. ತಡೀಲಾರದೆ ಬಿದ್ದುಬಿಟ್ಟೆ, ಇದು ಆನಂದ ಬಾಷ್ಪ. ದುಃಖದ ಕಣ್ಣೀರಲ್ಲ" ಎಂದು ಎದ್ದು ಮಂಚದ ಮೇಲೆ, ಪಕ್ಕದಲ್ಲಿ ಕುಳಿತುಕೊಂಡಳು.

ರಾಮಸ್ವಾಮಿಗೂ ತುಂಬ ಆನಂದವಾಯಿತು.

"ಗೌರಿ, ಇನ್ನೂ ಸ್ವಲ್ಪ ಹತ್ತಿರ ಬಾ" ಎಂದು ಅವಳನ್ನಪ್ಪಿ ಪಕ್ಕಕ್ಕೆ ಳೆದುಕೊಂಡ. ಗೌರಿಗೂ ಮೈಯಲ್ಲಿ ವಿಚಿತ್ರ ಶಕ್ತಿ ಹರಿದಂತಾಗಿತ್ತು.

ರಾಮಸ್ವಾಮಿ ಗೌರಿಯ ಕಣ್ಣುಗಳನ್ನು ನೋಡಿದ; ಗೌರಿ ಗಂಡನ ಕಣ್ಣುಗಳನ್ನೇ ದಿಟ್ಟಿಸಿ ನೋಡಿದಳು. ರಾಮಸ್ವಾಮಿಯ ತುಟಿಗೆ ಸುಮ್ಮ ನಿರಲಾಗಲಿಲ್ಲ; ಆದರೆ ಗೌರಿ ತಡೆದಳು.

"ಸ್ವಲ್ಪ ತಡೀರಿ" ಎಂದು ಎದ್ದು ದೂರ ಹೋದಳು.

"ಯಾಕೆ ಗೌರಿ ?" ಎಂದು ಕೇಳಿದ.

ಉತ್ತರ ಹೇಳದೆ ಗೌರಿ, ಎದುರಿಗಿದ್ದ 'ರಾಧಾ-ಕೃಷ್ಣ' ಚಿತ್ರಪಟದ ಹೂವಿನ ಹಾರವನ್ನು ಮೆಲ್ಲಗೆ ತೆಗೆದುಕೊಂಡಳು. ರಾಮಸ್ವಾಮಿ ಮಾತಾಡದೆ ಸುಮ್ಮನೆ ಅವಳನ್ನೇ ನೋಡುತ್ತ ಕುಳಿತಿದ್ದ. ಗೌರಿ ಹಾರ ವನ್ನು ಮೇಜಿನ ಮೇಲಿಟ್ಟುಕೊಂಡು ಅಲ್ಲಿಯೇ ಇದ್ದ ಪನ್ನೀರುದಾನಿ ಯಿಂದ ಗಂಡನಿಗೆ ಪನ್ನೀರು ಚಿಮುಕಿಸಿದಳು. ಬೆಳ್ಳಿಯ ತಟ್ಟೆಯಲ್ಲಿದ್ದ ಗಂಧದ ಬಟ್ಟಲನ್ನು ತೆಗೆದುಕೊಂಡು ಕೈತುಂಬ ಗಂಧ ಹಾಕಿಕೊಂಡು ಗಂಡನ ಕೈಗೆ, ಕೆನ್ನೆಗೆ ಹಚ್ಚಿದಳು. ತೆಗೆದಿಟ್ಟುಕೊಂಡಿದ್ದ ಹೂವಿನ ಹಾರ ವನ್ನು ಎರಡು ಕೈಗಳಲ್ಲೂ ಹಿಡಿದು ಗಂಡನ ಕೊರಳಿಗೆ ಹಾಕಿದಳು. ರಾಮಸ್ವಾಮಿಗೆ ವಿಚಿತ್ರಾನಂದವಾಯಿತು. ಹಾರವನ್ನು ತೆಗೆಯಲು ಹೋದ. ಗೌರಿ "ಬೇಡ ಇರಲಿ" ಎಂದಳು. ಆದರೆ ಅವನು "ಇಲ್ಲ ಸ್ವಲ್ಪ ತೆಗಿ" ಎಂದು ಅವಳ ಕೈ ತಡೆದು ಹಾರವನ್ನು ತೆಗೆದು ಹೆಂಡತಿಯ ಕೊರಳಿಗೆ ಹಾಕಿ, ಮುಖದ ಹತ್ತಿರ ಹೋದ.

ಗೌರಿ ಹಿಂದಕ್ಕೆ ಸರಿದು "ಸ್ವಲ್ಪ ತಡೀರಿ" ಎಂದಳು.

ರಾಮಸ್ವಾಮಿ ಹಿಂದಕ್ಕೆ ಸರಿಯಬೇಕಾಯಿತು.

ಗೌರಿ, ಮೇಜಿನ ಮೇಲೆ ಮಾವಿನ ಹಣ್ಣಿನ ಹೋಳು ಹೆಚ್ಚಿ ಇಟ್ಟಿದ್ದ ಪುಟ್ಟತಟ್ಟೆಯನ್ನು ತೆಗೆದುಕೊಂಡು ಬಂದು ಮತ್ತೆ ಮಂಚದ ಮೇಲೆ ಕುಳಿತಳು. ರಾಮಸ್ವಾಮಿ ಹಣ್ಣಿನ ಹೋಳು ತೆಗೆದುಕೊಳ್ಳಲು ತಟ್ಟೆಗೆ ಕೈಹಾಕಿದ.

ಗೌರಿ "ಉಹ್ಞು" ಎಂದು ತಾನೇ ಒಂದು ಹೋಳು ತೆಗೆದು ಗಂಡನ ಬಾಯಿಯಲ್ಲಿಟ್ಟಳು. ಈ ಪಾಠ ಕಲಿತ ರಾಮಸ್ವಾಮಿ ತಟ್ಟೆಯಿಂದ ಇನ್ನೊಂದು ಹೋಳು ತೆಗೆದು ಗೌರಿಯ ಬಾಯಿಯಲ್ಲಿಟ್ಟ. ಅವಳು ಮತ್ತೆ ಹಾಗೆಯೇ ಮಾಡಿದಳು; ಇವನೂ ಮತ್ತೆ ಹಾಗೆಯೇ ಮಾಡಿದ. ಹಣ್ಣಿನ ತಟ್ಟೆ ಬರಿದಾಯಿತು. ಗೌರಿ ಎದ್ದು ಹೋಗಿ ಬೆಳ್ಳಿಯ ತಟ್ಟೆಯಲ್ಲಿದ್ದ ಹಾಲಿನ ಲೋಟ ತಂದಳು. ಕೇಸರಿ ಬಾದಾಮಿ ಹಾಕಿದ ಬಿಸಿಬಿಸಿ ಹಾಲು ಘಮಘಮಿಸುತ್ತಿತ್ತು. ಗಂಡ ಬಟ್ಟಲನ್ನು ಕೈಗೆ ತೆಗೆದುಕೊಂಡು ತುಟಿಗೆ ಹಚ್ಚಿದ. ಗೌರಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದಳು. ಇದ್ದಕ್ಕಿದ್ದಂತೆ ಬಟ್ಟಲಿಗೆ ಕೈಹಾಕಿ ಕಿತ್ತುಕೊಂಡಳು. ರಾಮಸ್ವಾಮಿಗೆ ಆಶ್ಚರ್ಯವಾಯಿತು.

"ಯಾಕೆ ?!" ಅಂದ.

"ನನಗೆ ?"—ಗೌರಿ ಕೇಳಿದಳು.

"ಅಷ್ಟೇ ತಾನೆ, ಅರ್ಧ ಸರಿಯಾಗಿ ಉಳಿಸಿಕೊಡೋಣ ಅಂತಿದ್ದೆ."

"ಹಾಗೊ! ಸರಿ ಹಾಗಾದರೆ" ಎಂದು ಗೌರಿ ನಕ್ಕು ಸುಮ್ಮನೆ ಕುಳಿತಳು. ಉಳಿದರ್ಧ ಹಾಲನ್ನು ಕುಡಿದಾದ ಮೇಲೆ ಗೌರಿ ಎಲೆ ಅಡಕೆ ತಟ್ಟೆಯನ್ನು ತಂದು, ಹಾಸಿಗೆಯ ಮೇಲೆ ಗಂಡನ ಪಕ್ಕದಲ್ಲಿ ಕುಳಿತುಕೊಂಡಳು. ಎಂಟು ಎಲೆಗೆ ಸುಣ್ಣ ಹಚ್ಚಿ ಮಡಿಸಿಟ್ಟುಕೊಂಡು, ಗಂಡನ ಕೈಗೆ ಬಣ್ಣ ಹಚ್ಚಿದ ಅಡಕೆ ಹಾಕಿದಳು; ತಾನೂ ಸ್ವಲ್ಪ ಬಾಯಿಗೆ ಹಾಕಿಕೊಂಡಳು. ಗಂಡನಿಗೊಂದು, ತಾನೊಂದು, ಗಂಡನಿಗೊಂದು ತಾನೊಂದು ಹೀಗೆ ಎಂಟು ಎಲೆಗಳನ್ನೂ ಸೇವಿಸಿದ್ದಾದ ಮೇಲೆ ರಾಮಸ್ವಾಮಿ ಗೌರಿಯ ತುಟಿ ನೋಡಿದ; ಗೌರಿ ಗಂಡನ ತುಟಿ ಹೇಗಾಗಿದೆಯೊ ಎಂದು ನೋಡಿದಳು. ಇಬ್ಬರ ತುಟಿಗಳೂ ಒಂದಾದುವು.

"ಗೌರಿ ನನ್ನನ್ನು ಕ್ಷಮಿಸಿದೀಯಾ?" ರಾಮಸ್ವಾಮಿ ತಡೆಯಲಾರದೆ ಕೇಳಿದ.

"ನೀವು ನನ್ನನ್ನು ಕ್ಷಮಿಸಿದೀರಾ?" ಗೌರಿ ಗಂಡನ ತೋಳನ್ನು ಬಿಡಿಸಿಕೊಳ್ಳುತ್ತ ಕೇಳಿದಳು.

"ನೀನೇನು ಮಾಡಿದಿ?"

"ನೀವೇನು ಮಾಡಿದಿರಿ?"

"ನಾನು ದೊಡ್ಡ ತಪ್ಪುಮಾಡಿದೇನೆ"

"ಅದೇನದು ಅಂಥ ದೊಡ್ಡ ತಪ್ಪು?"

"ನಿನ್ನಂಥ ಹೆಂಡತಿಯನ್ನು ಮೂರು ವರುಷ ನೋಡದೆ ದೂರ ಇದ್ದುದು."

ಗೌರಿಯ ಕಣ್ಣುತುಂಬ ಕಂಬನಿ ತುಂಬಿತು. ಅವಳಿಗೆ ಏನೇನೋ ನೆನಪಾಯಿತು. ತಡೆಯಲಾಗಲಿಲ್ಲ. ಅಳುತ್ತ "ಅಯ್ಯೊ, ನೀವು ಹಾಗೆಲ್ಲ ಹೇಳಬೇಡಿ. ನನಗೆ ಅಳು ಬರುತ್ತೆ. ಆದದ್ದಾಯಿತು. ಈಗ ಎಲ್ಲ ಮರೆಯೋಣ"ಎಂದು ಗಂಡನ ಎರಡು ಕೈಗಳನ್ನೂ ಹಿಡಿದುಕೊಂಡಳು.

ರಾಮಸ್ವಾಮಿಗೆ ಏಕೆ ಹಾಗೆಂದೆನೊ, ಎನ್ನಿಸಿತು. "ಗೌರಿ, ಸಂಪೂರ್ಣವಾಗಿ ಮರೆತುಬಿಡೋಣ, ಎಂದೆಂದಿಗೂ ಮರೆತುಬಿಡೋಣ" ಎಂದು ಅವಳನ್ನಪ್ಪಿಕೊಂಡ.

* * * *

ಬೆಳಗಾಯಿತು.

ರಾಮಸ್ವಾಮಿಗೆ ಎಚ್ಚರವಾದಾಗ ಗೌರಿ ಹಾಸಿಗೆಯ ಮೇಲಿರಲಿಲ್ಲ. ಗಂಡಹೆಂಡಿರಿಬ್ಬರಲ್ಲೂ ವಿಚಿತ್ರ ಬದಲಾವಣೆ ಆಗಿತ್ತು. ಇಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಂಡಿದ್ದರು. ಇಬ್ಬರ ಮಧ್ಯದಲ್ಲಿದ್ದ ಅಂತರ ಮಾಯವಾಗಿತ್ತು; ಇಬ್ಬರ ದೇಹ ಒಂದಾಗಿತ್ತು.

ಗೌರಿ ಅಷ್ಟು ಹೊತ್ತಿಗೇ ಎದ್ದು ಹೊರಟುಹೋಗಿದ್ದಳು. ರಾಮಸ್ವಾಮಿ ಎದುರಿಗೆ ಕಾಣುತ್ತಿದ್ದ ರಾಧಾ-ಕೃಷ್ಣ ಚಿತ್ರಪಟಕ್ಕೆ ನಮಸ್ಕಾರ ಮಾಡಿ ಎದ್ದು ಗಡಿಯಾರ ನೋಡಿದ. ಗೂಡಿನಲ್ಲಿದ್ದ ಗಡಿಯಾರ ಏಳು ಗಂಟೆ ತೋರಿಸುತ್ತಿತ್ತು.

ಕೋಣೆಗೆ ಎರಡು ಬಾಗಿಲು : ಒಳಗೆ ಪಡಸಾಲೆಯಿಂದ ಪ್ರವೇಶಿಸಲು ಒಂದು, ಹೊರಗೆ ವೆರಾಂಡಾದಿಂದ ಪ್ರವೇಶಿಸಲು ಒಂದು. ಗೌರಿ ವೆರಾಂಡಾದ ಬಾಗಿಲನ್ನು ತೆಗೆದುಕೊಂಡು ಹೋಗಿದ್ದಳು. ಆದ್ದರಿಂದಲೇ ಆ ಬಾಗಿಲು ಸುಮ್ಮನೆ ಮುಂದಕ್ಕೆ ಮಾಡಿತ್ತು, ರಾಮುಸ್ವಾಮಿ ಅದನ್ನು ತೆರೆದುಕೊಂಡು ಹೊರಗೆ ಬಂದ. ವೆರಾಂಡಾದಲ್ಲಿ ಯಾರೂ ಇರಲಿಲ್ಲ. ಎರಡು ಕುರ್ಚಿಗಳೂ ಖಾಲಿಯಾಗಿದ್ದುವು. ರಾಮುಸ್ವಾಮಿ ಬಂದು ಒಂದರ ಮೇಲೆ ಸುಮ್ಮನೆ ಕುಳಿತುಕೊಂಡ. ಪಡಸಾಲೆಯ ಬಾಗಿಲು ಇನ್ನೂ ಮುಂದಕ್ಕೆ ಹಾಕಿದ್ದುದರಿಂದ, ಪಡಸಾಲೆಯಲ್ಲಿ ಮಲಗಿರುವವರು ಇನ್ನೂ ಎದ್ದಿಲ್ಲ, ಎಂದುಕೊಂಡ. ಸ್ವಲ್ಪ ಹೊತ್ತಿನಲ್ಲಿಯೇ ಗೌರಿ ಪಡಸಾಲೆಯ ಬಾಗಿಲು ಮುಂದಕ್ಕೆ ಮಾಡಿಕೊಂಡು ಪ್ರವೇಶಿಸಿದಳು. ಎದುರಿಗೆ ಕುರ್ಚಿಯ ಮೇಲೆ ಗಂಡ ಕುಳಿತಿದ್ದ. ಗಂಡ ಎದ್ದಿದಾರೊ ಏನೊ, ಎಂದು ನೋಡಲು ಅವಳು ಆಗಲೆ ಎರಡು ಬಾರಿ ಬಂದಿದ್ದಳು. ಈ ಬಾರಿಯೂ ಅವಳು ನೇರವಾಗಿ ಕೋಣೆಗೆ ಹೋಗುವುದರಲ್ಲಿದ್ದಳು. ಆದರೆ ಎದುರಿಗೆ ಕುಳಿತಿದ್ದ ಗಂಡನನ್ನು ನೋಡಿ, ಕಾಲಿನ ಲಗಾಮು ಎಳೆದಳು. ಮುಖ ನೋಡಿದಾಗ ಏಕೊ ನಾಚಿಕೆಯಾಯಿತು. ಕಿರುನಗೆ ನಕ್ಕು ತಲೆ ತಗ್ಗಿಸಿಕೊಂಡಳು.

"ಈಗ ಎದ್ದಿರಾ ?"

"ಹ್ಞು, ಸ್ವಲ್ಪ ಹೊತ್ತಾಯ್ತು"

"ಏಳಿ, ನೀರು ಕಾದಿದೆ ಸ್ನಾನಕ್ಕೆ"

"ಸ್ನಾನಾನೇ ಮಾಡಿಬಿಡೋದೂಂತೀಯ ?"

"ನೀರು ಕಾದಿದೆ"

"ಸರಿ" ಎಂದು ರಾಮುಸ್ವಾಮಿ ಎದ್ದು ಬಚ್ಚಲ ಮನೆಯ ಕಡೆಗೆ ಹೊರಟ. ಪಡಸಾಲೆಯಲ್ಲಿ ಶಂಕರು, ಶಂಕರು ತಮ್ಮಂದಿರು ಇನ್ನೂ ಮಲಗಿದ್ದರು.

ಗೌರಿ ಒಗೆದ ಒಂದು ಟವಲು, ಪಂಚೆ ತೆಗೆದುಕೊಂಡು ಗಂಡನ ಹಿಂದೆಯೇ ಹೋದಳು. ಹಲ್ಲುಪುಡಿ, ಸೋಪು ಎಲ್ಲ ಮುಂದಿಟ್ಟು

ಹದವಾಗಿ ನೀರು ತೋಡಿಕೊಟ್ಟಳು. ತಾನು ಬಚ್ಚಲು ಮನೆ ಬಿಟ್ಟು ಹೊರಡುವುದಕ್ಕೆ ಮುಂಚೆ,

"ನಾ ಹೊರಡ್ತೀನಿ. ಇನ್ನೇನು ಬೇಕು ?" ಎಂದು ಕೇಳಿದಳು.

ರಾಮಸ್ವಾಮಿ "ಏನೂ ಬೇಡ" ಎಂದು ಹೆಂಡತಿಯ ಮುಖ ನೋಡಿದ. ಗೌರಿಯ ತುಟಿ ನಗುತ್ತಿತ್ತು;

ಗಂಡ ಸ್ನಾನಮಾಡಿಕೊಂಡು ಬರುವುದನ್ನೇ ಕಾಯುತ್ತ ಪಡಸಾಲೆಯಲ್ಲಿ ನಿಂತಿದ್ದಳು. ಅಲ್ಲಿ ಆಗ ಯಾರೂ ಇರಲಿಲ್ಲ. ಶಂಕರು ಮತ್ತು ಅವನ ತಮ್ಮಂದಿರು ಎದ್ದು ಒಳಗೆ ಕಾಫಿ ಸಮಾರಾಧನೆಯಲ್ಲಿ ಸೇರಿದ್ದರು.

ರಾಮಸ್ವಾಮಿ ಸ್ನಾನ ಮುಗಿಸಿಕೊಂಡು, ತನ್ನ ತಂದೆಯಿದ್ದ ಕೋಣೆಯ ಕಡೆ ಹೊರಡುವುದರಲ್ಲಿದ್ದ. ಗೌರಿ ತಡೆದಳು. ಹಿಂದಿನ ದಿನದಿಂದ ತಮ್ಮಿಬ್ಬರದಾಗಿದ್ದ ಆ ಕೋಣೆಗೆ ಹೋಗಬೇಕೆಂದು ಸೂಚನೆ ಮಾಡಿದಳು. ಅವಳ ಸೂಚನೆಯಂತೆ ರಾಮಸ್ವಾಮಿ ಅಲ್ಲಿಗೆ ಹೋದ. ಗೌರಿ ಹಿಂದೆ ಬಂದಳು.

"ಯಾಕೆ ಇಲ್ಲಿಗೆ ಹೋಗು ಅಂದೆ ?"

"ಯಾಕೂ ಇಲ್ಲ, ಇಲ್ಲೇ ತಿಂಡಿ ಕಾಫಿ ತಂದುಕೊಡೋಣಾಂತ"

"ಬೇಡಬೇಡ, ಅಲ್ಲಿಗೇ ಹೋಗ್ತೀನಿ; ನಮ್ಮ ತಂದೆ ಏನಾದರೂ ಅಂದುಕೊಂಡಾರು. ಅವರು ಎದ್ದಿಲ್ಲವೆ ?"

"ಎದ್ದಿದಾರೆ"

"ಅವರದು ಕಾಫಿ ತಿಂಡಿ ಆಗಿಲ್ಲವೆ ?"

"ಆಯ್ತು, ಸ್ನಾನ ಜಪ ಕಾಫಿ ತಿಂಡಿ ಎಲ್ಲ ಆಯ್ತು"

"ಓ"

"ಅದಕ್ಕೇ ನಾನು ಹೇಳಿದ್ದು, ನಿಮಗೆ ಇಲ್ಲೇ ತಂದುಕೊಡ್ತೀನೀಂತ"

"ಸರಿ, ಹಾಗಾದರೆ. ತೊಗೊಂಡ್ಬಾ"

ಗೌರಿ ಒಳಗೆ ಹೋದಳು.

ರಾಮಸ್ವಾಮಿ ಅಲ್ಲಿಯೆ ಗೂಡಿನಲ್ಲಿಟ್ಟಿದ್ದ ಎಣ್ಣೆ ಬಾಚಣಿಗೆ ತೆಗೆದುಕೊಂಡು ಗೋಡೆಗೆ ಹಾಕಿದ್ದ ದೊಡ್ಡ ಕನ್ನಡಿಯ ಮುಂದೆ ನಿಂತು ತಲೆ

ಬಾಚಿಕೊಂಡ. ಅವನ ಶೃಂಗಾರ ಮುಗಿಯುವ ಹೊತ್ತಿಗೆ ಗೌರಿ ಒಂದು ಬೆಳ್ಳಿ ತಟ್ಟೆಯಲ್ಲಿ ಉಪ್ಪಿಟ್ಟು, ಒಂದು ಬೆಳ್ಳಿ ಲೋಟದ ತುಂಬ ನೀರು ತೆಗೆದುಕೊಂಡು ಬಂದಳು.

ಅಲ್ಲಿಯೇ ಇದ್ದ ಸೋಫಾದ ಮೇಲೆ ರಾಮಸ್ವಾಮಿ ಕುಳಿತುಕೊಂಡ. ಗೌರಿ ಸೋಫಾದ ಪಕ್ಕದಲ್ಲಿದ್ದ ಪುಟ್ಟ ಸ್ಟೂಲಿನ ಮೇಲೆ ಉಪ್ಪಿಟ್ಟಿನ ತಟ್ಟೆ, ನೀರು ಇಟ್ಟಳು.

"ಉಪ್ಪಿಟ್ಟು ತಿನ್ತಾ ಇರಿ. ಬರ್ತೀನಿ" ಎಂದು ಹೊರಡಲು ಅಪ್ಪಣೆ ಬೇಡಿದಳು. ರಾಮಸ್ವಾಮಿ ಸ್ಟೂಲನ್ನು ಮುಂದಕ್ಕೆಳೆದುಕೊಂಡು, "ಬೇಡ ಬಾ, ಇಲ್ಲಿ ಕೂತ್ಕೊ" ಎಂದು ಸೋಫಾ ತೋರಿಸಿದ; ಗೌರಿ "ಬರ್ತೀನಿ, ಕಾಫಿ ತಂದ್ಬಿಡ್ತೀನಿ" ಎಂದು ಹೊರಟಳು.

ಬಹಳ ಬೇಗ ಕಾಫಿಯೊಡನೆ ಬಂದುಬಿಟ್ಟಳು. ಕಾಫಿಯ ಬಟ್ಟಲನ್ನು ಸ್ಟೂಲಿನ ಮೇಲಿಟ್ಟು ಸುಮ್ಮನೆ ನಿಂತುಕೊಂಡಳು. ರಾಮಸ್ವಾಮಿ ತಲೆಯೆತ್ತಿ ಅವಳ ಮುಖ ನೋಡಿದ. ಗೌರಿಯೂ ಗಂಡನ ಮುಖ ನೋಡಿದಳು.

ಗಂಡ "ಕೂತ್ಕೊ" ಎಂದು ಪುನಃ ಸೋಫಾ ತೋರಿಸಿದ.

ಆ ಅಪ್ಪಣೆಗಾಗಿ ಕಾದಿದ್ದ ಗೌರಿ ಸೋಫಾದ ಮೇಲೆ, ಗಂಡನ ಪಕ್ಕದಲ್ಲಿ ಕುಳಿತುಕೊಂಡಳು.

ಅವಳೊಡನೆ ಏನು ಮಾತಾಡಬೇಕೊ ಅವನಿಗೆ ತೋರಲಿಲ್ಲ.

ಗೌರಿಯೂ ಏನು ಮಾತಾಡಬೇಕೊ ತಿಳಿಯದೆ ಸುಮ್ಮನೆ ಕುಳಿತಿದ್ದಳು.

ಗಂಡ ಮಾತು ಮೊದಲುಮಾಡಬಹುದೆಂದು ಹೆಂಡತಿ ಕಾದಿದ್ದಳು. ಹೆಂಡತಿ ಮೊದಲು ಮಾತಾಡಬಹುದೆಂದು ಗಂಡ ಕಾದಿದ್ದ. ಹೀಗೆ ಒಂದೆರಡು ನಿಮಿಷ ಮೌನವಾಗಿ ಕಳೆಯಿತು. ಗೌರಿ ತಲೆಯೆತ್ತಿ ಉಪ್ಪಿಟ್ಟಿನ ತಟ್ಟೆ ನೋಡಿದಳು. ಆಗಲೆ ಅರ್ಧ ಮುಗಿದಿತ್ತು. ಮಾತಾಡದೆ ಸುಮ್ಮನೆ ಕುಳಿತುಕೊಂಡಿರಲು ಅವಳು ಅಲ್ಲಿಗೆ ಬಂದಿರಲಿಲ್ಲ. ಎಷ್ಟು ಹೊತ್ತಾದರೂ ಗಂಡ ಮಾತಾಡಿಸಲಿಲ್ಲ. ಆದ್ದರಿಂದ ಧೈರ್ಯಮಾಡಿಕೊಂಡು ತಾನೇ ಮಾತಿಗೆ ಮೊದಲುಮಾಡಿದಳು.

"ಉಪ್ಪಿಟ್ಟು ಚೆನ್ನಾಗಿದೆಯಾ ?"

"ಚೆನ್ನಾಗಿದೆ; ನೀನು ಇನ್ನೂ ತೊಗೊಂಡಿಲ್ವಾ?"

"ಇಲ್ಲ"

"ಯಾಕೆ ?"

"ನೀವು ತೊಗೊಂಡಾದ ಮೇಲೆ ತೊಗೊಳ್ಳೋಣಾಂತ ಕಾದಿದ್ದೆ".

"ಓ, ಹಾಗಾದರೆ ಕೊಂಚ ರುಚಿ ನೋಡು" ಎಂದು ರಾಮಸ್ವಾಮಿ ಸ್ವಲ್ಪ ಉಪ್ಪಿಟ್ಟು ತೆಗೆದು ಗೌರಿಯ ಬಾಯಿಗೆ ಇಡಲು ಹೋದ. ಅವಳಿಗೆ ಅದು ಬೇಕಾಗಿತ್ತು, ಸಂತೋಷದಿಂದ ಸ್ವೀಕರಿಸಿದಳು. ಸರಾಗವಾಗಿ ಮಾತಾಡಲು ಅಡ್ಡಿಯಾಗಿದ್ದ ಸಂಕೋಚವನ್ನೂ ಉಪ್ಪಿಟ್ಟಿನೊಡನೆ ನುಂಗಿ ಕೊಂಡಳು. ತುಟಿ ಏನೋ ಹೇಳುವುದರಲ್ಲಿತ್ತು. ಆದರೆ ಹೊರಗೆ ಯಾರೋ 'ಗೌರಾ' ಎಂದು ಕೂಗಿದರು.

ಗೌರಿ ಎದ್ದು ಹೊರಡಬೇಕಾಯಿತು.

* * * * *

ಮಧ್ಯಾಹ್ನ ಊಟವಾದ ಮೇಲೆ ರಾಮಸ್ವಾಮಿ ತನ್ನ ತಂದೆಯ ವರಿದ್ದ ಕೋಣೆಗೆ ಹೋಗದೆ ವೆರಾಂಡಾಕ್ಕೆ ಬಂದು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ. ಗೌರಿ ಇದಕ್ಕಾಗಿ ಕಾಯುತ್ತಿದ್ದಳು. ಗಂಡ ಅಲ್ಲಿಗೆ ಹೋದ ಕೂಡಲೆ ಒಳಗಿನಿಂದ ಅಡಕೆಲೆ ತಟ್ಟೆಯನ್ನು ಹಿಡಿದು ತಮ್ಮ ಕೋಣೆಯನ್ನು ಪ್ರವೇಶಿಸಿದಳು. ರಾಮಸ್ವಾಮಿ ಸುಮ್ಮನೆ ಕುಳಿತಿದ್ದ. ಗೌರಿ ಕೋಣೆಯ ಬಾಗಿಲೊಳಗೆ ಅಡಕೆಲೆ ತಟ್ಟೆ ಹಿಡಿದು ಸುಮ್ಮನೆ ನಿಂತಿದ್ದಳು. ಈ ಸೂಚನೆ ರಾಮಸ್ವಾಮಿಗೆ ಗೊತ್ತಾಯಿತು. ಎದ್ದು ಕೋಣೆಯೊಳಕ್ಕೆ ಹೋಗಿ ಸೋಫಾದ ಮೇಲೆ ಕುಳಿತುಕೊಂಡ. ಗೌರಿ ಬಾಗಿಲನ್ನು ಮುಂದಕ್ಕೆ ಮಾಡಿಕೊಂಡು ಬಂದು ಸೋಫಾದ ಮೇಲೆ ಗಂಡನ ಪಕ್ಕದಲ್ಲಿ ಕುಳಿತುಕೊಂಡಳು. ಗಂಡನ ಕೈಗೆ ಅಡಕೆ ಹಾಕಿ ಎಲೆಗೆ ಸುಣ್ಣ ಹಚ್ಚುತ್ತ,

"ತುಂಬ ಮಾತಾಡ್ಬೇಕು ಅನ್ಸಿದೆ" ಎಂದಳು.

"ಏನು ಮಾತು ?"

"ಏನೂ ಇಲ್ಲ. ಸುಮ್ಮನೆ ಮಾತಾಡೋಣ ಅನ್ನಿಸಿದೆ"

"ವಿಚಿತ್ರ, ಏನು ಹೇಳಬೇಕು ಹೇಳು."

"ಸುಮ್ಮನೆ ಕೂತಿರೋದರ ಬದಲು ಅದು ಇದು ಮಾತಾಡೋಣಾಂತ"

"ಆಡು"

"ನಿಮಗೆ ಇಷ್ಟ ಇಲ್ಲವೆ?"

"ಇದೆ"

"ನಾನಾಗಿ ನಾನು ಮಾತಾಡಿದರೆ ನೀವೇನಂದುಕೊಳ್ತೀರೋಂತ...."

"ನನಗೆ ಇಷ್ಟ ಇಲ್ಲದಿದ್ದರೆ ನಿನ್ನೇನೇ ಹೇಳಿಬಿಡ್ತಿದ್ದೆ."

"ಸರಿ. ಹಾಗಾದರೆ, ಸಂತೋಷ—ಎಲೆಗೆ ಸುಣ್ಣ ಜಾಸ್ತೀನ?"

"ಇಲ್ಲ. ಸರಿಯಾಗಿದೆ."

"ನಾನು ಒಂದು ವಿಷಯ ಕೇಳಬಹುದಾ?"

"ಏನು ಕೇಳು, ಅದಕ್ಕೇನು, ಆಗಲೆ ಹೇಳಲಿಲ್ಲವೆ?"

"ನಿಮ್ಮ ಪರೀಕ್ಷೆ ಹೇಗಿತ್ತು?"

"ಚೆನ್ನಾಗಿತ್ತು"

"ಹೇಗೆ ಮಾಡಿದೀರಿ?"

"ಚೆನ್ನಾಗಿ ಮಾಡಿದೀನಿ. ಪಾಸಾಗುತ್ತೆ"

"ತುಂಬ ಸಂತೋಷ. ಹಾಗಾದರೆ ಯಾವಾಗ?"

"ಏನು?"

"ಕಾಫಿತಿಂಡಿ"

"ಅದಕ್ಕೇನು, ಮಾಡ್ಕೊಂಡು ದಿನಾ ತಿನ್ನು" ಎಂದು ರಾಮಸ್ವಾಮಿ ನಕ್ಕ.

ಗೌರಿ ನಗುತ್ತ "ಈ ಮನೇಲೊ, ನಮ್ಮನೇಲೊ?" ಎಂದು ಬುದ್ಧಿವಂತಿಕೆಯ ಪ್ರಶ್ನೆ ಹಾಕಿದಳು. ಉತ್ತರ ಹೇಳಲು ರಾಮಸ್ವಾಮಿ ಸ್ವಲ್ಪ ತಡವರಿಸಿದ. ಆದರೆ ಉತ್ತರ ಸರಿಯಾಗಿಯೇ ಬಂತು :

"ನಮ್ಮನೇಲಿ"

"ಯಾವತ್ತು ?"

"ಯಾವತ್ತೂಂದರೆ !—ಇನ್ನೂ ರಿಸಲ್ಟ್ಸೇ ಬಂದಿಲ್ಲವಲ್ಲ ? ರಿಸಲ್ಟ್ ಬಂದಮೇಲೆ ಫಾಸೊ ಫೇಲೋ ತಿಳಿಯುತ್ತೆ ; ಕೆಲಸ ಆಗುತ್ತೆ; ಜೇಬು ತುಂಬ ಸಂಬಳ ಬರುತ್ತೆ. ಅವತ್ತು ನೀನು ಅಡಿಗೇ ಮನೇಲಿ ಕೂತ್ಕೊಂಡು ತಿಂಡಿ ಮಾಡು, ಇಬ್ಬರೂ ತಿನ್ನೋಣ."

"ಹಾಗಾದರೆ ನಾನು ಅದಕ್ಕೆ ಇನ್ನೂ ಎಷ್ಟು ದಿನ ಕಾಯ್ಬೇಕೊ?"

"ಮುಂದಿನ ತಿಂಗಳು ರಿಸಲ್ಟ್ ಬರೋದು. ರಿಸಲ್ಟ್ ತಿಳಿದ ಕೂಡಲೆ ಎಲ್ಲಾದರೂ ಕೆಲಸ ಸಿಕ್ಕೇಸಿಕ್ಕುತ್ತೆ. ಆದ್ದರಿಂದ ಒಂದು ತಿಂಗಳಾದರೂ ಕಾಯಲೇಬೇಕು ನೀನು"

"ಅಬ್ಬ ! ಒಂದು ತಿಂಗಳು ಕಾಯಬೇಕೆ ?"

"ಮೂರು ವರುಷ ಕಳೆದೋಳಿಗೆ ಒಂದು ತಿಂಗಳು ಏನು ಮಹಾ!"

"ಇಲ್ಲ, ಆಗ ಈ ಅನುಭವ ಆಗಿರಲಿಲ್ಲ. ಈಗ ಕಳೆಯೋದು ಕಷ್ಟ. ಒಂದು ತಿಂಗಳು ಕಳೆಯೋದು ಆ ಮೂರು ವರುಷಕ್ಕಿಂತ ಬಹಳ ಕಷ್ಟ."

* * * * *

ಎರಡು ದಿನದ ಶಾಸ್ತ್ರ ಮುಗಿಯಿತು. ರಂಗಣ್ಣನವರು ಊಹಿಸಿದ್ದಂತೆಯೇ ಶಾಮಣ್ಣನವರು, ಶುಕ್ರವಾರ ಹೊರಡಕೂಡದೆಂದು ತಡೆದರು. ಆದ್ದರಿಂದ ಶುಕ್ರವಾರವೂ ಗೌರಿಯೊಡನೆ ಕಳೆಯುವ ಸದವಕಾಶ ರಾಮುಸ್ವಾಮಿಗೆ ದೊರೆತಿತ್ತು. ಶನಿವಾರ ಬೆಳಗ್ಗೆ ಹತ್ತೂವರೆ ಗಂಟೆ ರೈಲಿನಲ್ಲೇ ವಾಪಸು ಊರಿಗೆ ಹೊರಡುವುದೆಂದು ಗೊತ್ತಾಯಿತು.

ಶಾಮಣ್ಣನವರು ರಂಗಣ್ಣನವರೊಡನೆ ಮಗಳನ್ನು ಕಳಿಸುವ ವಿಷಯದಲ್ಲಿ ಮಾತುಕತೆ ನಡಸಿದ್ದರು. ರಂಗಣ್ಣನವರು ರಾಮುಸ್ವಾಮಿ ಗೌರಿಗೆ ಹೇಳಿದ ವಿಷಯವನ್ನೇ ಹೇಳಿದ್ದರು. ಶಾಮಣ್ಣನವರು "ಸರಿ, ಹಾಗೇ ಆಗಲಿ" ಎಂದು ಒಪ್ಪಿಕೊಂಡಿದ್ದರು.

ನಂಜಮ್ಮನವರು ಶನಿವಾರ ಬೆಳಗ್ಗೆ ಎಂಟು ಗಂಟೆಗೇ ಅನ್ನ, ಸಾರು, ಹುರುಳೀಕಾಯಿ ಪಲ್ಯ, ಹೆಸರುಬೇಳೆ ಕೋಸಂಬರಿ, ಪಾಯಸ, ತೊವ್ವೆ, ಮಜ್ಜಿಗೆ ಹುಳಿ, ಬಿಸಿಬೇಳೆ ಹುಳಿಯನ್ನ ಮಾಡಿದ್ದರು. ಹಿಂದಿನ

ದಿನ ಮಧ್ಯಾಹ್ನ, ಚಕ್ಕುಲಿ, ಕೋಡುಬಳೆ, ರವೆಉಂಡೆ ತಯಾರಿಸಿ ಬೀಗರಿಗಾಗಿ ಒಂದು ಬುಟ್ಟಿಯಲ್ಲಿ ತುಂಬಿಟ್ಟಿದ್ದರು. ಅಳಿಯ ಮತ್ತು ಬೀಗರ ಜೊತೆಯಲ್ಲಿ ಶಾಮಣ್ಣನವರೂ ಊಟಕ್ಕೆ ಕುಳಿತುಕೊಂಡರು. ರಾಮಸ್ವಾಮಿಯ ಪಕ್ಕದಲ್ಲಿ ಗೌರಿಗೂ ಎಲೆ ಹಾಕಿತ್ತು. ಊಟವಾದ ಮೇಲೆ, ಗೌರಿ ಗಂಡನನ್ನು ಕೋಣೆಗೆ ಕರೆದು ಎಲೆ ಅಡಕೆ ಕೊಟ್ಟಳು. ಅಲ್ಲಿಯೆ ಮಂಚದ ಮೇಲೆ ಸುತ್ತಿಟ್ಟಿದ್ದ ಎರಡು ಹೊಸ ಹಾಸಿಗೆಗಳ ಪೈಕಿ ಒಂದಕ್ಕೆ ಆಗಲೆ ಹಗ್ಗ ಕಟ್ಟಿ ಸಿದ್ಧಪಡಿಸಿತ್ತು. ಒಂದು ಜೊತೆ ಹೊಸ ಚಾಪೆಯನ್ನು ಸುತ್ತಿ ದಾರ ಕಟ್ಟಿ ಹಾಸಿಗೆಯ ಮಗ್ಗುಲಲ್ಲಿ ಇಟ್ಟಿತ್ತು.

ಗೌರಿ ಗಂಡನಿಗೆ ಎಲೆ ಅಡಕೆ ಕೊಟ್ಟು, ಗೋಡೆಯನ್ನೊರಗಿಕೊಂಡು ತಲೆ ತಗ್ಗಿಸಿ ಸುಮ್ಮನೆ ನಿಂತಿದ್ದಳು. ರಾಮಸ್ವಾಮಿ ಅವಳ ಕಾಲುಂಗುರ ನೋಡಿದ. ತಕ್ಷಣವೆ ಒಂದು ಹನಿ ಕಣ್ಣೀರು ಅವಳ ಕಾಲಿನ ಹತ್ತಿರ ಟಪ್ಪನೆ ಬಿತ್ತು. ಗಂಡನನ್ನಗಲಲಾರದೆ ಹೃದಯ ಪರಿತಪಿಸುತ್ತಿತ್ತು; ಮೂರು ದಿನದ ಬೆಸುಗೆ ಹಾಗೆ ಮಾಡಿತ್ತು.

ರಾಮಸ್ವಾಮಿ "ಯಾಕೆ ಗೌರಿ?" ಎಂದು ಅವಳ ಮುಂಗುರುಳು ನೇವರಿಸಿದ.

ಗೌರಿಗೆ ದುಃಖ ಇನ್ನೂ ಹೆಚ್ಚಾಯಿತು; ರಾಮಸ್ವಾಮಿ ಅವಳ ಮುಖವನ್ನೆತ್ತಿ ನೋಡಿದ; ಮುಖ ಕೆಂಪಾಗಿತ್ತು, ಕಣ್ಣು ತುಂಬ ಕಂಬನಿ ತುಂಬಿತ್ತು.

"ಯಾಕೆ ಅಳ್ತೀಯೆ, ಅಳಬಾರದು, ಇನ್ನೊಂದು ತಿಂಗಳು ಅಷ್ಟೆ. ಬೇಗ ಕಳೆದ್ಹೋಗುತ್ತೆ."

"ಬೇಗ ಕಳಸ್ತೀರ?"

"ನಾನೇನು ಕಳಸೋದು. ಅದೇ ಕಳೆದುಹೋಗುತ್ತೆ ಬೇಗ."

"ನೀವು ಮನಸ್ಸು ಮಾಡಬೇಕಲ್ಲ?"

"ನಾನು ಮನಸ್ಸು ಮಾಡಿಬಿಟ್ಟಿದೀನಿ, ರಿಸಲ್ಟ್ ಬಂದ ಕೂಡಲೆ ಕಾಗದ ಹಾಕ್ತೀನಿ. ನಮ್ಮ ತಂದೇನೂ ನಿಮ್ಮ ತಂದೆಗೆ ಎಲ್ಲ ಹೇಳಿದಾರಂತೆ."

"ಸರಿ ಹಾಗಾದರೆ ಕಾಯ್ತಾ ಇರ್ತೀನಿ, ಆದರೆ ಬಹಳ ಕಷ್ಟ, ಈ ಕಾಯೋದು ?"

"ಹೌದು. ಏನು ಮಾಡೋದು ಹೇಳು. ಇನ್ನು ಹೊತ್ತಾಗುತ್ತೆ, ಕೂಗ್ತಾರೆ ಹೊರಡೋಣ. ನಾನು ಬರಲಾ ?" ಎಂದು ಹಾಸಿಗೆಯ ಕಡೆ ತಿರುಗಿದ.

ಗೌರಿ "ಸ್ವಲ್ಪ ಈ ಕಡೆ" ಎಂದು ಮುಖ ಮುಚ್ಚಿಕೊಂಡು ಗೋಡೆಯ ಕಡೆ ತಿರುಗಿಕೊಂಡಳು. ರಾಮುಸ್ವಾಮಿಗೆ ಅರ್ಥವಾಯಿತು.

ನಾಲ್ಕು ತುಟಿ ಒಂದಾದುವು.

"ಈ ರುಚಿ ಒಂದು ತಿಂಗಳು ಹಾಗೇ ಇರಬೇಕು" ಎಂದ ರಾಮುಸ್ವಾಮಿ ಗೌರಿಯ ತೋಳಿನಿಂದ ಬಿಡಿಸಿಕೊಳ್ಳುತ್ತ.

ಗೌರಿ "ತಿಂಗಳ ವರೆಗೆ ಇಟ್ಟುಕೊಂಡಿರೋಕೆ ಒಂದು ಸಾಕಾಗೊಲ್ಲ ವಲ್ಲ!" ಎಂದು ತಲೆಯೆತ್ತಿ ನೋಡಿದಳು. ತೋಳುಬಂದಿ ಹಾಗೆಯೇ ಇತ್ತು. ಹವಳದ ತುಟಿಗೆ ಮತ್ತೆ ಒಂದು, ಎರಡು, ಮೂರು, ನಾಲ್ಕು—ನಾಲ್ಕು ಮುತ್ತು ಬಿತ್ತು.

ರಾಮುಸ್ವಾಮಿ "ಸಾಲದೆ ?" ಎಂದ.

ಗೌರಿ "ಸಾಕು" ಎಂದು ಕೈ ಬಿಡಿಸಿಕೊಂಡಳು.

ಮಾವನವರಿಗೆ ಹೇಳಿ, ತಂದೆಯೊಡನೆ ಮನೆ ಬಿಡುವ ಹೊತ್ತಿಗೆ ಒಂಬತ್ತೂ ಮುಕ್ಕಾಲು ಗಂಟೆಯಾಗಿತ್ತು. ಹೊರಗೆ ಜಟಕಾ ಗಾಡಿ ನಿಂತಿತ್ತು. ಗಾಡಿಯ ಸಾಬಿ ರಾಮುಸ್ವಾಮಿಯ ಹೊಸ ಹಾಸಿಗೆ, ಚಾಪೆ, ತಿಂಡಿ ಬುಟ್ಟಿ, ಟ್ರಂಕು, ಹಳೆಯ ಹಾಸಿಗೆ ಎಲ್ಲ ಗಾಡಿಯಲ್ಲಿಡುತ್ತಿದ್ದ. ರಂಗಣ್ಣನವರು "ಹೊತ್ತಾಯ್ತು, ಹೊತ್ತಾಯ್ತು" ಎಂದು ಅವಸರಿಸುತ್ತಿದ್ದರು.

ಇಬ್ಬರೂ ಗಾಡಿಯ ಹತ್ತಿರ ನಿಂತಿದ್ದಾಗ ಶಾಮಣ್ಣನವರು ರಂಗಣ್ಣನವರನ್ನು ಕುರಿತು "ಹೋದ ಕೂಡಲೆ ಕಾಗದ ಹಾಕಿ" ಎಂದು ಅಳಿಯನ ಮುಖವನ್ನು ನೋಡಿದರು. ರಾಮುಸ್ವಾಮಿ "ಆಗಲಿ. ಬರೀತೀನಿ"

ಎಂದು ಗಾಡಿಯ ಹತ್ತಿರ ಹೋದ. ರಂಗಣ್ಣನವರೂ "ಆಗಲಿ, ಬರ್ತೀವಿ" ಎಂದು ಗಾಡಿ ಹತ್ತಿದರು.

ರಾಮಸ್ವಾಮಿ ಮಾವನವರ ಮನೆಯ ಕಡೆ ನೋಡಿದ. ವೆರಾಂಡಾದಲ್ಲಿದ್ದ ನಂಜಮ್ಮನವರು, ಹೇಮಾವತಿ, ಗೌರಿ ಗೇಟಿನ ಹತ್ತಿರಕ್ಕೆ ಬಂದು ನಿಂತಿದ್ದರು. ಗೌರಿ ಹೇಮಾವತಿಯ ಹಿಂದೆ ನಿಂತುಕೊಂಡು ಬಾಗಿ ನೋಡುತ್ತಿದ್ದಳು. ರಾಮಸ್ವಾಮಿ ಅವಳ ಕಡೆ ನೋಡಿದ. ಹೇಮಾವತಿಯ ಭುಜದ ಹತ್ತಿರ ಗೌರಿಯ ಮುಖ ಕಾಣಿಸಿತು. ಅವಳ ಕಣ್ಣು ಗಾಡಿಯ ಹಿಂದೆಯೇ ಇತ್ತು. ಗಂಡ ನೋಡಿದ ಕೂಡಲೇ ಆ ಮುಖ ಮರೆಯಾಯಿತು. ಮಗ ಗಾಡಿ ಹತ್ತಿದ ಮೇಲೆ ರಂಗಣ್ಣನವರು "ಹ್ಞು ಹೊಡಿಯಪ್ಪ" ಎಂದರು.

ಗಾಡಿಯ ಹತ್ತಿರದಲ್ಲಿಯೇ ನಿಂತಿದ್ದ ಶಾಮಣ್ಣನವರು "ಸ್ವಲ್ಪ ತಡಿಯಪ್ಪ, ನಾನು ಇನ್ನೂ ಹತ್ತಿಲ್ಲ" ಎಂದರು. ರಂಗಣ್ಣನವರು "ನೀವ್ಯಾಕೆ ಬರ್ತೀರಿ, ಪಾಪ; ಸುಮ್ಮನೆ ಶ್ರಮ ಆಗುತ್ತೆ" ಎಂದರು. ಆದರೆ ಶಾಮಣ್ಣನವರು "ಏನು ಮಹಾ ಶ್ರಮ. ಪರವಾಯಿಲ್ಲ" ಎಂದು ಗಾಡಿ ಹತ್ತಿದರು. ಗಾಡಿ ಹೊರಟಿತು.

ಆಗಲೆ ಹೊತ್ತಾಗಿದ್ದುದರಿಂದ ಗಾಡಿ ಬಹಳ ವೇಗವಾಗಿ ಓಡಿತು. ಕೇವಲ ಹತ್ತು ನಿಮಿಷಗಳಲ್ಲಿಯೆ ರೈಲು ನಿಲ್ದಾಣ ಸಿಕ್ಕಿತು. ರಾಮಸ್ವಾಮಿ ಬೇಡ ಎಂದರೂ ಶಾಮಣ್ಣನವರೇ ಗಾಡಿಯ ಬಾಡಿಗೆ ಕೊಟ್ಟರು. ಕೂಲಿಯವನು ಸಾಮಾನುಗಳನ್ನು ನಿಲ್ದಾಣದೊಳಕ್ಕೆ ತಂದಿರಿಸಿದ. ಇನ್ನೂ ರೈಲು ಬಂದಿರಲಿಲ್ಲ. ಟಿಕೀಟು ತೆಗೆದುಕೊಳ್ಳುವುದಕ್ಕಾಗಿ ರಂಗಣ್ಣನವರು ಇನ್ನೂ ದುಡ್ಡು ಎಣಿಸುತ್ತಿರುವಾಗಲೇ ಶಾಮಣ್ಣನವರು ಯಾವ ಮಾಯದಲ್ಲೋ ಸ್ಟೇಷನ್‌ಮಾಸ್ಟರ ಹತ್ತಿರ ಹೋಗಿ ಹಾಸನಕ್ಕೆ ಎರಡು ಟಿಕೀಟು ತಂದುಬಿಟ್ಟಿದ್ದರು. ಅವರ ಕೈಯಲ್ಲಿದ್ದ ಟಿಕೀಟು ನೋಡಿ ರಂಗಣ್ಣನವರು "ಛೆ ಛೆ, ನೀವ್ಯಾಕೆ ತೊಗೊಂಡಿರಿ? ನಾನು ತೊಗೋತಾ ಇದ್ದೆ." ಎಂದರು. ಶಾಮಣ್ಣನವರು "ಯಾರು ತೊಗೊಂಡರೆ ಏನು ಈಗ, ಪರವಾಯಿಲ್ಲ" ಎಂದು ಟಿಕೀಟುಗಳನ್ನು ಅಳಿಯನ ಕೈಯಲ್ಲಿಟ್ಟರು.

ಹತ್ತೂ ಇಪ್ಪತ್ತೆಂಟಕ್ಕೆ ಸರಿಯಾಗಿ ರೈಲು ಬಂದು ನಿಂತುಕೊಂಡಿತು. ರಂಗಣ್ಣನವರು ಮೊದಲು ಗಾಡಿ ಹತ್ತಿದರು. ಮಾವ ಅಳಿಯ ಸಾಮಾನು ಕೊಟ್ಟರು. ರಂಗಣ್ಣನವರು ಎಲ್ಲ ಒಳಗೆ ತೆಗೆದುಕೊಂಡ ಮೇಲೆ ರಾಮಸ್ವಾಮಿ ಗಾಡಿ ಹತ್ತಿ ಬಾಗಿಲಲ್ಲಿ ನಿಂತುಕೊಂಡ. ಶಾಮಣ್ಣನವರು "ಎಲ್ಲ ಸಾಮಾನೂ ಬಂತೊ?" ಎಂದು ಕೇಳಿದರು. ರಾಮಸ್ವಾಮಿ "ಬಂತು" ಎಂದು ಮತ್ತೊಮ್ಮೆ ಸಾಮಾನುಗಳನ್ನು ನೋಡಿಕೊಂಡ.

ಶಾಮಣ್ಣನವರು ಪುನಃ "ಹೋದಕೂಡಲೆ ಕಾಗದ ಹಾಕಿ, ವಾರಕ್ಕೊಂದಾದರೂ ಕಾಗದ ಬರೀತಾ ಇರಿ" ಎಂದರು.

ರಾಮಸ್ವಾಮಿ "ಆಗಲಿ" ಎಂದ.

ಗಾರ್ಡ್ ಸೀಟಿ ಊದಿ, ಹಸುರು ಬಾವುಟ ಆಡಿಸಿದ.

ರೈಲು 'ಕೂ' ಎಂದು ಹೊರಟಿತು.

ರಂಗಣ್ಣನವರು ಕುಳಿತಲ್ಲಿಯೇ ಕೈಯೆತ್ತಿ, "ಬರ್ತೀವಿ" ಎಂದರು.

ರಾಮಸ್ವಾಮಿ "ಬರ್ತೀವಿ ನಮಸ್ಕಾರ" ಎಂದ.

## ೪

ಹೊಳೆನರಸೀಪುರಕ್ಕೆ ಹೋಗಿಬಂದ ಮೇಲೆ, ರಾಮಸ್ವಾಮಿ ಗೌರಿ ಹೊಂದಿಕೊಂಡುದು ನೋಡಿ ರಂಗಣ್ಣನವರ ಮನಸ್ಸಿಗೆ ಸಮಾಧಾನವುಂಟಾಗಿತ್ತು. ಈ ಬಾರಿ ಶಾಮಣ್ಣನವರು ಎಲ್ಲ ಚೆನ್ನಾಗಿ ಏರ್ಪಡಿಸಿದ್ದರು; ಒಂದೂ ಕಡಮೆ ಮಾಡಲಿಲ್ಲ. ತಮಗೆ ತುಂಬ ಸಂತೋಷವಾಯಿತು. ಹೆಂಡತಿ ವಿರೋಧಿಸಿದರೂ ತಾವು ಬಲವಂತವಾಗಿ ಮಾಡಿದ ಸಂಬಂಧ ನೆಟ್ಟಗಾಯಿತು; ಸದ್ಯ, ಹಳಸಿಕೊಳ್ಳಲಿಲ್ಲ. ಮಕ್ಕಳು ಮರಿ ಪ್ರಶ್ನೆ ಈಗೇಕೆ. ನನಗೆಷ್ಟು ಮಕ್ಕಳು ಮಹಾ! ಆಗಿದ್ದೇ ಒಂದು. ದೇವರ ದಯೆಯಿಂದ ಇಷ್ಟೆಲ್ಲ ಅನುಭವಿಸುವ ಅವಕಾಶ ದೊರೆಯಿತು. ಮುಂದೆ ನೋಡಿಕೊಳ್ಳೋಣ. ಜನ ಒಳ್ಳೆಯವರು ಪರವಾಯಿಲ್ಲ, ಎಂದುಕೊಂಡರು. ಊರಿಂದ ಬಂದ ರಾತ್ರಿ ಮಾತಾಡುತ್ತಿದ್ದಾಗ ರಾಮಸ್ವಾಮಿಯೂ 'ಪರವಾಯಿಲ್ಲ' ಎಂದು ನೆಮ್ಮದಿಯನ್ನು ಸೂಚಿಸಿದ್ದ.

ಒಂದು ಸಾವಿರ ರೂಪಾಯಿ, ಮೂರು ದಿನದ ಸತ್ಕಾರ ರಂಗಣ್ಣನವರನ್ನು ಚೆನ್ನಾಗಿಯೇ ಬದಲಾಯಿಸಿಬಿಟ್ಟಿದ್ದುವು. ಅವರು ಊರಿಗೆ ಬಂದ ಮಾರನೆಯ ದಿನವೇ ಸಂತೋಷವನ್ನು ವ್ಯಕ್ತಪಡಿಸಿ ಬೀಗರಿಗೆ ಕಾಗದ ಬರೆದರು. ರಾಮಸ್ವಾಮಿಯೂ ಒಂದು ಕವರು ಕೊಂಡುಕೊಂಡು ಮಾವನವರಿಗೆ ಕಾಗದ ಬರೆದ; ಹೆಂಡತಿಗೂ ಒಂದು ಕಾಗದ ಬರೆದು ಆ ಕವರಿನಲ್ಲಿಡಬೇಕೆನ್ನಿಸಿತು. ಬಹಳ ಹೊತ್ತು ಆ ಬಗ್ಗೆ ಆಲೋಚಿಸಿದ. "ಛೆ, ಎಂಥ ಕೆಲಸ ಮಾಡಿದೆ. ಅವಳನ್ನು ಒಂದು ಮಾತು ಕೇಳಬಾರದಾಗಿತ್ತೆ? 'ನಿನಗೆ ಕಾಗದ ಬರೆದರೆ ಓದಲು ಬರುತ್ತದೆಯೆ?' ಎಂದು ಅವಳನ್ನು ಕೇಳಿದ್ದರೆ ಚೆನ್ನಾಗಿತ್ತು" ಎಂದುಕೊಂಡ. ಅವಳು ಕನ್ನಡ ಎರಡನೆಯ ತರಗತಿಯ ವರೆಗೆ ಮಾತ್ರ ಓದಿದ್ದಾಳೆ; ಮೂರು ವರುಷದಿಂದ ಒಂದು ಕಾಗದವನ್ನೂ ಅವಳು ಬರೆದಿಲ್ಲ; ಆದ್ದರಿಂದ ಅವಳಿಗೆ ಕಾಗದ ಬರೆಯಲು ಬರುವುದಿಲ್ಲ, ಎಂದುಕೊಂಡಿದ್ದ ಅವನಿಗೆ ಅವಳನ್ನು ಆ ವಿಷಯವಾಗಿ ಕೇಳಬೇಕೆಂದು ಹೊಳೆಯಲಿಲ್ಲ. ಗುಂಡಗೆ ವಿರಳ ವಿರಳವಾಗಿ ಬರೆದರೆ ಓದಿಕೊಳ್ಳಲು ಆಗುವುದಿಲ್ಲವೆ? ಉತ್ತರ ಬರೆಯಲು ಆಗದಿದ್ದರೂ ಹಾಸನದ ಕ್ಷೇಮಸಮಾಚಾರವನ್ನು ಓದಿ ಅರ್ಥ ಮಾಡಿಕೊಳ್ಳಬಹುದು; ಆದ್ದರಿಂದ ನಾನೇಕೆ ಬರೆಯಬಾರದು, ಎಂದು ಈಗ ಅನ್ನಿಸಿತು; ಬಹಳ ಹೊತ್ತು ಹಾಗೂ ಹೀಗೂ ಯೋಚಿಸಿ, ಏನಾದರೂ ಆಗಲಿ ಒಂದು ಕಾಗದ ಬರೆಯೋಣ ಎಂದು ನಿರ್ಧರಿಸಿಕೊಂಡ. ಪುಟ್ಟ ಕಾಗದ ಬರೆದು ಮಡಿಸಿ ಅಂಟಿಸಿ, ಹೆಸರು ಬರೆದು, ಆ ಕವರಿನಲ್ಲೇ ಇಟ್ಟು ಹಾಕಿದ.

ಎರಡು ದಿನಗಳನಂತರ ಹೊಳೆನರಸೀಪುರದಿಂದ ಒಂದು ಕವರು ಬಂತು. ಮಾವನವರದು ಎಂದುಕೊಂಡು ರಾಮಸ್ವಾಮಿ ಅದನ್ನು ಒಡೆದು ಕಾಗದವನ್ನು ಕೈಗೆ ತೆಗೆದುಕೊಂಡ. ಆಶ್ಚರ್ಯವಾಯಿತು. ಅದನ್ನು ಗೌರಿ ಬರೆದಿದ್ದಳು. ಅದರ ಜೊತೆಯಲ್ಲಿ ಮಾವನವರ ಕಾಗದವಿರಲಿಲ್ಲ. ಅಕ್ಷರ ಬಹಳ ಚೆನ್ನಾಗಿತ್ತು. ಗೌರಿಯ ಕಾಗದದಲ್ಲಿ ತಪ್ಪುಗಳೇ ಇರಲಿಲ್ಲ. ವಿಷಯವೂ ರಸವತ್ತಾಗಿತ್ತು. ಕಣ್ಣೆದುರಿಗೆ ಕಾಗದ ಇದ್ದರೂ ರಾಮಸ್ವಾಮಿಗೆ ನಂಬಿಕೆ ಬರಲಿಲ್ಲ. ಇನ್ನಾರ ಕೈಯಲ್ಲಾದರೂ ಬರಸಿ

ದ್ದಾಳೊ ಏನೊ! ಎನ್ನಿಸಿತು. ಆದರೆ ಇಂಥ ಕಾಗದವನ್ನು ಬೇರೆಯು ವರ ಕೈಯಲ್ಲಿ ಹೇಗೆ ಬರಸುತ್ತಾಳೆ; ಛೆ ಅವಳೇ ಬರೆದಿರಬಹುದು; ಆದರೆ ಅಕ್ಷರ ಎರಡನೆಯ ತರಗತಿಯವರು ಬರೆದ ಹಾಗಿಲ್ಲವಲ್ಲ! ಎಂದುಕೊಂಡ. ಆಮೇಲೆ ವಾರಕ್ಕೆರಡು ಬಾರಿ ಹಾಸನ ಹೊಳೆನರಸೀಪುರಗಳ ನಡುವೆ ಕವರು ಓಡಾಡಿತು.

ಬೀಗರ ಕಾಗದವನ್ನು ನಿರೀಕ್ಷಿಸುತ್ತಿದ್ದ ರಂಗಣ್ಣನವರು "ಯಾರದೋ ಕಾಗದ?" ಎಂದು ಕೇಳಿದರು. ರಾಮುಸ್ವಾಮಿ "ಊರಿಂದು" ಎಂದ. ರಂಗಣ್ಣನವರು "ಊರಿಂದು ಅಂದರೆ ಯಾರದು?" ಎಂದು ಮತ್ತೆ ಕೇಳಿ ದರು. ರಾಮುಸ್ವಾಮಿ "ನಮ್ಮ ಮಾವನೋರದಲ್ಲ" ಎಂದು ಉತ್ತರಕೊಟ್ಟು ನಕ್ಕ. ರಂಗಣ್ಣನವರಿಗೆ ಅರ್ಥವಾಯಿತು. "ಸರಿ ಕಣಪ್ಪ. ಓದುಬರಹ ಬರೊಲ್ಲ, ಒಂದು ಕಾಗದ ಕೂಡ ಬರೆಯೋಕೆ ಬರೊಲ್ಲ ಅಂದುಬಿಟ್ಟರು?" ಎಂದು ಸೊಸೆಯನ್ನು ಪ್ರಶಂಸಿಸಿದರು.

ಗೌರಿ ಓದುಬರೆಹ ಚೆನ್ನಾಗಿ ಕಲಿತಿದ್ದಳು. ಆ ಮೂರು ವರುಷದಲ್ಲಿ ಮನೆಯಲ್ಲೇ ಓದಿ ಎಲ್. ಎಸ್. ಪಾಸು ಮಾಡಿದ್ದಳು, ಹಿಂದಿ ಮಾಧ್ಯಮಿಕ ಮಾಡಿಕೊಂಡಿದ್ದಳು. ಕಾಗದ ಬರೆಯುವುದನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದಳು.

"ಹುಡುಗಿ ಓದಿಲ್ಲ, ಆದ್ದರಿಂದ ಹುಡುಗನಿಗೆ ಅವಳನ್ನು ಕಂಡರೆ ಅಷ್ಟಕ್ಕಷ್ಟೆ" ಎಂದು ಯಾರೋ ಅಂದದ್ದು ಶಾಮಣ್ಣನವರಿಗೆ ಕೇಳಿಸಿತ್ತು. ಹಾಸನಕ್ಕೆ ಹೋಗಿ ಬಂದ ಪಕ್ಕದ ಮನೆಯ ವಿಶಾಲಾಕ್ಷಮ್ಮನವರು ಇನ್ನೊಂದು ಸುದ್ದಿ ಹರಡಿಬಿಟ್ಟಿದ್ದರು. ರಾಮುಸ್ವಾಮಿಗೆ ಇಷ್ಟವಿರಲಿಲ್ಲ ವಂತೆ, ತಂದೆಯ ಬಲವಂತದಿಂದ ಮದುವೆ ಆಯಿತಂತೆ, ಅವನು ಹೆಂಡತಿ ಯನ್ನು ಬಿಟ್ಟುಬಿಡುತ್ತಾನಂತೆ, ಎಂದು ಅವರು ಯಾರೆದುರಿಗೋ ಹೇಳಿದ ಮಾತು ಶಾಮಣ್ಣನವರ ಕಿವಿಯ ವರೆಗೂ ಬಂದಿತ್ತು. "ಏನಾದರೂ ಆಗಲಿ, ಹುಡುಗಿ ಓದಲಿ" ಎಂದುಕೊಂಡು ಶಾಮಣ್ಣನವರು ಒಬ್ಬ ಮೇಡಂ ಗೊತ್ತುಮಾಡಿ ಓದಿಸತೊಡಗಿದರು. ಕೇವಲ ಒಂದು ವರುಷದಲ್ಲಿಯೇ ಗೌರಿ ಎಲ್. ಎಸ್. ಪಾಸು ಮಾಡಿದಳು. ಆಮೇಲೆ ಶಾಮಣ್ಣನವರು

ಹೈಸ್ಕೂಲಿಗೆ ಸೇರಿಸಿಬಿಡೋಣ, ಎಂದರು. ಆದರೆ ನಂಜಮ್ಮನವರ ಬಲವಂತ ದಿಂದ ಅವರು ಸುಮ್ಮನಿರಬೇಕಾಯಿತು. "ಈ ವಿಷಯ ಹಾಸನಕ್ಕೆ ತಿಳಿದರೆ ಗತಿಯೇನು? ಬೇಡಿ ನಿಮ್ಮ ದಮ್ಮಯ್ಯ" ಎಂದು ನಂಜಮ್ಮ ನವರು ತಡೆದರು. ಮನೆಯಲ್ಲೇ ಒಬ್ಬ ಹಿಂದಿ ಮೇಷ್ಟರನ್ನು ಗೊತ್ತುಮಾಡಿ ಇಬ್ಬರು ಮಕ್ಕಳಿಗೂ ಹಿಂದಿ ಹೇಳಿಸತೊಡಗಿದರು. ಶಾಮಣ್ಣನವರು "ಸಂಗೀತ, ಹೊಲಿಗೆ ಆದರೂ ಚೆನ್ನಾಗಿ ಕಲಿತುಕೊಂಡಿರಲಿ, ಮುಂದೆ ಉಪಯೋಗವಾದೀತು" ಎಂದಾಗ ನಂಜಮ್ಮನವರು "ಅದೂ ಬೇಡ, ಸ್ವಲ್ಪ ತಡೀರಿ" ಎಂದರು. ಆದರೆ ಶಾಮಣ್ಣನವರು "ಬೇಡ ನಿಂಗೊತ್ತಿಲ್ಲ" ಎಂದು ಬಲವಂತದಿಂದ, ಹಾಡಿನ ಸೀತಮ್ಮನವರನ್ನು 'ಇಬ್ಬರು ಮಕ್ಕಳಿಗೂ ಬೆಳಗ್ಗೆ ಸಂಗೀತ, ಮಧ್ಯಾಹ್ನ ಹೊಲಿಗೆ ಹೇಳಿಕೊಡಿ' ಎಂದು ಗೊತ್ತು ಮಾಡಿದರು. ರಾಮಸ್ವಾಮಿಗೆ ಇದೆಲ್ಲ ಹೇಗೆ ತಿಳಿಯಬೇಕು! ಗೌರಿಯ ಕಾಗದ ಅವನಿಗೆ ಆಶ್ಚರ್ಯವನ್ನುಂಟುಮಾಡಿತ್ತು.

ಹೊಳೆನರಸೀಪುರದಿಂದ ಹೋಗಿ ಸರಿಯಾಗಿ ಒಂದು ತಿಂಗಳಾಗಿತ್ತು. ಅಂದು ಗೌರಿಯ ಕಾಗದ ಬಂತು. ಗೌರಿ ಒಂದು ತಿಂಗಳ ಹಿಂದೆ ಹೊಳೆ ನರಸೀಪುರದಲ್ಲಿ ನಡೆದದ್ದನ್ನೆಲ್ಲ ಕುರಿತು ರಸರಸವಾಗಿ ಬರೆದಿದ್ದಳು. ಆ ಕಾಗದ ಓದುವಾಗ ರಾಮಸ್ವಾಮಿಗೆ ಹೇಗೆಹೇಗೋ ಆಯಿತು. ಗೌರಿ ಎದುರಿಗಿದ್ದಿದ್ದರೆ? ಎಂದುಕೊಂಡ. ಅವಳು ಕಾಗದದ ಕೊನೆಯಲ್ಲಿ "ರಿಸಲ್ಟ್ ಯಾವತ್ತು? ರಿಜಿಸ್ಟರ್ ನಂಬರ್ ಎಷ್ಟು? ತಿಂಡಿ ಕಾಫಿ ನಾನು ಎಂದು ಮಾಡೋದು?" ಎಂದು ಪ್ರಶ್ನೆ ಹಾಕಿದ್ದಳು. ರಾಮಸ್ವಾಮಿ ಆ ಕಾಗದಕ್ಕೆ ಸರಿಯಾದ ಉತ್ತರ ಬರೆಯಲು ಆಲೋಚಿಸುತ್ತಿದ್ದ.

ಮಧ್ಯಾಹ್ನ ಅಂಗಡಿ ಬೀದಿಗೆ ಹೋಗಿದ್ದಾಗ 'ತಾಯಿನಾಡು' ಪತ್ರಿಕೆ ನೋಡಿದ. "ಹದಿನಾರನೆಯ ತಾರೀಕು ವಿಶ್ವವಿದ್ಯಾನಿಲಯದ ಪರೀಕ್ಷೆಗಳ ಫಲಿತಾಂಶ ಹೊರಬೀಳುವುದು" ಎಂಬ ಪ್ರಕಟನೆ ಮೊದಲನೆ ಪುಟದ ಮಧ್ಯಭಾಗದಲ್ಲಿಯೇ ದಪ್ಪಕ್ಷರಗಳಲ್ಲಿ, ಗೀರಿನ ಚೌಕಟ್ಟಿನಲ್ಲಿ ಶೋಭಿಸುತ್ತಿತ್ತು. ಈ ಸಮಾಚಾರವನ್ನು ರಾಮಸ್ವಾಮಿ ತಂದೆಯವರಿಗೆ ತಿಳಿಸಿದ.

'ಇಬ್ಬರೂ ಅಗಲುವಾಗ ನಾನೊಂದು ಮರೆತೆ, ನೀನೊಂದು ಮರೆತೆ. ನಿನಗೆ ಈಗ ಓದುಬರೆಹ ಚೆನ್ನಾಗಿ ಬರುತ್ತಿದೆಯೆ, ಎಂಬುವನ್ನೇ ನಾನು ಕೇಳಿ ತಿಳಿದುಕೊಳ್ಳಲಿಲ್ಲ. ನನ್ನ ರಿಜಿಸ್ಟರ್ ನಂಬರ್ ಎಷ್ಟು ಎಂಬುದನ್ನು ನೀನು ಆ ದಿನ ಕೇಳಿ ತಿಳಿದುಕೊಳ್ಳಲಿಲ್ಲ. ಪರವಾಯಿಲ್ಲ. ಇನ್ನೂ ಎರಡು ದಿನ ಅವಕಾಶ ಇದೆ. ನನ್ನ ರಿಜಿಸ್ಟರ್ ನಂಬರ್ ಇನ್ನೂರಿಪ್ಪತ್ತು. ರಿಸಲ್ಟ್ ಹದಿನಾರನೆಯ ತಾರೀಕು ಬರುತ್ತದೆ. ಹದಿನೇಳನೆಯ ತಾರೀಕಿನ ಪತ್ರಿಕೆಯಲ್ಲಿ ನೀನು ನೋಡಬಹುದು. ಕಾಫಿತಿಂಡಿ ವಿಷಯ ಮುಂದಿನ ಕಾಗದದಲ್ಲಿ' ಎಂದು ತಕ್ಷಣವೇ ಹೆಂಡತಿಗೆ ಉತ್ತರ ಬರೆದು ಹಾಕಿದ; ಗೌರಿಯೂ ಹೊಳೆನರಸೀಪುರದಲ್ಲಿ ಆಗ ಅದೇ ಕೆಲಸ ಮಾಡಿದ್ದಳು.

ಮಾರನೆಯ ದಿನವೇ ಹೊಳೆನರಸೀಪುರದಿಂದ ಕಾಗದ ಬಂತು. "ಹದಿನಾರನೆಯ ತಾರೀಕು ರಿಸಲ್ಟಂತೆ. ಫಸ್ಟ್‌ಕ್ಲಾಸಿನಲ್ಲಿ ಪಾಸಾಗಲೀಂತ ಮುತ್ತೈದೆ ಹಾರೈಸುತ್ತಾಳೆ" ಎಂದು ಗೌರಿ ಬರೆದಿದ್ದಳು.

ಅವಳ ಹಾರೈಕೆ ನೆರವೇರಿತು. ಆದರೆ ಫಸ್ಟ್‌ಕ್ಲಾಸಿನಲ್ಲಿ ಆಗಲಿಲ್ಲ. ಇನ್ನೂರಿಪ್ಪತ್ತನೇ ರಿಜಿಸ್ಟರ್ ನಂಬರು ಪಾಸಾಗಿತ್ತು. ರಂಗಣ್ಣನವರಿಗೆ ರಾಮಸ್ವಾಮಿಗಿಂತ ಆನಂದವುಂಟಾಯಿತು. "ನನ್ನ ಶ್ರಮ ಸಾರ್ಥಕ ವಾಯ್ತಪ್ಪ" ಎಂದರು. ಹೊಳೆನರಸೀಪುರದ ಮನೆಯಲ್ಲಿಯೂ ಎಲ್ಲರಿಗೂ ಸಂತೋಷವಾಗಿತ್ತು. ಗೌರಿಗಂತೂ ತುಂಬ ಆನಂದ ತಕ್ಷಣವೆ ದೇವರಿಗೆ ತುಪ್ಪದ ದೀಪ ಹಚ್ಚಿಟ್ಟು ನಮಸ್ಕಾರ ಮಾಡಿ, ಹಾಸನಕ್ಕೆ ಒಂದು ಕಾಗದ ಬರೆದುಹಾಕಿದಳು.

ರಾಮಸ್ವಾಮಿ ರಿಸಲ್ಟ್ ನೋಡಿದ ದಿನವೇ ಗೌರಿಗೆ, ಮಾವನವರಿಗೆ, ಮಾಧವರಾಯರಿಗೆ, ರಂಗಸ್ವಾಮಿಗೆ ಒಂದೊಂದು ಕಾಗದ ಬರೆದ. ಗೌರಿ ಯಿಂದ, ಮಾವನವರಿಂದ ಸಂತೋಷವನ್ನು ಸೂಚಿಸಿ ಉತ್ತರ ಬಂತು. ಮಾಧವರಾಯರಿಗೆ ರಾಮಸ್ವಾಮಿ ದೀರ್ಘವಾದ ಕಾಗದ ಬರೆದಿದ್ದ. ಅವರು ಅದಕ್ಕೆ 'ಎರಡು ಸಮಾಚಾರಗಳನ್ನೂ ಕೇಳಿ ಬಹಳ ಸಂತೋಷ ಆಯಿತಪ್ಪ. ಖಂಡಿತ ಮರೀದೆ ಇಬ್ಬರೂ ಕಾನ್ವೊಕೇಷನ್‌ಗೆ ಬನ್ನಿ' ಎಂದು ಉತ್ತರ ಬರೆದರು. ರಂಗಸ್ವಾಮಿ ಏಕೊ ಕಾಗದ ಬರೆಯಲಿಲ್ಲ.

ರಿಸಲ್ಟ್ ಬಂದ ದಿನ ಮಧ್ಯಾಹ್ನವೆ ರಂಗಣ್ಣನವರು ಮಗನನ್ನು ಕೂಗಿದರು. ರಾಮಸ್ವಾಮಿ ಕೋಣೆಯಲ್ಲಿ ಏನೋ ಓದುತ್ತ ಕುಳಿತಿದ್ದ. ತಂದೆ ಕೂಡಲೆ "ಏನಣ್ಣಾ" ಎಂದು ಪಡಸಾಲೆಗೆ ಬಂದ. ರಂಗಣ್ಣನವರು "ಇವತ್ತೇ ಆ ಹೆಡ್‌ಮೇಷ್ಟರನ್ನ ನೋಡಿಕೊಂಡು ಬಾ. ಹೊಸಬರಾದರೂ ಬಹಳ ಒಳ್ಳೇವರಂತೆ ಅವರು. ಹಾಗೇ ನರಸಿಂಹಯ್ಯಂಗಾರ್ ಕೈಲಿ ಒಂದು ಕಾಗದ ತೊಗೊಂಡ್ಹೋಗಿ ಆ ಸೆಕ್ರೆಟರೀನ್ನೂ ನೋಡಿಕೊಂಡು ಬಾ. ಹೆಡ್‌ಮೇಷ್ಟ್ರು, ಸೆಕ್ರೆಟರಿ ಇಬ್ಬರೂ ಮನಸ್ಸು ಮಾಡಿದರೆ ಆಗುತ್ತೆ. ಇದ್ದ ಊರಿನಲ್ಲೇ ಸಿಕ್ಕಿದರೆ ಬಹಳ ಅನುಕೂಲ. ಹೋಗಿ ನೋಡು" ಎಂದು ಕೆಲಸದ ವಿಷಯ ಮಾತಾಡಿದರು. ರಾಮಸ್ವಾಮಿ "ಆಗಲಿ" ಎಂದ.

ಊರಿನ ಖಾಸಗಿ ಹೈಸ್ಕೂಲಿನಲ್ಲಿ ಖಾಲಿ ಇದ್ದ ಉಪಾಧ್ಯಾಯರ ಕೆಲಸಕ್ಕೆ ಅರ್ಜಿ ಬರೆದುಕೊಂಡು ಸಾಯಂಕಾಲವೇ ನರಸಿಂಹಯ್ಯಂಗಾರ್ ಮನೆಗೆ ಹೋದ. ಅಯ್ಯಂಗಾರರು ಮನೆಯಲ್ಲಿರಲಿಲ್ಲ. ಸ್ವಲ್ಪ ಹೊತ್ತು ಬಿಟ್ಟು ಪುನಃ ಹೋದ. ಅವರೆದುರಿಗೆ ಎಲ್ಲ ಹೇಳಿದ. ಅವರು "ಆಗಲಪ್ಪ, ನನ್ನ ಕೈಲಾದ ಸಹಾಯ ನಾನು ಮಾಡ್ತೇನೆ" ಎಂದು ಸೆಕ್ರೆಟರಿ ಮುದ್ದು ವೀರಪ್ಪನವರಿಗೆ ಒಂದು ಕಾಗದ ಬರೆದುಕೊಟ್ಟರು.

ಮಾರನೆಯ ದಿನ ಬೆಳಗ್ಗೆ ರಾಮಸ್ವಾಮಿ ಆ ಕಾಗದ ತೆಗೆದುಕೊಂಡು, ಮೊದಲು ಹೆಡ್‌ಮಾಸ್ಟರನ್ನು ನೋಡೋಣವೊ, ಸೆಕ್ರೆಟರಿಗಳನ್ನು ನೋಡೋಣವೊ ಎಂದು ಸ್ವಲ್ಪ ಹೊತ್ತು ಆಲೋಚಿಸಿದ; ಸೆಕ್ರೆಟರಿಗಳನ್ನೇ ಮೊದಲು ನೋಡೋದು ಎಂದು ನಿರ್ಧರಿಸಿದ. ಮುದ್ದು ವೀರಪ್ಪನವರು ಕಾಗದ ನೋಡಿ "ಅರ್ಜಿ ಎಲ್ಲಿ?" ಎಂದರು. ರಾಮಸ್ವಾಮಿ ಅರ್ಜಿಯನ್ನು ಒಪ್ಪಿಸಿದ. ಅವರು ಅದನ್ನು ಓದಿಕೊಂಡ ತಕ್ಷಣವೆ "ನಮಗೆ ಇಂಗ್ಲಿಷ್ ಹ್ಯಾಂಡ್ ಬೇಕಾಗಿರೋದು. ನಿಮ್ಮದು ಹಿಸ್ಟ್ರಿ, ಎಕನಾಮಿಕ್ಸ್, ಪಾಲಿಟಿಕ್ಸ್. ಆಪ್ಷನಲ್ ಇಂಗ್ಲಿಷ್ ಆಗಿದ್ದರೆ ತೊಗೋಬಹುದಾಗಿತ್ತು. ಏನು ಮಾಡೋಣ" ಎಂದು ಹೇಳಿದರು. ರಾಮಸ್ವಾಮಿ "ನೋಡಿ ಸಾರ್. ತಾವು ದೊಡ್ಡ ಮನಸ್ಸುಮಾಡಿ ಕೆಲಸ ಕೊಡಿಸಿಕೊಟ್ಟರೆ ತುಂಬ ಉಪಕಾರ ಆಗುತ್ತೆ; ನಮ್ಮ ತಂದೆಗೆ ಪೆನ್ಷನ್ ಆಗ್ಹೋಗಿದೆ.

ಆವರು ತುಂಬ ಮುದುಕರು. ಆದ್ದರಿಂದ ನನಗೆ, ಈ ಊರಲ್ಲೇ ಕೆಲಸ ಸಿಕ್ಕಿದರೆ ಬಹಳ ಅನುಕೂಲ" ಎಂದ. ಮುದ್ದುವೀರಪ್ಪನವರು "ಅದು ಸರಿ, ಆದರೆ ನಾನು ಏನೂ ಮಾಡೋಹಾಗಿಲ್ಲ. ಆಪ್ಷನಲ್ ಇಂಗ್ಲಿಷ್ ತೊಗೊಂಡು ಪಾಸ್ ಮಾಡಿರೋರು ಯಾರಾದರೂ ಅರ್ಜಿ ಹಾಕಿದರೆ ಅವರಿಗೆ ಕೊಡಲೇಬೇಕಾಗುತ್ತೆ. ಈಗ ಖಾಲಿ ಇರೋದು ಇಂಗ್ಲಿಷ್ ಟೀಚರ್ ಕೆಲಸ. ಆದ್ದರಿಂದ ನಾನು ಹ್ಯಾಗೆ ನಿಮ್ಮ ಅರ್ಜೀನ ರೆಕ ಮೆಂಡ್ ಮಾಡಲಿ ಹೇಳಿ" ಎಂದರು. ರಾಮಸ್ವಾಮಿ "ಸರಿ, ಸಾರ್." ಎಂದು ನಿಟ್ಟುಸಿರುಬಿಟ್ಟು ಹೊರಟ.

ದಾರಿಯಲ್ಲಿ, 'ಹೆಡ್‌ಮಾಸ್ಟರನ್ನೂ ಯಾಕೆ ನೋಡಬಾರದು ? ಅವರು ಏನು ಹೇಳುತ್ತಾರೋ ನೋಡೋಣ' ಎನ್ನಿಸಿತು. 'ಆಗಲಿ, ನೋಡೇ ಬಿಡೋಣ' ಎಂದುಕೊಂಡು ಟವನ್ನಿಗೆ ಹೋಗಿ ಅವರ ಮನೆಯ ಮುಂದೆ ನಿಂತು 'ಸಾರ್ ಸಾರ್' ಎಂದು ಮೂರು ನಾಲ್ಕು ಬಾರಿ ಕೂಗಿದ. ಹೆಡ್ ಮಾಸ್ಟರ ಮಗ ಹೊರಗೆ ಬಂದು "ಬನ್ನಿ, ಇದಾರೆ. ಬರ್ತಾರೆ ಕೂತು ಕೊಳ್ಳಿ" ಎಂದು ಕರೆದುಕೊಂಡು ಹೋಗಿ ಕೋಣೆಯಲ್ಲಿ ಕುರ್ಚಿಯ ಮೇಲೆ ಕೂಡಿಸಿದ. ಆಗತಾನೇ ಸ್ನಾನ ಮುಗಿಸಿಕೊಂಡು ಬಂದ ಹೆಡ್‌ಮಾಸ್ಟರ್ ನರಸಿಂಗರಾಯರು ಕೋಣೆಯನ್ನು ಪ್ರವೇಶಿಸಿದ ಕೂಡಲೆ ರಾಮಸ್ವಾಮಿ ಎದ್ದು ತುಂಬು ವಿನಯದಿಂದ "ನಮಸ್ಕಾರ ಸಾರ್" ಎಂದ. ನರಸಿಂಗರಾಯರು "ನಮಸ್ಕಾರ, ಕೂತುಕೊಳ್ಳಿ" ಎಂದು ಕೂಡಿಸಿ ತಾವೂ ಪಕ್ಕದ ಕುರ್ಚಿಯ ಮೇಲೆ ಕುಳಿತುಕೊಂಡರು. "ಏನು ಬಂದಿರಿ ?" ಎಂದು ಕೇಳಿದಾಗ ರಾಮಸ್ವಾಮಿ ಅರ್ಜಿಯನ್ನು ಮುಂದೆ ಇಟ್ಟ. ಅದನ್ನು ಓದಿಕೊಂಡ ತಕ್ಷಣವೆ ಮುದ್ದುವೀರಪ್ಪನವರಂತೆಯೆ ನರಸಿಂಗರಾಯರೂ "ನಮಗೆ ಬೇಕಾಗಿರೋದು ಇಂಗ್ಲಿಷ್ ಹ್ಯಾಂಡ್. ಹಿಸ್ಟ್ರಿ ಹ್ಯಾಂಡ್ ಬೇಕಾಗಿಲ್ಲ" ಎಂದರು. ಆದರೆ ಅವರ ಹಾಗೆ ಮುಂದೆ ಮಾತೂ ಆಡಲಿಲ್ಲ. ತಕ್ಷಣವೆ ಅರ್ಜಿಯನ್ನು ವಾಪಸು ರಾಮಸ್ವಾಮಿಯ ಕೈಗೆ ಕೊಟ್ಟರು. ಮುದ್ದುವೀರಪ್ಪನವರ ಮುಂದೆ ಹೇಳಿಕೊಂಡಂತೆಯೇ ತನ್ನ ಕಷ್ಟವನ್ನು ಇವರ ಮುಂದೆಯೂ ರಾಮಸ್ವಾಮಿ ಹೇಳಿಕೊಂಡ.

ಆದರೆ ನರಸಿಂಗರಾಯರು "ನಾನೇನು ಮಾಡಲಿ ಹೇಳಿ" ಎಂದು ಎದ್ದು ಬಿಟ್ಟರು. ರಾಮುಸ್ವಾಮಿ ಕೈಮುಗಿದು ಹೊರಗೆ ಬಂದುಬಿಟ್ಟ.

ಮನೆಗೆ ಬರುವ ಹೊತ್ತಿಗೆ ರಂಗಣ್ಣನವರು ಒಂದು ಅನ್ನ ಸೊಪ್ಪಿನ ಹುಳಿ ಮಾಡಿಟ್ಟುಕೊಂಡು ಮಗನಿಗಾಗಿ ಕಾಯುತ್ತಿದ್ದರು. ಮಗ ಮನೆಗೆ ಬಂದಾಗ ಸುಮಾರು ಒಂದು ಗಂಟೆಯ ಸಮಯ.

"ಇದೇನು ರಾಮಣ್ಣ, ಇಷ್ಟೊಂಹೊತ್ತು?"

"ಇಬ್ಬರನ್ನೂ ನೋಡಿಕೊಂಡು ಬರೋದು ಇಷ್ಟೊಂಹೊತ್ತಾಯ್ತು. ಆದರೂ ಪ್ರಯೋಜನವಾಗಲಿಲ್ಲ."

"ಯಾಕೆ?"

"ಅವರಿಗೆ ಹಿಸ್ಟ್ರಿ ಹ್ಯಾಂಡ್ ಬೇಡವಂತೆ"

"ಹಾಗಂದರೆ?"

"ಹಿಸ್ಟ್ರಿ ತೊಗೊಂಡು ಬಿ. ಎ. ಪಾಸ್ ಮಾಡಿರೋರು ಬೇಡವಂತೆ. ಇಂಗ್ಲಿಷ್ ತೊಗೊಂಡಿರೋರು ಬೇಕಂತೆ."

"ನೀನು ಇಂಗ್ಲಿಷ್ ತೊಗೊಂಡಿರಲಿಲ್ಲವೆ?"

"ಇಲ್ಲ"

"ಮತ್ತೆ ಎಲ್ಲ ಇಂಗ್ಲಿಷೇ, ಒಂದೆರಡು ಪುಸ್ತಕ ಮಾತ್ರ ಕನ್ನಡ ಅಂದಿದ್ದೀ?"

"ಹಾಗಲ್ಲ, ಇಂಗ್ಲಿಷ್ ಸಾಹಿತ್ಯಾನೇ ಬೇರೆ ಓದಿರಬೇಕಂತೆ. ನಾನು ಹಿಸ್ಟ್ರಿ, ಎಕನಾಮಿಕ್ಸ್, ಪಾಲಿಟಿಕ್ಸ್ ಓದಿದೀನಿ. ಅವರಿಗೆ ಅದರ ಬದಲು ಹಿಸ್ಟ್ರಿ ಎಕನಾಮಿಕ್ಸ್ ಇಂಗ್ಲಿಷ್ ಓದಿರೋ ಗ್ರಾಜುಯೆಟ್ ಬೇಕಂತೆ."

"ಹಾಗಾದರೆ, ಮೇಷ್ಟರ ಕೆಲಸಕ್ಕೆ ಈ ಬಿ. ಎ. ಪ್ರಯೋಜನವಿಲ್ಲ ವಂತೊ?"

"ಪ್ರಯೋಜನ ಇದೆ; ಇಲ್ಲದೆ ಏನು. ಸದ್ಯಕ್ಕೆ ಈ ಹೈಸ್ಕೂಲಿನಲ್ಲಿ ಪ್ರಯೋಜನ ಇಲ್ಲ, ಅಷ್ಟೆ."

"ನೋಡ್ದ್ಯಾ, ನಾನದಕ್ಕೇ ಆವಾಗ ಹೇಳಿದ್ದು. ಸರಿಯಾದ

ವಿಷಯ ತೊಗೊಂಡ್ ಓದಪ್ಪ, ಯಾವುಯಾವುದೋ ತೊಗೋಬೇಡಾಂತೆ. ಇಂಗ್ಲಿಷೇ ತೊಗೊಂಡಿದ್ರೆ, ಇಲ್ಲೇ ಕೆಲಸ ಸಿಕ್ತಿತ್ತೊ?"

"ನಾ ತೊಗೊಂಡಿರೋದೂ ಬಹಳ ಒಳ್ಳೆ ಸಬ್ಜಕ್ಟುಗಳೇ. ಈಗ ಈ ಊರಲ್ಲಿ ಕೆಲಸ ಸಿಕ್ಕದೇ ಇರಬಹುದು. ಆದರೆ ಬೇರೆ ಕಡೆ ಸಿಕ್ಕೇ ಸಿಕ್ಕುತ್ತೆ."

"ಏನೋಪ್ಪ. ಬೇರೆ ಕಡೆ ಸಿಕ್ಕಿದರೆ ಏನು ಪ್ರಯೋಜನ ಹೇಳು. ಸ್ವಂತ ಮನೆ ಬಾಗಿಲು ಇರೋವಾಗ ಇಲ್ಲೇ ಕೆಲಸಾನೂ ಸಿಕ್ಕಿದ್ದರೆ ತುಂಬ ಅನುಕೂಲ ಆಗ್ತಿತ್ತು. ತಾಲ್ಲೂಕು ಆಫೀಸಿನಲ್ಲಾದರೂ ವಿಚಾರಿಸಿ ನೋಡು. ಅಲ್ಲಿ ಯಾವುದಾದರೂ ಕೆಲಸ ಖಾಲಿ ಇದ್ದರೆ...."

"ನನಗೆ ಸರಿಯಾದ ಕೆಲಸ ಅಲ್ಲಿರೊಲ್ಲ"

"ಯಾಕಿರೊಲ್ಲ, ಇರಬಹುದು. ರೆವಿನ್ಯೂ ಇನ್‌ಸ್ಪೆಕ್ಟರ ಕೆಲಸ ಸಿಕ್ಕಿದರೆ ಒಳ್ಳೇದಲ್ಲವೆ....?"

ಹೊರಗೆ ಯಾರೋ ಬಂದಂತಾಯಿತು. ರಂಗಣ್ಣನವರು ಮಾತು ನಿಲ್ಲಿಸಿ, ಬೀದಿಯ ಬಾಗಿಲ ಕಡೆಗೆ ನೋಡಿದರು.

ಅಚ್ಚಂಭಟ್ಟರು "ನಮಸ್ಕಾರ" ಎಂದು ಪಡಸಾಲೆಯನ್ನು ಪ್ರವೇಶಿಸಿದರು.

ರಂಗಣ್ಣನವರೂ ರಾಮಸ್ವಾಮಿಯೂ "ನಮಸ್ಕಾರ ಬನ್ನಿ" ಎಂದರು. ರಾಮಸ್ವಾಮಿ ಅಲ್ಲಿಯೆ ಹಾಸಿದ್ದ ಚಾಪೆಯನ್ನು ಸರಿಮಾಡಿ "ಕೂತ್ಕೊಳ್ಳಿ" ಎಂದ. ಭಟ್ಟರು ಕುಳಿತುಕೊಂಡರು.

ರಂಗಣ್ಣನವರು "ಏನು ಅಪರೂಪ. ನಾವು ಹೊಳೆನರಸೀಪುರದಿಂದ ಬಂದಮೇಲೆ ಬರ್ತೀನಿ ಅಂತ ಹೇಳಿ ಹೋದಿರಿ" ಎಂದರು.

"ಹೌದು. ಆಗಲೇ ಇಲ್ಲ. ನೀವು ಊರಿಂದ ಬಂದು ಎಷ್ಟು ದಿನ ಆಯ್ತು?"

"ಒಂದು ತಿಂಗಳ ಮೇಲಾಯ್ತು."

"ಎಲ್ಲ ಸರಿಯಾಗಿ ನೆರವೇರ್‍ತೊ?"

"ಆಯಿತು. ಎಲ್ಲ ಚೆನ್ನಾಗಿ ಆಯ್ತು"

"ಆಮೇಲೆ ಇನ್ನೇನು ವಿಶೇಷ ?—ಅಯ್ಯೊ! ಅಂದ್ಹಾಗೆ ಮುಖ್ಯ ವಾದ್ದನ್ನೇ ಮರೆತಿದ್ದೆ. ನಿಂದೇನಾಯ್ತು ರಾಮಸ್ವಾಮಿ ?" ಎಂದು ರಾಮಸ್ವಾಮಿಯ ಕಡೆ ತಿರುಗಿ ಕೇಳಿದರು.

"ಪಾಸಾಯ್ತು" ಎಂದ ರಾಮಸ್ವಾಮಿ.

"ಭೇಷ್! ಮುಂದೇನು ಮಾಡ್ಬೇಕೊಂತ"

ಅದಕ್ಕೆ ರಂಗಣ್ಣನವರು "ಅದನ್ನೇ ಮಾತಾಡ್ತಾ ಇದ್ವು. ಏನಾದರೂ ಒಂದು ಕೆಲಸ ನೋಡ್ಬೇಕಲ್ಲ ಇನ್ನ. ಇಲ್ಲಿ ಖಾಸಗಿ ಹೈಸ್ಕೂಲ್ ನಲ್ಲಿ ಒಂದು ಮೇಸ್ಟರ ಕೆಲಸ ಖಾಲಿ ಇದೆ. ಅದಕ್ಕೆ ಪ್ರಯತ್ನ ಮಾಡಿದ್ದಾಯ್ತು. ಆದರೆ ಅದು ಸಿಕ್ಕೋಹಾಗಿಲ್ಲ," ಎಂದರು.

"ಯಾಕೆ ?" ಭಟ್ಟರು ಕುತೂಹಲದಿಂದ ಕೇಳಿದರು.

"ಅದೇನೊ, ಇವನು ಇಂಗ್ಲಿಷ್ ತೊಗೊಂಡಿರಲಿಲ್ಲವಂತೆ. ಇಂಗ್ಲಿಷ್ ತೊಗೊಂಡಿದ್ದೋರು ಅವರಿಗೆ ಬೇಕಂತೆ"

"ಯಾರು ಹೇಳಿದ್ದು ?"

"ಯಾರೇನು. ಆ ಸೆಕ್ರೆಟರಿ ಮುದ್ದುವೀರಪ್ಪನೇ ಹಾಗೆ ಹೇಳಿದ ನಂತೆ. ಆಮೇಲೆ ಹೆಡ್‌ಮಾಸ್ಟರನ್ನೂ ನೋಡಿದ್ದ. ಈಗತಾನೇ ಅಲ್ಲಿಂದ ಬಂದ. ಅವರೂ ಹಾಗೇ ಹೇಳಿದರಂತೆ."

"ಸರಿ, ಆದರೆ ಅವರಿಬ್ಬರಿಗೂ ಬೇಕಾದವರಿಂದ ಹೇಳಿಸಿದರೆ?"

"ಎಲ್ಲ ಆಯ್ತು. ನರಸಿಂಹಯ್ಯಂಗಾರ್ ಕೈಯಲ್ಲಿ ಒಂದು ಕಾಗದ ಬರಸಿಕೊಂಡು ಮುದ್ದುವೀರಪ್ಪನ್ನ ನೋಡಿದ್ದ. ಆದರೂ ಅದು ಆಗೋ ಹಾಗಿಲ್ಲವಂತೆ"

"ಸರಿ, ಹಾಗಾದರೆ"—ಎಂದು ಭಟ್ಟರು ಸ್ವಲ್ಪಹೊತ್ತು ಯೋಚಿಸಿ "ಗೌರ್ನಮೆಂಟ್ ಹೈಸ್ಕೂಲಿನಲ್ಲಿ ಖಾಲಿ ಇಲ್ಲವೊ ?" ಎಂದು ಕೇಳಿದರು.

ರಾಮಸ್ವಾಮಿ "ಇಲ್ಲ" ಎಂದ.

ಭಟ್ಟರಿಗೆ ಇನ್ನೊಂದು ವಿಷಯ ಹೊಳೆಯಿತು. ತಕ್ಷಣವೆ "ಆ್ಞ, ರಾಮಸ್ವಾಮಿ ಒಂದು ಕೆಲಸ ಮಾಡ್ತೀಯ ?" ಎಂದು ಕೇಳಿದರು.

ರಾಮಸ್ವಾಮಿ "ಏನು ?" ಎಂದ.

"ಅರಸೀಕೆರೇಲಿ ಹೊಸದಾಗಿ ಒಂದು ಹೈಸ್ಕೂಲ್ ಆಗಿದೆ. ಈ ವರುಷಾನೇ ಅದು ಷುರು ಅಂತ ನಮ್ಮ ಬಸಪ್ಪನೋರು ಹೇಳಿದರು. ನಾನು ಮೊನ್ನೆಯೆಲ್ಲ ಅಲ್ಲೇ ಇದ್ದೆ. ನೋಡಪ್ಪ, ನೀನು ಒಪ್ಪೋದಾದರೆ ಅಲ್ಲಿ ಮೇಸ್ಟರ ಕೆಲಸಕ್ಕೆ ಪ್ರಯತ್ನ ಮಾಡಬಹುದು. ಅದೂ ಇವತ್ತೇ ಬರೆದು ಹಾಕಿದರೆ ಕೆಲಸ ಗ್ಯಾರಂಟಿ. ನನ್ನ ಮಾತು ತೆಗೆದ್ಹಾಕೊಲ್ಲ ಅವರು. ಏನ್ಹೇಳ್ತೀಯೆ ಹೇಳು" ಎಂದರು ಪಂಡಿತರು.

ರಾಮುಸ್ವಾಮಿ ತಂದೆಯ ಮುಖ ನೋಡಿದ.

ರಂಗಣ್ಣನವರು "ಬಹಳ ದೂರ ಆಗಲಿಲ್ಲವೆ?" ಎಂದರು.

ಭಟ್ಟರು "ಏನು ಮಹಾದೂರ. ಒಂದೊಂದೂವರೆ ಗಂಟೆ ಪ್ರಯಾಣ. ಮೂವತ್ತು ಮೈಲಿ ಕೂಡ ಇಲ್ಲಪ್ಪ. ಅದೇನು ದೂರ?" ಎಂದರು.

"ಇಲ್ಲ. ಈ ಊರಲ್ಲೇ ಸಿಕ್ಕಿದರೆ ಅನುಕೂಲಾಂತ."

"ಅನುಕೂಲ ಸರಿ. ಆದರೆ ಸಿಕ್ಕಲಿಲ್ಲವಲ್ಲ?"

"ಪ್ರಯತ್ನ ಮಾಡೋದು. ನಾನೂ ಅದೇ ಹೇಳ್ತಿದ್ದೆ, ರಾಮಣ್ಣಂಗೆ. ಹೋಗಿ ತಾಲ್ಲೂಕು ಆಫೀಸಿನಲ್ಲಿ ವಿಚಾರಿಸು. ಯಾವುದಾದರೂ ಟೆಂಪರ್ವರಿ ಕೆಲಸ ಸಿಕ್ಕುತ್ತೇಂತ."

"ಅಲ್ಲೂ ಪ್ರಯತ್ನ ಮಾಡಲಿ, ಪರವಾಯಿಲ್ಲ. ಆದರೆ ಒಂದೇ ಕಡೆ ಪ್ರಯತ್ನ ಮಾಡೋದರ ಬದಲು ಐದಾರು ಕಡೆ ನೋಡಿದ್ದರೆ ಒಳ್ಳೇದಲ್ಲವೆ? ಒಂದೇ ಕಲ್ಲಿಗಿಂತ ಹತ್ತು ಕಲ್ಲು ಬೀರಿದರೆ ಒಂದಕ್ಕಾದರೂ ಫಲ ಬೀಳುತ್ತೆ."

"ಸರಿ, ಆದರೆ ನನ್ನ ಇಷ್ಟ, ಇದೇ ಊರಲ್ಲೇ ಯಾವುದಾದರೂ ನೋಡಲೀಂತ."

"ನೋಡಲಿ ನೋಡಲಿ. ಇಲ್ಲೇ ಸಿಕ್ಕಿದರೆ ಬಹಳ ಸಂತೋಷ. ಹೊಳೆನರಸೀಪುರಕ್ಕೂ ಒಂದು ಕಾಗದ ಬರೀಲಿ. ಅವರ ಮಾವನೋರು ಅಲ್ಲೂ ಪ್ರಯತ್ನಪಡಲಿ. ನಾನು ಅರಸೀಕೆರೆಗೆ ಇವತ್ತು ಒಂದು ಕಾಗದ ಹಾಕ್ತೀನಿ; ಎಲ್ಲಿ ಇರೋ ಅದೃಷ್ಟ ಇದೆಯೋ ಅಲ್ಲಿ ಸಿಕ್ಕುತ್ತೆ."

"ಸರಿ."

ಭಟ್ಟರು "ಏನು ರಾಮಸ್ವಾಮಿ, ನಿನ್ನ ಅಭಿಪ್ರಾಯ ಏನು?" ಎಂದು ಕೇಳಿದರು.

ಅದಕ್ಕೆ ಅವನು "ಸರಿ, ನೀವು ಹೇಳೋದು" ಎಂದ.

"ಆಮೇಲೆ ಆ ವಿಳಾಸ ತಂದುಕೊಡ್ತೀನಿ. ಇವತ್ತೇ ಒಂದು ಅರ್ಜಿ ಬರಿ. ನಾನೂ ಇವತ್ತೇ ಬಸಪ್ಪನೋರಿಗೆ ಒಂದು ಕಾಗದ ಹಾಕ್ತೀನಿ. ಊಟ ಆಯ್ತೋ?"

ರಾಮಸ್ವಾಮಿ "ಇನ್ನೂ ಇಲ್ಲ" ಎಂದ.

"ಇದೇನಪ್ಪ, ಇಷ್ಟು ಹೊತ್ತು. ಆಗಲೆ ಎರಡು ಗಂಟೇನೇನೋ! ಏಳಿ ಏಳಿ ಊಟ ಮಾಡಿ. ನಾನು ಬರ್ತೀನಿ" ಎಂದು ಕೋಲನ್ನೂರಿ ಭಟ್ಟರು ಮೇಲಕ್ಕೆದ್ದರು.

ರಂಗಣ್ಣನವರು "ಪರವಾಯಿಲ್ಲ ಕೂತ್ಕೊಳ್ಳಿ, ಈಗ ಊಟ ಮಾಡ್ಕೊಂಡು ಬಂದ್ಬಿಡ್ತೀವಿ" ಎಂದು ಎದ್ದರು.

ಭಟ್ಟರು "ಬೇಡ ಬೇಡ. ಆಯ್ತಲ್ಲ ಕೆಲಸ. ಊರಿಗೆ ಬಂದ ಕೂಡಲೆ ನೋಡಬೇಕು ಅಂತಿದ್ದೆ. ನಿನ್ನೆ ರಾತ್ರಿ ಬಂದೆ. ಊಟ ಮಾಡ್ಕೊಂಡು ಹಾಗೇ ಹೊರಟೆ. ನಾನು ಬರ್ತೀನಿ. ನೀವು ಊಟ ಮಾಡಿ" ಎಂದು ಹೊರಗೆ ಹೊರಟರು.

ರಾಮಸ್ವಾಮಿ ಬಾಗಿಲು ಮುಂದಕ್ಕೆ ಮಾಡಿ ಅಗಳಿ ಹಾಕಿದ.

*   *   *   *   *

ಮೂರು ಕಡೆ ಅರ್ಜಿ ಹೋಯಿತು. ಆದರೆ ಅಚ್ಚಂಭಟ್ಟರ ಪ್ರಯತ್ನವೇ ಯಶಸ್ವಿಯಾಯಿತು. ಮಗ ಊರು ಬಿಟ್ಟು ಹೊರಗೆ ಹೋಗುವುದು ತಂದೆಗೆ ಇಷ್ಟವಿರಲಿಲ್ಲ. ಬೀಗರಿಂದ ಸಾವಿರ ರೂಪಾಯಿ ತೆಗೆದುಕೊಳ್ಳುವಾಗ ಮಾತ್ರ "ನಾಳೆ ನಿನಗೆ ಕೆಲಸ ಸಿಕ್ತಪ್ಪ, ಬೇರೆ ಊರಿಗೇ ಹೋಗಬೇಕಾಯ್ತು. ಹೊಸದಾಗಿ ಹೋಗಿ ಸಂಸಾರ ಹೂಡ ಬೇಕಾದರೆ ಒಂದೈವತ್ತು ಅರುವತ್ತು ರೂಪಾಯಿ ಬೇಕಾಗೋದಿಲ್ಲವೆ........ ಅಗತ್ಯವಾದ ಪಾತ್ರೆಪಡಗ ಇರಬೇಡವೆ; ಇದ್ದದ್ದೆಲ್ಲ ಹಾಳಾಗಿವೆ; ಕೆಲವ ನ್ನಾದರೂ ತೊಗೋಬಹುದು" ಎಂದು ಹಿತವಾಗಿ, ಸಮಂಜಸವಾಗಿ

ಮಾತಾಡಿದ್ದರು. ಆದರೆ ಮಗ ನಿಜವಾಗಿಯೂ ಊರು ಬಿಟ್ಟು ಹೊರಗೆ ಕೆಲಸಕ್ಕೆ ಹೋಗುತ್ತಾನೆ, ಎನ್ನಿಸಿದ ಕೂಡಲೆ ಇರುವ ದುಡ್ಡಿಗೆ ಖರ್ಚು ಬಂತಲ್ಲಾ ಎಂದು "ಬೇಡ ಬೇಡ" ಎನ್ನತೊಡಗಿದ್ದರು. ರಾಮುಸ್ವಾಮಿ "ನೀನೂ ಜೊತೇಲೇ ಬಂದ್ಬಿಡು. ನಿನ್ನ ಪೆನ್ಷನ್ನು, ನನ್ನ ಸಂಬಳ ನಮ್ಮ ಸಂಸಾರಕ್ಕೆ ಸಾಕೇ ಸಾಕು; ನಾವು ಎಲ್ಲಿದ್ದರೂ ಸಾಕು" ಎಂದುದಕ್ಕೆ ಅವರು "ನಾ ಬರೊಲ್ಲಪ್ಪ, ನಾನು ಈ ಮನೆ ಬಿಟ್ಟು ಬರೊಲ್ಲ. ಆದ್ದರಿಂದಲೇ ನಾ ಹೇಳ್ತಾ ಇರೋದು, ಇಲ್ಲೇ ಯಾವುದಾದರೂ ನೋಡ್ಕೋ ಅಂತ" ಎಂದು ಹೇಳಿಬಿಟ್ಟರು.

ಅರಸೀಕೆರೆ ಹೈಸ್ಕೂಲು ಮೇಸ್ಟರ ಕೆಲಸದ ಆರ್ಡರ್ ಬಂದ ದಿನ ಮಧ್ಯಾಹ್ನವೇ ಇಬ್ಬರಿಗೂ ಬಹಳ ಮಾತು ನಡೆಯಿತು. ರಂಗಣ್ಣನವರು 'ಬೇಡ, ಇಲ್ಲೇ ಯಾವುದಾದರೂ ನೋಡು' ಎಂದರು. ಸದ್ಯಕ್ಕೆ ಅಲ್ಲಿ ಯಾವುದೂ ಸಿಕ್ಕುವಂತಿರಲಿಲ್ಲ. ತಾಲ್ಲೂಕು ಕಛೇರಿಯಲ್ಲಿಯೂ ವಿಚಾರಿಸಿದ್ದಾಗಿತ್ತು; ಹಾಸನದ ಆಫೀಸುಗಳಲ್ಲಿ 'ಟೆಂಪರರಿ ಗುಮಾಸ್ತೆ' ಕೆಲಸ ಸಹ ಒಂದೂ ಖಾಲಿ ಇರಲಿಲ್ಲ; ರಾಮುಸ್ವಾಮಿ ಕೆಲಸವಿಲ್ಲದೆ ಸುಮ್ಮನೆ ಕೂಡುವಹಾಗಿರಲಿಲ್ಲ. ಆದ್ದರಿಂದ ಅರಸೀಕೆರೆಗೆ ಹೊರಡಲು ಅವನು ಸಿದ್ಧವಾಗಿದ್ದ. ಆದರೆ ತಂದೆ 'ಬೇಡ' ಎನ್ನುತ್ತಿದ್ದರು; "ಮುಪ್ಪಿನ ಕಾಲದಲ್ಲಿ ನೀನು ಕಣ್ಣೆದುರಿಗಿರಬೇಕು ಅಂತ ನನ್ನ ಇಷ್ಟ" ಎಂದರು. ಅದಕ್ಕೆ ರಾಮುಸ್ವಾಮಿ "ಆಗಲಿ, ನನ್ನ ಇಚ್ಛೆಯೂ ಅದೇ. ಬಾ ಅರಸೀಕೆರೆಗೆ ಹೋಗೋಣ, ಅಲ್ಲೇ ಇರು" ಎಂದಾಗ "ನಾ ಬರೊಲ್ಲಪ್ಪ, ಈ ಇಳಿ ವಯಸ್ಸಿನಲ್ಲಿ ಊರು, ಮನೆ ಬಿಟ್ಟು ಊರೂರು ಅಲೆಯೋಕೆ ನನಗಿಷ್ಟವಿಲ್ಲ" ಎಂದುಬಿಟ್ಟರು. "ಸದ್ಯಕ್ಕೆ ಹೋಗಿರೋದು. ಆಮೇಲೆ ಇಲ್ಲಿ ಇನ್ನೂ ಉತ್ತಮವಾದ್ದು ಸಿಕ್ಕಿದರೆ ಬಂದು ಅದಕ್ಕೆ ಸೇರಿಕೊಳ್ಳೋದು" ಎಂದು ಹೇಳಿ ಮಗ ಅವರನ್ನು ಸಮಾಧಾನಮಾಡಿದ.

ಸಂಜೆ ರಾಮುಸ್ವಾಮಿ ಆ ಆರ್ಡರ್ ತೆಗೆದುಕೊಂಡು ಅಚ್ಚಂಭಟ್ಟರ ಮನೆಗೆ ಹೋದ. ಭಟ್ಟರು ಮನೆಯಲ್ಲಿಯೇ ಇದ್ದರು. ರಾಮುಸ್ವಾಮಿಯನ್ನು ನೋಡಿದ ಕೂಡಲೆ, ಪಡಸಾಲೆಯಲ್ಲಿದ್ದ ಕುರ್ಚಿ ತೋರಿಸಿ "ಬಾ ಕೂತ್ಕೊ, ಬಂತಾ ಆರ್ಡರು?" ಎಂದರು.

ರಾಮಸ್ವಾಮಿ "ಬಂತು" ಎಂದ.

"ನನಗೂ ಇವತ್ತು ಬಸಪ್ಪನೋರಿಂದ ಕಾಗದ ಬಂತು"

"ಆದರೆ ಒಂದು ವಿಷಯ"

"ಏನು ?"

"ನಮ್ಮ ತಂದೆಗೆ ಇಷ್ಟವಿಲ್ಲ"

"ನೀನು ಅರಸೀಕೆರೆಗೆ ಹೋಗೋದ ?"

"ಹೌದು; ಅರಸೀಕೆರೆ ಅಂತ ಅಲ್ಲ, ಈ ಊರು ಬಿಡೋದೇ ಅವರಿಗೆ ಇಷ್ಟವಿಲ್ಲ. ಇಲ್ಲೇ ಯಾವುದಾದರೂ ನೋಡ್ಕೊ, ಅಂತಾರೆ"

"ಸರಿ. ಆದರೆ ಯಾವುದೂ ಇಲ್ಲವಲ್ಲ. ಇದ್ದರೆ ಅದು ಅನುಕೂಲವೆ."

"ನಾನೂ ಹಾಗೇ ಹೇಳಿದೆ."

"ಹಾಗಾದರೆ ಈಗ ಏನು ಮಾಡ್ಬೇಕೊಂತಿದೀಯೆ ?"

"ಅದೇ ಯೋಚನೆ ಮಾಡ್ದೆ. ನಾನೇನೋ ಹೋಗೇಬಿಡೋದೂಂತ ತೀರ್ಮಾನಿಸಿಬಿಟ್ಟಿದೇನೆ: ಸದ್ಯಕ್ಕೆ ಅಲ್ಲಿಗೆ ಹೋಗಿರೋದು. ಇನ್ನೂ ಉತ್ತಮವಾದ್ದು ಇಲ್ಲಿ ಸಿಕ್ಕಿದರೆ ಅದನ್ನ ಬಿಟ್ಟು ಬಂದುಬಿಡೋದೂಂತ ಹೇಳಿದೆ. ಆವಾಗ ಅವರಿಗೆ ಸ್ವಲ್ಪ ಸಮಾಧಾನ ಆಯಿತು"

"ಸರಕಣಪ್ಪ, ಆದರೆ ಹೋಗಿ ಮೂರು ದಿನಕ್ಕೇ ವಾಪಸು ಬಂದು ನನಗೆ ಅವಮಾನ ಮಾಡಬೇಡ; ಏನಪ್ಪ, ಇಂಥವರನ್ನು ತಂದುಹಾಕಿ ದಾಂತ ಬಸಪ್ಪನೋರು ನನ್ನನ್ನು ಶಪಿಸಾರು"

"ಛೆ ಛೆ, ಹಾಗೆ ಮಾಡೊಲ್ಲ. ನಮ್ಮ ತಂದೇನ ಸಮಾಧಾನ ಮಾಡೋಕೋಸ್ಕರ ಹೇಳಿದೆ, ಅಷ್ಟೆ"

"ಸರಿ. ಹಾಗಾದರೆ ಯಾವತ್ತು ಹೊರಡ್ತೀಯೆ ?"

"ಜೂನ್ ಒಂದನೇ ತಾರೀಕು ಸ್ಕೂಲು ಬಾಗಿಲು ತೆಗೆಯೋದು. ಅವತ್ತು ಬಂದು ಛಾರ್ಜ್ ತೊಗೋಬೇಕೊಂತ ಆರ್ಡರಿನಲ್ಲಿ ತಿಳಿಸಿದಾರೆ. ಆದ್ದರಿಂದ ನಾನು ಈ ತಿಂಗಳು ಮೂವತ್ತೊಂದನೇ ತಾರೀಕು ಹೊರಡೋಣಾಂತ ಮಾಡಿದೀನಿ"

"ಹಾಗಾದರೆ ಪರವಾಯಿಲ್ಲ, ಇನ್ನೂ ಬಹಳ ದಿನ ಇದೆ."

"ಎಲ್ಲಿ? ಸರಿಯಾಗಿ ಒಂದು ವಾರ ಇದೆ, ಅಷ್ಟೆ"

"ಊರಿಂದ ಕಾಗದ ಬಂದಿತ್ತ?"

"ಬಂದಿತ್ತು"

"ಏನಂತಾರೆ ಮಾವನೋರು?"

"ಏನಿಲ್ಲ, ಎಲ್ಲ ಆರೋಗ್ಯಾಂತ"

"ಕೆಲಸದ ವಿಷಯ?"

"ಅಲ್ಲೇನೂ ಆಗಲಿಲ್ಲವಂತೆ. ಸದ್ಯದಲ್ಲಿ ಯಾವುದೂ ಆಗೋಹಾಗೂ ಇಲ್ಲಾಂತ ಬರೆದಿದ್ದರು."

"ನೀನು ಈ ಅರಸೀಕೆರೆ ವಿಷಯ ಬರೆದಿದ್ಯೊ?"

"ಬರೆದಿದ್ದೆ. ಆದರೆ ಆರ್ಡರ್ ಬಂದಿರೋದು ಇವತ್ತುತಾನೆ."

"ಹಾಗಾದರೆ ನೀನು ಈ ವಿಷಯ ಇವತ್ತು ಬರೀತೀಯಾ ಅನ್ನು"

"ಹೌದು."

"ಆಮೇಲೇ....ಇನ್ನೇನಪ್ಪ, ಪಾಸಾಯ್ತು, ಕೆಲಸ ಆಯ್ತು. ತಿಂಡಿಕಾಫಿ ಯಾವತ್ತು?"

"ಯಾವತ್ತಾದರೂ ಸರಿ"

"ನಮಗೆ ಹೋಟಲದ್ದು ಸರಿಹೋಗಲ್ಲ"

"ಏನು ಮಾಡೋಣ. ಮನೇಲಿ ಯಾರು ಮಾಡೋರು?"

"ಅಂದ ಹಾಗೆ, ಅದನ್ನೇ ಮರೆತಿದ್ದೆ. ನೀನು ಯಾವಾಗ ಕರಕೊಂಡು ಬರೋದು?"

"ಕೆಲಸ ಸಿಕ್ಕಲೀಂತ ಸುಮ್ಮನಿದ್ದೆ."

"ಆಯ್ತಲ್ಲ!"

"ಆಯ್ತು. ಅರಸೀಕೆರೆಗೆ ಹೋಗಿ ಅಲ್ಲಿ ಸ್ಥಿತಿಗತಿ ನೋಡಿಕೊಂಡು ನಿರ್ಧರಿಸಬೇಕು."

"ಸ್ಥಿತಿಗತಿ ಏನು. ಎಲ್ಲ ಅಚ್ಚುಕಟ್ಟಾಗಿದೆ. ನಮ್ಮ ಬಸಪ್ಪನೋರಿರೋದ್ರಿಂದ ನಿನಗೆ ಚೂರೂ ಅನಾನುಕೂಲವಾಗೊಲ್ಲ."

"ಅದು ಸರಿ. ಸ್ವಲ್ಪ ದುಡ್ಡು ಕಾಸು ಬೇಡವೆ?"

"ಬೇಕು ಬೇಕು. ನಿಮ್ಮಪ್ಪನ ಕೇಳು ಕೊಡ್ತಾರೆ."

"ಇಲ್ಲ. ಅವರಿಗೆ ನಾನು ಈ ಊರು ಬಿಡೋದೇ ಇಷ್ಟವಿಲ್ಲವಲ್ಲ!"

"ಇರಬಹುದು, ಆದರೆ ನೀನು ಕೇಳಿದರೆ ದುಡ್ಡು ಕೊಡ್ತಾರೆ. ಅವರ ಹತ್ತಿರ ದುಡ್ಡಿದೆ. ಬಹಳ ಘಾಟಿ ಮುದುಕ ಅದು" ಎಂದು "ಕಾಫಿ ಆಯ್ತೇನೋ!" ಎನ್ನುತ್ತ ಒಳಗೆ ಹೋದರು. ಸ್ವಲ್ಪ ಹೊತ್ತಿನಲ್ಲಿಯೇ ಎರಡು ಕೈಗಳಲ್ಲಿಯೂ ಎರಡು ಲೋಟ ಕಾಫಿ ಹಿಡಿದು ಪ್ರವೇಶಿಸಿ, ಒಂದನ್ನು ರಾಮಸ್ವಾಮಿಯ ಕೈಗೆ ಕೊಡುತ್ತ "ನಿಮ್ಮಪ್ಪನ ಹತ್ತಿರ ದುಡ್ಡಿದೆ ಕಣಯ್ಯ! ಬ್ಯಾಂಕಿನಲ್ಲಿಟ್ಟಿದಾರೆ. ನೀನು ಕೇಳಿದರೆ ಕೊಡ್ತಾರೆ, ನಿನಗಲ್ಲದೆ ಇನ್ಯಾರಿಗೆ ದುಡ್ಡು ಮಾಡಿಡಬೇಕು ಅವರು!" ಎಂದರು.

ರಾಮಸ್ವಾಮಿ ಸುಮ್ಮನಿದ್ದ.

ಭಟ್ಟರು "ಹಾಗಾದರೆ ಯಾವಾಗ ಕರಸ್ತೀಯೆ ?" ಎಂದರು.

"ಅರಸೀಕೆರೆಗೆ ಹೋದ ಮೇಲೆ."

"ಹಾಗಾದರೆ ನಾನು ಮುಂದಿನ್ಸಲ ಅರಸೀಕೆರೆಗೆ ಬಂದಾಗ ನಿಮ್ಮ ನೇಲೇ ಬಿಡಾರ" ಎಂದು ನಕ್ಕರು.

"ಓಹೋ, ಅದಕ್ಕೇನು ಆಗಲಿ" ಎಂದು ರಾಮಸ್ವಾಮಿ ಎದ್ದ. "ಅದೇ ಈ ಅರ್ಡರ್ ವಿಷಯ ತಮಗೆ ಹೇಳಿ ಹೋಗೋಣಾಂತ ಬಂದೆ" ಎಂದ.

"ಸರಿ. ನಿಮ್ತಂದೆ ಮಾತು ಕೇಳಬೇಡ. ಅವರಿಗೆ ಗೊತ್ತಾಗೊಲ್ಲ. ಬಂದಿರೋ ಕೆಲಸ ಕಳಕೋಬೇಡ, ಹೋಗು. ಅವರು ಎಷ್ಟು ದಿನ ದೂರ ಇರ್ತಾರೆ! ಕೈಲಾಗೋವರ್ಗೂ ಆಟ ಆಡ್ತಾರೆ. ಈಗಲೇ ಮುಕ್ಕಾಲು ಹಣ್ಣಾಗಿದಾರೆ. ಆಮೇಲೆ ನಿನ್ನ ಹತ್ತಿರ ಬಂದೇ ಬರ್ತಾರೆ. ಈಗ ಹೊರ ಟ್ಹೋಗೋದೇ ಅವರಿಗೆ ಮದ್ದು. ಅ್ಞ!" ಎಂದು ನಕ್ಕರು. ರಾಮಸ್ವಾಮಿ ಭಟ್ಟರಿಗೆ ನಮಸ್ಕಾರ ಮಾಡಿ ಹೊರಟ.

* * * * *

ಅವನು ತಂದೆಯನ್ನು ದುಡ್ಡು ಕೇಳಿದ. ಪೋಸ್ಟಾಫೀಸಿನಲ್ಲಿ ಟ್ಟಿದ್ದ ಇನ್ನೂರು ರೂಪಾಯಿಯ ಪೈಕಿ ಐವತ್ತು ರೂಪಾಯಿಯಾದರೂ

ತೆಗೆದುಕೊಡು, ಎಂದಾಗ "ಇಲ್ಲ, ಅದು ಹಾಗೇ ಇರಲಿ. ಸದ್ಯಕ್ಕೆ ಮನೇಲಿರೋ ಪಾತ್ರೆಪಡಗಾನೇ ಸಾಕು. ಅದೂ ಅಲ್ಲದೆ, ನೀನು ಅರಸೀಕೆರೇಲಿ ಸಂಸಾರ ಹೂಡ್ತೀಯಾಂತ ತಿಳಿದರೆ ನಿಮ್ಮ ಮಾವ ನಿನ್ನ ಸಂಸಾರಕ್ಕಾಗೊ ಪಾತ್ರೆಪಡಗ ಎಲ್ಲ ಕಳಿಸೇ ಕಳಿಸ್ತಾರೆ" ಎಂದರು.

ತನ್ನ ಮಾವನವರು ಕೊಟ್ಟ ಒಂದು ಸಾವಿರ ರೂಪಾಯಿಯಲ್ಲಿ ಏಳುನೂರೈವತ್ತು ರೂಪಾಯಿ ಜಮೀನಿಗೆ, ಐವತ್ತು ರೂಪಾಯಿ ಒಂದು ಸೀರೆ ಎರಡು ಕಣಗಳಿಗೆ ಖರ್ಚಾಗಿ ಇನ್ನೂರು ರೂಪಾಯಿ ಹಾಗೆಯೇ ಉಳಿದಿತ್ತು. ರಂಗಣ್ಣನವರು ಅದನ್ನು ಪೋಸ್ಟಾಫೀಸಿನಲ್ಲಿಟ್ಟಿದ್ದರು. ಮೊದಮೊದಲು, ಅದು ಮಗನ ಸಂಸಾರಕ್ಕೆ ಎಂದು ಬಾಯಿಯಲ್ಲಿ ಮಾತಾಡಿದರೂ, ಈಗ ಅದರಿಂದ ಮೂರು ಕಾಸು ತೆಗೆಯಲೂ ಅವರಿಗೆ ಮನಸ್ಸಾಗಲಿಲ್ಲ. "ಇರಲಿ, ಕೈಗಾವಲಿಗೆ ಬೇಕಾಗುತ್ತೆ. ನನಗೇನು ಅದರಲ್ಲಿ ಮೂರು ಕಾಸೂ ಬೇಡ. ಎಲ್ಲ ನಿಂಗೇ. ಸಮಯ ಸಂದರ್ಭ ಹ್ಯಾಗೆ ಬರುತ್ತೋ, ಇರಲಿ ಅದು ಹಾಗೇ" ಎಂದುಬಿಟ್ಟರು.

ರಾಮಸ್ವಾಮಿ ಹೊಳೆನರಸೀಪುರಕ್ಕೆ ಕಾಗದ ಹಾಕಿದ. ಅರಸೀಕೆರೆಯಲ್ಲಿ ಕೆಲಸ ಸಿಕ್ಕಿದೆ ಎಂಬ ವಿಷಯ ಕೇಳಿ, ಗೌರಿಗೆ, ಗೌರಿಯ ತಂದೆ ತಾಯಿಗೆ ತುಂಬ ಸಂತೋಷವಾಯಿತು. ಗೌರಿ 'ಒಂದೇ ತಿಂಗಳು, ರಿಸಲ್ಟ್ ಬರಲಿ ಎಂದಿರಿ. ರಿಸಲ್ಟ್ ಬಂದ ಮೇಲೆ, ಇನ್ನೊಂದ್ಸೊಲ್ಪ ದಿನ, ಕೆಲಸ ಆಗಲಿ, ಅಂದಿರಿ. ಎರಡು ತಿಂಗಳು ಕಳೀತು. ಹೀಗೆ ತಡ ಮಾಡಿದರೆ ಆಗೊಲ್ಲ. ಒಂದು ತಿಂಗಳ ರೇಷನ್ ಮುಗಿದು ಬಹಳ ದಿನ ಆಯ್ತು. ನಾನು ಹೇಳದೆ ಕೇಳದೆ ಓಡಿಬಂದುಬಿಡ್ತೀನಿ, ಅಷ್ಟೆ' ಎಂದು ಉತ್ತರ ಬರೆದಳು. ರಾಮಸ್ವಾಮಿಗೆ ಆ ಕಾಗದ ನೋಡಿ ತುಂಬ ನಗು ಬಂತು.

"ಮೂವತ್ತೊಂದನೆಯ ತಾರೀಕು ಅರಸೀಕೆರೆಗೆ ಹೊರಡುತ್ತೇನೆ, ಅಲ್ಲಿ ಸ್ಥಿತಿಗತಿ ನೋಡಿಕೊಂಡು, ಒಂದು ಮನೆ ಮಾಡಿ ಕಾಗದ ಬರೀತೇನೆ. ಆಗ ಬರುವಿಯಂತೆ" ಎಂದು ಉತ್ತರ ಬರೆದು ಹೊಳೆನರಸೀಪುರಕ್ಕೆ ಪೋಸ್ಟ್ ಮಾಡಿದ.

ಮೂವತ್ತನೆಯ ತಾರೀಕು ಮಧ್ಯಾಹ್ನ ರಂಗಣ್ಣನವರು ಪಡಸಾಲೆ

ಯಲ್ಲಿ ಹಾಸಿದ್ದ ಚಾಪೆಯ ಮೇಲೆ ಸುಮ್ಮನೆ ಕುಳಿತಿದ್ದರು. ರಾಮಸ್ವಾಮಿ ಕೋಣೆಯಿಂದ ಪಡಸಾಲೆಗೆ ಬಂದ.

"ನಾನು ನಾಳೆ ಬೆಳಗಿನ ರೈಲಿನಲ್ಲೇ ಹೊರಡಬೇಕಾಗುತ್ತೆ" ಎಂದು, ಕಿಟಕಿಯ ಹತ್ತಿರ ಗೋಡೆಗೆ ಒರಗಿ ನಿಂತುಕೊಂಡ.

ರಂಗಣ್ಣನವರು "ಅದೇನು ನಾಳೇನೇ?" ಎಂದು ಕೇಳಿದರು.

"ನಾಳೇನೇ ಮೂವತ್ತೊಂದು; ನಾಡಿದ್ದು ಸ್ಕೂಲು ಬಾಗಿಲು ತೆಗೆಯೋದು. ನಾನು ಒಂದು ದಿನ ಮುಂಚೆ ಹೋಗಿ ರೂಮು, ಹೋಟಲು ಗೀಟಲು ನೋಡಿಕೊಳ್ಳಬೇಕಲ್ಲ."

"ಹಾಗಾದರೆ ನಾಳೇನೇ ಹೊರಡ್ತೀಯ?"

"ಹೌದು."

"ಎಷ್ಟು ಗಂಟೇಗೆ ರೈಲು ಬರೋದು?"

"ಹನ್ನೊಂದೂವರೆಗೆ."

"ಊಟ ಮಾಡ್ಕೊಂಡು ಹೊರಡಬಹುದು."

"ಹೌದು."

ರಂಗಣ್ಣನವರು ಆಮೇಲೆ ಮಾತಾಡಲಿಲ್ಲ. ರಾಮಸ್ವಾಮಿಯೂ ಸ್ವಲ್ಪ ಹೊತ್ತು ಸುಮ್ಮನಿದ್ದ. ಅವನೇ ಆ ವಿಷಯ ಎತ್ತಬೇಕಾಯಿತು.

"ನಾನು ಹೇಳಿದ್ದು ಏನು ಮಾಡಿದಿ?"

"ಏನು?"

"ಅದೇ ಐವತ್ತು ರೂಪಾಯಿ ತೆಗೆಯೋದು"

"ಐವತ್ತು ಯಾಕೆ?"

"ಹೋದಕೂಡಲೆ ಹೋಟಲಿಗೆ ರೂಮಿಗೆ ಅಡ್ವಾನ್ಸ್ ಕೊಡಬೇಕಲ್ಲ?"

"ಸರಿ, ಅದಕ್ಕೆ ಐವತ್ತು ರೂಪಾಯಿ ಬೇಕೆ?"

"ಬೇಕಾಗುತ್ತೆ. ನನಗೆ ಸರಿಯಾದ ಬಟ್ಟೆ ಇಲ್ಲ. ಮೇಸ್ಟ್ರು ಅಂತ ಆದ ಮೇಲೆ ಸ್ಕೂಲಿಗೆ ಸರಿಯಾದ ಬಟ್ಟೆ ಹಾಕ್ಕೊಂಡು ಹೋಗಬೇಡವೆ? ಒಂದೆರಡು ಬಟ್ಟೆ ಹೊಲಿಸಿಕೊಳ್ಳೋಣಾಂತಿದೀನಿ."

"ಮುಂದಿನ ತಿಂಗಳು ಸಂಬಳ ಬಂದ ಕೂಡಲೆ ಹೊಲಿಸಿಕೊಂಡ ರಾಯ್ತಪ್ಪ''

"ಆದರೆ ಈಗ ಹಾಕ್ಕೊಳ್ಳೋಕಿಲ್ಲವಲ್ಲ. ಇನ್ನೊಂದು ಕೋಟು ಒಂದು ಷರಾಯಿ ಆದರೂ ಬೇಡವೆ?"

ರಂಗಣ್ಣನವರು ಅದಕ್ಕೆ ಉತ್ತರ ಕೊಡದೆ ಸುಮ್ಮನೆ ಕುಳಿತಿದ್ದರು.

ರಾಮಸ್ವಾಮಿ "ಒಂದ್ಯೆವತ್ತು ರೂಪಾಯಿ ಡ್ರಾ ಮಾಡಿಕೊಡು. ಉಳಿದದ್ದು ಹಾಗೇ ಇರಲಿ ಬೇಕಾದರೆ" ಎಂದ.

ರಂಗಣ್ಣನವರು "ಅದನ್ನ ತೆಗೆಯೋದು ಬೇಡ. ನನ್ನ ಹತ್ತಿರ ಇಪ್ಪತ್ತು ರೂಪಾಯಿ ಇದೆ. ಕೊಟ್ಬರ್ತೀನಿ. ಅದರಲ್ಲಿ ಹೋಟಲಿಗೆ ಒಂದ್ಹತ್ತು ರೂಪಾಯಿ ಅಡ್ವಾನ್ಸು, ರೂಮಿಗೆ ಒಂದ್ಯೆದು ರೂಪಾಯಿ ಅಡ್ವಾನ್ಸು ಕೊಟ್ಬಿಡು. ಇನ್ನೊಂದ್ಯೆದು ರೂಪಾಯಿ ಕಾಫಿತಿಂಡಿ ಖರ್ಚಿಗೆ ಇಟ್ಟುಕೊಂಡಿರು. ನಾಳೆ ರೈಲು ಛಾರ್ಜಿಗೆ ಒಂದು ಮೂರು ನಾಲ್ಕು ರೂಪಾಯಿ ಬೇಕಾಗುತ್ತೆ, ಅಲ್ಲವೆ? ಆದ್ದರಿಂದ ಇಪ್ಪತ್ತ್ಯೆದು ರೂಪಾಯಿ ಕೊಟ್ಬಿಡ್ತೀನಿ, ಎಲ್ಲ ಅದರಲ್ಲಿ ಮಾಡ್ಕೊ. ಹ್ಯಾಗಿದ್ದರೂ ಫಸ್ಟಿಗೆ ಸಂಬಳ ಬಂದೇ ಬರುತ್ತೆ" ಅಂದರು.

ರಾಮಸ್ವಾಮಿಗೆ ತಂದೆಯವರು ಏಕೊ ಈಗ ತುಂಬ ಹಿಡಿತ, ಎನ್ನಿಸಿತು.

ಮನೆ ಬಿಟ್ಟು ಹೊರಟು ಭಟ್ಟರ ಮನೆಗೆ ಹೋದ. ಭಟ್ಟರು ಮನೆಯಲ್ಲೇ ಇದ್ದರು. "ನಾನು ನಾಳೆ ಅರಸೀಕೆರೆಗೆ ಹೊರಡ್ತೇನೆ. ತಮಗೆ ಹೇಳಿಬಿಟ್ಟು ಬರೋಣಾಂತ ಬಂದೆ" ಎಂದ. ಭಟ್ಟರು ಕೂತ್ಕೊ ಎಂದು ಕೂಡಿಸಿ ಮಾಮೂಲಿನಂತೆ ಒಂದು ಲೋಟ ಬಿಸಿಬಿಸಿ ಕಾಫಿ ಕೊಟ್ಟರು. "ಬಸಪ್ಪನವರಿಗೆ ಒಂದು ಕಾಗದ ಬರೆದುಕೊಡ್ತೀನಿ, ತಡಿ" ಎಂದು ಹೇಳಿ ಒಳಗೆ ಹೋಗಿ, ಕಡ್ಡಿ ಮಸಿಕುಡಿಕೆ ಕಾಗದ ತಂದರು. ರಾಮಸ್ವಾಮಿಯ ಬಗ್ಗೆ ಸರಿಯಾಗಿ ಬರೆದು, ರುಜು ಹಾಕಿ ಕಾಗದವನ್ನು ಅವನ ಮುಂದೆ ಹಿಡಿದು "ನೋಡು ಸಾಕಲ್ಲವೆ?" ಎಂದು ಅವನನ್ನೇ ಕೇಳಿದರು. ರಾಮಸ್ವಾಮಿ ಓದಿಕೊಂಡ. ಭಟ್ಟರು ಚೆನ್ನಾಗಿ ಬರೆದಿದ್ದರು.

"ರಾಮುಸಾಮಿ, ಮೊದಲು ಬಸಪ್ಪನೋರನ್ನ ನೋಡಿ ಈ ಕಾಗದ ಕೊಡು. ಆಮೇಲೆ ಮುಂದಿನ ಕೆಲಸ ಮಾಡು" ಎಂದು ಮಸಿಕುಡಿಕೆಯ ಮುಚ್ಚಳ ಮುಚ್ಚಿದರು. ರಾಮುಸ್ವಾಮಿ "ಆಗಲಿ, ನಿಮಗೆ ತುಂಬ ತೊಂದರೆ ಕೊಡ್ತಿದೇನೆ. ದಯವಿಟ್ಟು ಕ್ಷಮಿಸಿ" ಎಂದು ಎದ್ದುನಿಂತು ಕೊಂಡ. ಭಟ್ಟರು "ಹಾಗಂದ್ರೇನು, ಛೆ ಛೆ!" ಎಂದು ಎದ್ದರು. ರಾಮುಸ್ವಾಮಿ "ನಮಸ್ಕಾರ, ನಾನು ಹೋಗಿಬಿಟ್ಟುಬರ್ತೀನಿ" ಎಂದ. ಭಟ್ಟರು ಬಸಪ್ಪನೋರನ್ನ ನೋಡಿದ ಮೇಲೆ ಎಲ್ಲ ಸಮಾಚಾರಕ್ಕೂ ಕಾಗದ ಹಾಕು" ಎಂದರು. ರಾಮುಸ್ವಾಮಿ "ಆಗಲಿ, ಬರ್ತೀನಿ ನಮಸ್ಕಾರ" ಎಂದು ಮನೆಯ ಕಡೆ ಹೊರಟ.

* * * * *

ಮೂವತ್ತೊಂದನೆಯ ತಾರೀಕು ಬೆಳಗ್ಗೆ ಅಷ್ಟು ಹೊತ್ತಿಗೇ ರಾಮುಸ್ವಾಮಿ ಎದ್ದು ಸ್ನಾನ ಮುಗಿಸಿ, ಬಟ್ಟೆಬರೆ ಸರಿಮಾಡಿಕೊಂಡ. ಒಂದು ಹಾಸಿಗೆ ಒಂದು ಟ್ರಂಕು ತೆಗೆದುಕೊಂಡುಹೋಗುವುದು, ಎಂದು ನಿರ್ಧರಿಸಿದ್ದ. ಅದರಂತೆ ಟ್ರಂಕಿಗೆ ಹಾಕಬೇಕಾದ ಸಾಮಾನನ್ನೆಲ್ಲ ಅದಕ್ಕೆ ಹಾಕಿ ಬೀಗ ಹಾಕಿದ್ದಾಯಿತು. ಹೊರಡುವಾಗ ಧರಿಸಬೇಕಾದ ಬಟ್ಟೆಯನ್ನು ಮಾತ್ರ ತೆಗೆದಿಟ್ಟುಕೊಂಡು ಉಳಿದ ಬಟ್ಟೆಬರೆಗಳನ್ನೆಲ್ಲ ಹಾಸಿಗೆಗೆ ಹಾಕಿ ಹಗ್ಗ ಕಟ್ಟುವ ಹೊತ್ತಿಗೆ ಒಂಬತ್ತು ಗಂಟೆ ಆಯಿತು.

ತಂದೆಯವರು ಅವರ ದೊಡ್ಡ ಮರದ ಪೆಟ್ಟಿಗೆ ತೆಗೆದು ಏನೋ ಮಾಡುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಪೆಟ್ಟಿಗೆಯ ಬಾಗಿಲು ಹಾಕಿ "ತೊಗೊ; ನೋಡು, ಇಪ್ಪತ್ತೈದು ರೂಪಾಯಿ ಇದೆ. ಹುಷಾರಾಗಿ ಖರ್ಚು ಮಾಡಿಕೊ. ಸಾಕೂಂತ ಕಾಣುತ್ತೆ. ಹ್ಯಾಗಿದ್ದರೂ ಫಸ್ಟಿಗೆ ಸಂಬಳ ಬರುತ್ತೆ" ಎಂದರು. ರಾಮುಸ್ವಾಮಿ ಕೈನೀಡಿ ತಂದೆಯ ಕೈಯಲ್ಲಿದ್ದ ಐದು ರೂಪಾಯಿಯ ಐದು ನೋಟು ತೆಗೆದುಕೊಂಡ.

ಊಟ ಮುಗಿಸಿ ಬಟ್ಟೆ ಹಾಕಿಕೊಳ್ಳುವ ಹೊತ್ತಿಗೆ ಹತ್ತೂಕಾಲು ಗಂಟೆ ಆಯಿತು.

ಊಟಕ್ಕೆ ಕುಳಿತಿದ್ದಾಗ ತಂದೆ ಮಗನಿಗೆ ಹೇಳಿದರು; "ನಾನು

ಇಲ್ಲಿ ನೋಡ್ತಾ ಇರ್‍ತೀನಿ. ಯಾವುದಾದರೂ ಸರಿಯಾದ್ದು ಸಿಕ್ಕಿದ ಕೂಡಲೆ ಇಲ್ಲಿಗೆ ಬಂದು ಸೇರಿಕೊಂಡುಬಿಡು. ಈಗಿನ ಕಾಲದಲ್ಲಿ ಮನೆ ಬಾಗಿಲು ಇರೋ ಕಡೆ ಇರೋದೇ ಅನುಕೂಲ" ಎಂದರು.

ಮಗ ಸುಮ್ಮನಿದ್ದ.

ಮೊದಲೇ ಹೇಳಿದ್ದುದರಿಂದ ನಿಂಗ ಪತ್ತೂವರೆ ಗಂಟೆಗೆ ಸರಿಯಾಗಿ ಜಟಕಾಗಾಡಿ ತಂದು ಮನೆಯ ಮುಂದೆ ನಿಲ್ಲಿಸಿದ. ಗಾಡಿಯಲ್ಲಿ ಹಾಸಿಗೆ ಟ್ರಂಕು ಇಟ್ಟ ಮೇಲೆ ರಾಮುಸ್ವಾಮಿ ಮನೆಯಿಂದ ಹೊರಗೆ ಹೊರಟ. ರಂಗಣ್ಣನವರೂ ಗಾಡಿಯ ವರೆಗೆ ಹೋದರು. ರಾಮುಸ್ವಾಮಿ ಗಾಡಿ ಹತ್ತಿದ.

ರಂಗಣ್ಣನವರು "ಹೋದಕೂಡಲೆ ಎಲ್ಲಾ ಸಮಾಚಾರಕ್ಕೂ ಕಾಗದ ಹಾಕು" ಎಂದರು.

ಗಾಡಿ ಹೊರಟಿತು.

* * * * *

ಅರಸೀಕೆರೆ ತಲಪಿ ಮೂರು ದಿನಗಳಾದುವು. ಸ್ಕೂಲು ಷುರುವಾಗಿ ಎರಡು ದಿನ ಆಯಿತು. ಅದೇ ಮೊದಲನೆಯ ವರುಷ ಆದುದರಿಂದ ಮೊದಲನೆಯ ತರಗತಿಗೆ ಮಾತ್ರ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲಾ ಗಿತ್ತು. ಮೂರು ತರಗತಿಗಳೂ ಆಗುವ ವರೆಗೆ ರಾಮಮಂದಿರದ ಕಟ್ಟಡ ದಲ್ಲೇ ಶಾಲೆ ನಡೆಯಲಿ, ಕಟ್ಟಡ ವಿಶಾಲವಾಗಿದೆ ಎಂದು ಬಸಪ್ಪನವರೂ, ಊರಿನ ಸಾಹುಕಾರರಾದ ಚನ್ನಮಲ್ಲಪ್ಪನವರೂ ಸಲಹೆಮಾಡಿದ್ದರು. ಅದರಂತೆ ಜೂನ್ ಮೊದಲನೆಯ ತಾರೀಕು ರಾಮಮಂದಿರದಲ್ಲಿ ಶ್ರೀರಾಮ ದೇವರ ಮತ್ತು ಶಾರದಾದೇವಿಯ ಪೂಜೆಯೊಂದಿಗೆ ಶಾಲೆ ಪ್ರಾರಂಭವಾ ಯಿತು. ಜೋಯಿಸರ ಸಲಹೆಯಂತೆ ಮೊದಲು ವಿಘ್ನೇಶ್ವರನ ಪೂಜೆ ಯನ್ನು ನಡಸಲಾಯಿತು.

ಶಾಲೆಗೆ ಮುಖ್ಯೋಪಾಧ್ಯಾಯರಾಗಿ ಬಂದಿರುವವರೂ, ಸೈನ್ಸ್ ಮತ್ತು ಕನ್ನಡದ ಉಪಾಧ್ಯಾಯರೂ ತುಂಬ ಒಳ್ಳೆಯವರು. ನಾಲ್ಕು ಮಂದಿ ಉಪಾಧ್ಯಾಯರೂ ಒಬ್ಬರೊಡನೊಬ್ಬರು ಬಹಳ ಬೇಗ ಹೊಂದಿ

ಕೊಂಡರು. ಸೈನ್ಸ್ ಉಪಾಧ್ಯಾಯರಿಗೆ ಮಾತ್ರ ಮದುವೆ ಆಗಿರಲಿಲ್ಲ. ಮುಖ್ಯೋಪಾಧ್ಯಾಯರು ನಾಲ್ಕು ಮಕ್ಕಳ ತಂದೆ ಆಗಿದ್ದುದರಿಂದ ಅವರು ಊರಿಗೆ ಬಂದ ದಿನದಿಂದಲೇ ಸಂಸಾರಕ್ಕೆ ಮನೆ ಹುಡುಕುತ್ತಿದ್ದರು. ಕನ್ನಡ ಪಂಡಿತರು ಆಗಲೆ ಬ್ರಾಹ್ಮಣರ ಬೀದಿಯಲ್ಲಿ ಒಂದು ಮನೆ ಗಿಟ್ಟಿಸಿಬಿಟ್ಟಿದ್ದರು. ರಾಮಸ್ವಾಮಿ ಮಾತ್ರ ಇನ್ನೂ ಮನೆ ಹುಡುಕುವ ಪ್ರಯತ್ನದಲ್ಲಿ ಸಾಕಷ್ಟು ಆಸಕ್ತಿ ವಹಿಸಿರಲಿಲ್ಲ. ಸುಮ್ಮನೆ ಒಬ್ಬಿಬ್ಬರನ್ನು ಕೇಳಿದ್ದ. ಅವರು "ಆಗಲಿ, ನೋಡೋಣ, ಅಲ್ಲಿದೆ, ಇಲ್ಲಿದೆ, ಖಾಲಿ ಆಗಿಲ್ಲ, ಆಗಲಿ" ಎಂದು ಹೇಳಿ ಸುಮ್ಮನಾಗಿದ್ದರು. ಆದರೆ ಅರಸೀಕೆರೆಯಿಂದ ಗಂಡನ ಕಾಗದ ತಲಪಿದ ಕೂಡಲೆ ಗೌರಿ "ನಾನು ಯಾವಾಗ ಅರಸೀಕೆರೆಗೆ ಬರುವುದು?" ಎಂದು ಕೇಳಿದ್ದಳು.

ಊರಿಗೆ ಬಂದ ದಿನದಿಂದ ರಾಮಸ್ವಾಮಿ ಊರಿನ ಸುಪ್ರಸಿದ್ಧ ಸೆಂಟ್ರಲ್ ಕೆಫೆಯಲ್ಲಿ ಊಟ ಮಾಡತೊಡಗಿದ. ಬಸಪ್ಪನವರ ಶಿಫಾರಸಿನಿಂದ ಹೋಟಲಿನವನು ಅಡ್ವಾನ್ಸ್ ತೆಗೆದುಕೊಳ್ಳಲಿಲ್ಲ. ಸೈನ್ಸ್ ಟೀಚರ್ ಕೃಷ್ಣಸ್ವಾಮಿಯೂ ಅಲ್ಲೇ ಚೆನ್ನ ಎಂದು ಇವನ ಜೊತೆಯಲ್ಲಿ ಆ ಹೋಟಲಿಗೇ ಸೇರಿದ. ಆದರೆ ಮೂರು ದಿನದಲ್ಲಿಯೇ ಹೋಟಲ ಊಟ ಇಬ್ಬರಿಗೂ ಬೇಡವಾಯಿತು. ದಿನದಿನಕ್ಕೂ ಅಡಿಗೆ ಕೆಡತೊಡಗಿತು. ಬಾಯಿಯಲ್ಲಿಡುವ ಹಾಗಿರುತ್ತಿರಲಿಲ್ಲ. ಈ ವಿಷಯವನ್ನು ಕನ್ನಡ ಪಂಡಿತರ ಮುಂದೆ ಹೇಳಿದಾಗ, ಅವರು ರಾಮಸ್ವಾಮಿಯ ಕಡೆ ತಿರುಗಿ "ಮೊದಲು ಮನೆ ಮಾಡಿ ಹೊಳೆನರಸೀಪುರಕ್ಕೆ ಕಾಗದ ಹಾಕಿ" ಎಂದರು. ಕೃಷ್ಣಸ್ವಾಮಿಯ ಕಡೆ ತಿರುಗಿ "ಮೊದಲು ನಿಮ್ತಂದೆಗೆ ಕಾಗದ ಬರೆದು, ಮದುವೆ ಮಾಡ್ಕೊಳ್ಳಿ" ಎಂದರು. ರಾಮಸ್ವಾಮಿಗೆ "ಹೌದು ನಿಜ. ಆದಷ್ಟು ಬೇಗ ಮನೆ ಮಾಡಬೇಕು" ಎನ್ನಿಸಿತು.

ಊರಿಗೆ ಬಂದು ಹದಿನೈದು ದಿನಗಳಾಗಿದ್ದುವು. ಆ ಹದಿನೈದು ದಿನಗಳಲ್ಲಿ ರಾಮಸ್ವಾಮಿ ಹೊಳೆನರಸೀಪುರಕ್ಕೆ ನಾಲ್ಕು ಕಾಗದ ಹಾಕಿದ್ದ. ನಾಲ್ಕನೆಯ ಕಾಗದದಲ್ಲಿ "ಹೋಟಲಿನ ಊಟ ಚೆನ್ನಾಗಿಲ್ಲ" ಎಂಬುದನ್ನು ಕೈ ಬರೆದುಬಿಟ್ಟಿತ್ತು. ಅದು ಬರೆದ ಮೂರನೆಯ ದಿನವೇ ಅದಕ್ಕೆ ಉತ್ತರ

ಹೊಳೆನರಸೀಪುರದಿಂದ ಬಂದುಬಿಟ್ಟೆಳು. "ಹಾಗಾದರೆ ಯಾವತ್ತು ಹೊರಡಲಿ?"—ಇದು ಗೌರಿಯ ಕಾಗದದ ಕೊನೆಯ ಪ್ರಶ್ನೆ ಆಗಿತ್ತು.

ರಾಮುಸ್ವಾಮಿ ಹಾಸನಕ್ಕೂ ಎರಡು ಕಾಗದ ಹಾಕಿದ್ದ. ಎಲ್ಲ ಅನುಕೂಲವಾಗಿದೆ. ಭಟ್ಟರ ಸ್ನೇಹಿತರಾದ ಬಸಪ್ಪನವರೇ ನಮ್ಮ ಸ್ಕೂಲಿನ ಸೆಕ್ರೆಟರಿಗಳು. ಅವರು ಬಹಳ ಒಳ್ಳೆಯವರು. ಅವರಿಂದ ತುಂಬ ಅನುಕೂಲವಾಗಿದೆ. ಊರಿಗೆ ಬಂದ ದಿನವೇ ನಾನು ಅವರನ್ನು ನೋಡಿದೆ. ಅಚ್ಚಂಭಟ್ಟರು ಒಂದು ಕಾಗದ ಕೊಟ್ಟಿದ್ದರು. ಅದನ್ನ ಅವರಿಗೆ ಕೊಟ್ಟೆ. ಅವರಿಂದ ನನಗೆ ತುಂಬ ಸಹಾಯವಾಗಿದೆ. ಆದರೆ ಹೋಟಲ ಊಟ ಚೆನ್ನಾಗಿಲ್ಲ. ಎಲ್ಲರೂ ಮನೆ ಮಾಡು ಅಂತ ಪೀಡಿಸ್ತಾ ಇದಾರೆ. ಹೊಳೆನರಸೀಪುರದಿಂದಲೂ ಕಾಗದ ಬಂದಿತ್ತು. ಮನೆ ನೋಡ್ತಾ ಇದೀನಿ, ಎಂದು ಮತ್ತೊಂದು ಕಾಗದ ಹಾಕಿದ. ಆದರೆ ತಂದೆಯವರಿಂದ ಮೊದಲ ಕಾಗದಕ್ಕೆ ಮಾತ್ರ ಉತ್ತರ ಬಂದಿತ್ತು. ಆಮೇಲೆ ಎರಡು ಕಾಗದಗಳಿಗೂ ಏಕೊ ಜವಾಬೇ ಬರಲಿಲ್ಲ. ಈಗಲೇ ಮನೆ ಮಾಡಿ ಹೆಂಡತಿಯನ್ನು ಕರಸಿಕೊಳ್ಳುವುದು ಅವರಿಗೆ ಇಷ್ಟವಿಲ್ಲವೊ, ಏನೊ! ಅಥವಾ "ಪ್ರತಿ ಶನಿವಾರ ಸಂಜೆ ಊರಿಗೆ ಬಂದುಬಿಡು, ಭಾನುವಾರ ರಾತ್ರಿ ವಾಪಸ್ ಹೊರಟುಬಿಡು" ಎಂಬ ಅವರ ಸಲಹೆಗೆ "ದುಡ್ಡಿಲ್ಲ, ಆಗೊಲ್ಲ, ಸುಮ್ಮನೆ ರೈಲು ಛಾರ್ಜು ದಂಡ" ಎಂದು ಬರೆದುದರಿಂದ ಅಸಮಾಧಾನವಾಯಿತೊ ಏನೊ! ಅಂತೂ ಹಾಸನದಿಂದ ಹತ್ತು ಹನ್ನೆರಡು ದಿನಗಳಾದರೂ ಕಾಗದ ಬರಲಿಲ್ಲ. ಆರೋಗ್ಯವಾಗಿದಾರೊ ಇಲ್ಲವೊ, ಎನ್ನಿಸಿದಾಗ ಮುಂದಿನ ಭಾನುವಾರ ಹಾಸನಕ್ಕೆ ಹೋಗಿಬರೋಣ ಎಂದುಕೊಂಡ. ಆದರೆ ಹಾಸನದಿಂದ ಬಂದ ಶಾನುಭೋಗ ತಮ್ಮಯ್ಯನವರು ಪೇಟೆಯಲ್ಲಿ ಸಿಕ್ಕಾಗ "ನಿಮ್ಮ ತಂದೇನ ನೋಡಿದ್ನಪ್ಪ ನಿನ್ನೆ, ಕೇಳಿದರು ನೀನಿಲ್ಲಿದೀಯಾಂತ" ಎಂದರು.

* * * * *

ಬ್ರಾಹ್ಮಣರ ಬೀದಿಯಲ್ಲಿ ಒಂದು ಪುಟ್ಟ ಮನೆ ಸಿಕ್ಕಿತು. ಮನೆ ತುಂಬ ಅಚ್ಚುಕಟ್ಟಾಗಿತ್ತು. ಒಂದು ರೂಮು, ಒಂದು ಹಾಲು, ಅಡಿಗೆ

ಮನೆ, ಬಚ್ಚಲುಮನೆ, ಗಂಡ ಹೆಂಡತಿಯ ಹೊಸ ಸಂಸಾರಕ್ಕೆ ಬಹಳ ಚೆನ್ನಾಗಿದ್ದುವು. ಬಾಡಿಗೆ ಕೇವಲ ಹತ್ತುರೂಪಾಯಿ. ರಾಮುಸ್ವಾಮಿ ತಕ್ಷಣವೇ ಐದು ರೂಪಾಯಿ ಅಡ್ವಾನ್ಸ್ ಕೊಟ್ಟು ಬೀಗದಕೈ ತೆಗೆದು ಕೊಂಡ.

ಹೊಳೆನರಸೀಪುರಕ್ಕೆ ಕಾಗದ ಬರೆಯೋಣ, ಎಂದುಕೊಂಡಾಗ ತಂದೆ ಯವರಿಂದ ಏಕೆ ಕಾಗದವೇ ಬರಲಿಲ್ಲವಲ್ಲ, ಎಂಬ ಯೋಚನೆ ಬಂತು. ಮೊದಲು ಅವರಿಗೆ ಈ ವಿಷಯವಾಗಿ ಒಂದು ಕಾಗದ ಬರೆಯೋಣ, ಎಂದು ನಿರ್ಧರಿಸಿಕೊಂಡ.

'ನಿನ್ನಿಂದ ಕಾಗದವೇ ಬರಲಿಲ್ಲ. ಏನು ಕಾರಣವೊ ತಿಳಿಯದು. ನಿನ್ನ ಆರೋಗ್ಯ ಹೇಗಿದೆ? ಹೀಗೆ ಮೌನವಾಗಿರದೆ ದಯವಿಟ್ಟು ವಾರ ಕ್ಕೊಂದುಬಾರಿಯಾದರೂ ಕಾಗದ ಹಾಕುತ್ತಿರು. ನಾನು ಬ್ರಾಹ್ಮಣರ ಬೀದಿಯಲ್ಲಿ ಒಂದು ಪುಟ್ಟ ಮನೆ ಮಾಡಿದ್ದೇನೆ. ಬಾಡಿಗೆ ಕೇವಲ ಹತ್ತು ರೂಪಾಯಿ. ಮನೆ ಚೆನ್ನಾಗಿದೆ. ಹೊಳೆನರಸೀಪುರಕ್ಕೆ ನಾಳೆ ಕಾಗದ ಬರೀತೀನಿ. ನಮ್ಮ ಹೆಡ್ಮಾಸ್ಟರು ಹೇಳಿದರು: ಆಷಾಢಮಾಸ ಷುರು ವಾಗೋದರೊಳಗೆ ಮನೆ ಮಾಡಿ ಕರಸಿಕೊ ಅಂತ. ಆದ್ದರಿಂದ ಮನೆ ಮಾಡಿಬಿಟ್ಟೆ. ಕರಸಿದರೆ ಇನ್ನು ಹನ್ನೆರಡು ದಿನದೊಳಗೆ ಕರಸಬೇಕು. ಆಮೇಲೆ ಆಷಾಢಮಾಸ ಬಂದುಬಿಡುತ್ತೆ. ನೀನೂ ಗಟ್ಟಿ ಮನಸ್ಸು ಮಾಡಿ ಬಂದುಬಿಡು. ಆ ಭಾಗಾನೂ ಬಾಡಿಗೆಗೆ ಕೊಟ್ಟುಬಿಡೋಣ. ಕೂಡಲೆ ಯಾವುದಕ್ಕೂ ಬರಿ' ಎಂದು ಕಾಗದ ಬರೆದು ಹಾಸನಕ್ಕೆ ಹಾಕಿದ.

ಮೂರನೆಯ ದಿನವೇ ತಂದೆಯವರಿಂದ ಉತ್ತರ ಬಂತು. 'ಹಳ್ಳಿಗೆ ಹೋಗಿದ್ದೆ; ಆದ್ದರಿಂದ ಕಾಗದ ಬರೆದಿರಲಿಲ್ಲ. ಶ್ರಾವಣಮಾಸದ ವರೆಗೂ ತಡಿ ಅಂತ ಬರೆಯೋಣ ಅಂತಿದ್ದೆ. ಅಷ್ಟು ಹೊತ್ತಿಗೆ ಇಲ್ಲಿಯ ಕೆಲಸದ ವಿಷಯವೂ ಗೊತ್ತಾಗುತ್ತಿತ್ತು. ಈಗ ಏನು ಮಾಡೋದು. ಮನೆ ಮಾಡಿಬಿಟ್ಟಿದೇನೆ ಅಂತ ಬರೆದಿದೀಯೆ. ಆಗಲಿ. ಹೊಳೆನರಸೀಪುರಕ್ಕೆ ಕಾಗದ ಹಾಕು. ಒಳ್ಳೇ ದಿನ ನೋಡಿ ಅವಳು ಹೊರಟುಬರಲಿ. ನನಗೆ ಅಲ್ಲಿಗೆ ಬರೋದಕ್ಕಾಗೋದಿಲ್ಲ. ನಾನು ಆಗಾಗ ಜಮೀನಿನ ಕಡೆ ಹೋಗು

ತ್ತಲೇ ಇರಬೇಕಾಗುತ್ತೆ. ಆದ್ದರಿಂದ ನಾನು ಈ ಊರು ಬಿಟ್ಟು ಬರೋಲ್ಲ. ಇಂಥ ದಿನ ನಿನ್ನ ಹೆಂಡತಿ ಬರ್ತ್ತಾಳೆ ಅಂತ ಬರೆದರೆ ಆ ದಿನದಮುಟ್ಟಿಗೆ ನಾನು ಅಲ್ಲಿಗೆ ಬರ್ತ್ತೀನಿ' ಎಂದು ಅವರು ಬರೆದಿದ್ದರು.

ತಂದೆಯ ಕಾಗದ ನೋಡಿ ರಾಮಸ್ವಾಮಿಗೆ ಸಮಾಧಾನವುಂಟಾಯಿತು. ಅವರು ಬರದೇಹೋದರೂ ಚಿಂತೆಯಿಲ್ಲ, ಅಡ್ಡಿ ಬರಲಿಲ್ಲವಲ್ಲ, ಎಂದುಕೊಂಡ. ಮಾರನೆಯ ದಿನವೇ ಹೊಳೆನರಸೀಪುರಕ್ಕೆ ಎರಡು ಕಾಗದಗಳು ಹೋದುವು: ಒಂದು ಮಾವನವರಿಗೆ, ಇನ್ನೊಂದು ಹೆಂಡತಿ ಗೌರಿಗೆ.

ಗೌರಿಗೆ ಆ ಕಾಗದ ನೋಡಿ ಬಹಳ ಸಂತೋಷವಾಯಿತು. ಕೇವಲ ಹತ್ತೇ ದಿನಗಳಲ್ಲಿ ತಾನು ತನ್ನ ಮನೆಯಲ್ಲಿ ಮನೆಯ ಯಜಮಾನಿಯಾಗಿರುತ್ತೇನೆ, ಎನ್ನಿಸಿದಾಗ ತುಂಬ ಆನಂದವಾಯಿತು. ಅದನ್ನು ವ್ಯಕ್ತಪಡಿಸಿ ಗೌರಿ ಗಂಡನಿಗೆ ಉತ್ತರ ಬರೆದಳು. ಮಾವ ಶಾಮಣ್ಣನವರೂ ಅಳಿಯನ ಕಾಗದಕ್ಕೆ ಉತ್ತರ ಬರೆಯುತ್ತ, 'ನಾನು ಮನೆ ಬಿಟ್ಟು ಬರೋಹಾಗಿಲ್ಲ, ಆದ್ದರಿಂದ ಗೌರಿಯನ್ನು ಅವಳ ತಾಯಿಯೊಂದಿಗೆ ಬರುವ ಬುಧವಾರ ಕಳಿಸುತ್ತೇನೆ; ನಿಮ್ಮ ತಂದೆ ಹಾಸನದಲ್ಲೇ ಇದ್ದಾರೆ, ಎಂದು ಬರೆದಿದ್ದೀರಿ. ನೀವು ಅವರಿಗೆ ಬರೆದರೆ ಅವರೂ ಅದೇ ರೈಲಿಗೆ ಬಂದು ಇವರೊಡನೆಯೇ ಅರಸೀಕೆರೆಗೆ ಹೋಗಬಹುದು' ಎಂದು ತಿಳಿಸಿದರು. ಅದಕ್ಕೆ ಉತ್ತರವಾಗಿ ರಾಮಸ್ವಾಮಿ ಮಾರನೆಯ ದಿನವೇ ಕಾಗದ ಬರೆದ: 'ನಮ್ಮ ತಂದೆ ಒಂದು ದಿನ ಮುಂಚೆಯೇ ಬರಬಹುದು. ಆದ್ದರಿಂದ ಇವರು ಅವರಿಗಾಗಿ ಹಾಸನದಲ್ಲಿ ಎದುರುನೋಡಬೇಕಾಗಿಲ್ಲ. ನೇರವಾಗಿ ಅರಸೀಕೆರೆಗೆ ಬಂದುಬಿಡಲಿ. ಇಂಥ ರೈಲಿಗೆ ಹೊರಡ್ತಾರೆ ಅಂತ ಬರೆದರೆ ನಾನು ರೈಲ್ವೆ ಸ್ಟೇಷನ್ ಹತ್ತಿರ ಬಂದಿರ್ತೀನಿ' ಎಂದು. ಮಾವನವರಿಂದ ಅದಕ್ಕೆ ಉತ್ತರ ಬಂತು. 'ಬುಧವಾರ ಬೆಳಗಿನ ರೈಲಿನಲ್ಲಿ ನನ್ನ ಹೆಂಡತಿಯೊಡನೆ ಸೌ|| ಗೌರಮ್ಮನನ್ನು ಕಳಿಸುತ್ತೇನೆ. ಊಟ ಮುಗಿಸಿಕೊಂಡು ಹೊರಡುವುದರಿಂದ ಬೆಳಗ್ಗೆ ಅಡಿಗೆಯ ಏರ್ಪಾಡು ಇಟ್ಟುಕೊಳ್ಳಬೇಡಿ' ಎಂದು ಶಾಮಣ್ಣನವರು ಬರೆದಿದ್ದರು.

ಸೋಮವಾರವೆ ರಾಮಸ್ವಾಮಿ ಸ್ಕೂಲಿನ ಜವಾನನ ಸಹಾಯದಿಂದ ಮನೆಯೆಲ್ಲ ಶುದ್ಧಗೊಳಿಸಿದ. ಜವಾನನ ಹೆಂಡತಿ ಕರಿಯಮ್ಮ ಮನೆಯನ್ನು ಚೆನ್ನಾಗಿ ಗುಡಿಸಿ ಸಾರಿಸಿ ರಂಗವಲ್ಲಿ ಹಾಕಿದಳು. ಜವಾನ ಸಿದ್ದ ರಾಮಸ್ವಾಮಿ ಶೆಟ್ಟಿಯ ಅಂಗಡಿಯಲ್ಲಿ ಕೊಡಿಸಿದ ಸಾಮಾನು ಸರಂಜಾಮನ್ನೆಲ್ಲ ತಂದು ಅಣಿಯಾಗಿ ಇಡಿಸಿದ. ಎರಡು ರೂಪಾಯಿಯ ಸೌದೆಯನ್ನೂ ಸಹ ತರಿಸಿ ಬಚ್ಚಲು ಮನೆಯಲ್ಲಿ ಹಾಕಿಸಿದ್ದಾಯಿತು. ಪಾತ್ರೆ ಪಡಗ ಮಾತ್ರ ಒಂದೂ ಇರಲಿಲ್ಲ. 'ಸದ್ಯಕ್ಕೆ ಇರಲಿ, ಉಪಯೋಗಿಸ್ತಿರಿ' ಎಂದು ಹೆಡ್‌ಮಾಸ್ಟರು ಒಂದು ತಪ್ಪಲೆ, ಎರಡು ಕೊಳದಪ್ಪಲೆ, ಒಂದು ಸೌಟು ಕೊಟ್ಟಿದ್ದರು. ಬೆಲೆ ಸುಲಭವಾಗಿದ್ದುದರಿಂದ ರಾಮಸ್ವಾಮಿ ನಾಲ್ಕು ಅಲ್ಯೂಮಿನಿಯಂ ಲೋಟಗಳನ್ನು ಕೊಂಡುಕೊಂಡು ಬಂದಿದ್ದ.

ಬುಧವಾರ ಬೆಳಗ್ಗೆ ರಾಮಸ್ವಾಮಿ ಅಷ್ಟು ಹೊತ್ತಿಗೇ ಎದ್ದು ನೀರೊಲೆಗೆ ಉರಿಹಾಕಿ, ಸ್ನಾನ ಮುಗಿಸಿಕೊಂಡು ಅಡಿಗೆಮನೆಯಲ್ಲಿ ಅಡಿಗೆಗೆ ಎಲ್ಲ ಸಿದ್ಧಪಡಿಸಿಟ್ಟ. ಒಂದು ಪಾವು ಹಾಲನ್ನೂ ಒಂದು ಪಾವು ಮೊಸರನ್ನೂ ಹಾಕಿಸಿ ತೆಗೆದಿಟ್ಟ. ಅವರಿಬ್ಬರೂ ಊಟ ಮಾಡಿಕೊಂಡು ಹೊರಡುತ್ತಾರೆ, ಎಂದು ಶಾಮಣ್ಣನವರು ಬರೆದಿದ್ದರೂ, ರಾತ್ರಿ ಹೇಳಿದ್ದರೂ ಅನ್ನ ಸಾರು, ಆಗಲೇಬೇಕಲ್ಲ ಎಂದು ರಾಮಸ್ವಾಮಿ ಎಲ್ಲ ಏರ್ಪಾಟು ಮಾಡಿದ್ದ. ತಾನು ಹೋಗಿ ಹೋಟಲಿನಲ್ಲಿ ಊಟ ಮಾಡಿಕೊಂಡು ಬರುವುದೆ, ಬೇಡವೆ ಎಂದು ಯೋಚಿಸಿದ. ರೈಲು ಬರುವುದು ಒಂದೂವರೆ ಗಂಟೆ ಆಗುತ್ತದೆ ಎಂಬುದು ಗೊತ್ತಾದಾಗ 'ಛೆ, ಊಟ ಮಾಡಿಬಿಡೋಣ. ಅಷ್ಟು ಹೊತ್ತಿನವರೆಗೂ ಹೇಗೆ ಉಪವಾಸ ಇರೋದು,' ಎಂದು ನಿರ್ಧರಿಸಿದ.

ಎಂದಿನಂತೆ ಹತ್ತೂವರೆಗೆ ಹೋಟಲಿಗೆ ಹೋಗಿ ಊಟ ಮುಗಿಸಿಕೊಂಡು ನೇರವಾಗಿ ಸ್ಕೂಲಿಗೆ ಹೋದ. ಮೊದಲನೆಯ ಎರಡು ಪಾಠಗಳನ್ನು ಮುಗಿಸಿ, ಹೆಡ್‌ಮಾಸ್ಟರ ಅನುಮತಿ ಪಡೆದು ಹನ್ನೆರಡೂ ಐವತ್ತಕ್ಕೆ ರೈಲ್ವೆ ನಿಲ್ದಾಣದ ಕಡೆಗೆ ಹೊರಟ. ಸ್ಟೇಷನ್ ತಲಪಿದಾಗ

ಒಂದು ಗಂಟೆ ಹತ್ತು ನಿಮಿಷವಾಗಿತ್ತು. "ರೈಲು ಬರುವುದು ಎಷ್ಟು ಹೊತ್ತಿಗೆ?" ಎಂದು ಅಲ್ಲಿದ್ದ ರೈಲ್ವೆ ಗುಮಾಸ್ತನನ್ನು ಕೇಳಿದಾಗ ಆತ "ಒಂದೂ ಇಪ್ಪತ್ತಕ್ಕೆ ಬರಬೇಕು. ಆದರೆ ಇಪ್ಪತ್ತು ನಿಮಿಷ ಲೇಟು. ಆದ್ದರಿಂದ ಒಂದೂ ನಲವತ್ತಕ್ಕೆ ಬರಬಹುದು" ಎಂದ. ರಾಮಸ್ವಾಮಿ, ಅಲ್ಲಿಯೆ ಇದ್ದ ಒಂದು ಬೆಂಚಿನ ಮೇಲೆ ಸುಮ್ಮನೆ ಕುಳಿತುಕೊಂಡ.

ತಂದೆಯು ನೆನಪಾಯಿತು. ಇವರು ಬುಧವಾರ ಹೊರಟುಬರ್ತಾರೆ, ಎಂಬ ವಿಷಯವನ್ನು ರಾಮಸ್ವಾಮಿ ರಂಗಣ್ಣನವರಿಗೆ ಕಾಗದದ ಮೂಲಕ ತಿಳಿಸಿದ್ದ. ನೀವು ದಯವಿಟ್ಟು ಒಂದು ದಿನ ಮುಂಚಿತವಾಗಿಯೇ ಹೊರಟುಬನ್ನಿ, ಎಂದೂ ಕೇಳಿಕೊಂಡಿದ್ದ; ಆದರೆ ಅವರು ಮಂಗಳವಾರ ಬರಲಿಲ್ಲ. ನೋಡಬೇಕು, ಇವರ ಜೊತೆಯಲ್ಲಿ ಏನಾದರೂ ಬರುತ್ತಾರೆಯೊ ಏನೊ, ಎಂದುಕೊಂಡ. ಮೂವತ್ತು ನಿಮಿಷ ಕಳೆಯುವುದು ಬಹಳ ಪ್ರಯಾಸವಾಯಿತು. ಅವರು ಬಂದರೆ ಸರಿಯಾದ ಗಾಡಿ ಬೇಕಲ್ಲ ಎನ್ನಿಸಿದಾಗ ಜಟಕಾ ಸ್ಟ್ಯಾಂಡಿನ ಕಡೆ ಕಣ್ಣು ನೋಡಿತು. ಐದಾರು ಜಟಕಾಗಳು ಸಾಲಾಗಿ ಸಿದ್ಧವಾಗಿ ನಿಂತಿದ್ದುವು.

ರೈಲು ಒಂದೂ ನಲವತ್ತಕ್ಕೆ ಸರಿಯಾಗಿ ನಿಲ್ದಾಣದ ಮುಂದೆ ಬಂದು ನಿಂತುಕೊಂಡಿತು. ಹೆಂಡತಿ ಮತ್ತು ಅತ್ತೆಯವರನ್ನು ಹುಡುಕುವುದು ಅಷ್ಟು ಪ್ರಯಾಸವಾಗಲಿಲ್ಲ. ಎದುರಿಗೆ ನಿಂತ ಹೆಂಗಸರ ಗಾಡಿಯಲ್ಲೇ ನಿಲ್ದಾಣದ ಕಡೆಯೇ ಅವರಿಬ್ಬರೂ ಕುಳಿತಿದ್ದರು.

ಗೌರಿ ಮೊದಲು ಗಂಡನ ಮುಖ ನೋಡಿ ನಕ್ಕಳು. ನಂಜಮ್ಮನವರು ಅಳಿಯನಿಗಾಗಿ ಆ ಕಡೆ ಈ ಕಡೆ ನೋಡುತ್ತಿದ್ದರು. ಆಮೇಲೆ ಗೊತ್ತಾಯಿತು, ಅಳಿಯದೇವರು ಎದುರಿಗೇ ಇದ್ದುದು. ರಾಮಸ್ವಾಮಿ, "ಸಾಮಾನನ್ನೆಲ್ಲ ಈ ಕಿಟಕೀಲಿ ಕೊಡಿ" ಎಂದ. ನಂಜಮ್ಮನವರು "ಆಗಲಿ" ಎಂದು ಗೌರಿಯ ಹಾಸಿಗೆಯನ್ನು ಇಳಿಸತೊಡಗಿದರು. ಆ ಹೊಸ ಹಾಸಿಗೆಯನ್ನು ಅಲ್ಲಾಡಿಸಲು ಅವರ ಕೈಯಲ್ಲಾಗಲಿಲ್ಲ. ಅದನ್ನು ಅಲ್ಲಿಗೇ ಬಿಟ್ಟು, ರೈಲುತಂಬಿಗೆ, ಕೈಚೀಲ, ತೆಗೆದು ಕಿಟಕಿಯಿಂದ ಹೊರಗೆ ಹಿಡಿದರು. ರಾಮಸ್ವಾಮಿ ಅವುಗಳನ್ನು ತೆಗೆದುಕೊಂಡು, ನೀವು ಇಳಿದು

ಬಿಡಿ. ನಾನು ಸಾವಮಾನು ಇಳಿಸ್ತೀನಿ" ಎಂದ. ಅಷ್ಟು ಹೊತ್ತಿಗೆ ಸರಿಯಾಗಿ ಬಾಗಿಲಲ್ಲಿ ನಿಂತಿದ್ದ ಕೂಲಿ "ಕೂಲಿ ಬರ್ಲಾ ಸಾಮಿ?" ಎಂದ. "ಹೂ ಕಣಯ್ಯ, ಹೋಗು ಸಾಮಾನು ಇಳಿಸ್ಕೋ" ಎಂದ ರಾಮುಸ್ವಾಮಿ. ಕೂಲಿ ಗಾಡಿ ಹತ್ತಿದ. ನಂಜಮ್ಮನವರು "ಗೌರ, ನೀ ಇಳಿಯೆ. ನಾನು ಸಾಮಾನು ತೋರಿಸ್ತೀನಿ ಇವನಿಗೆ" ಎಂದು ಗಾಡಿಯಲ್ಲೇ ನಿಂತುಕೊಂಡರು. ರಾಮುಸ್ವಾಮಿ "ಪರವಾಯಿಲ್ಲ ಅವಸರ ಮಾಡ್ಕೊಳ್ಳಬೇಡಿ, ಟೈಮಿದೆ, ನಿಧಾನವಾಗಿ, ಎಲ್ಲ ಸಾಮಾನೂ ಇಳಿಸ್ಕೊಳ್ಳೋಣ" ಎಂದ. ಕೂಲಿ ಟ್ರಂಕು, ಹಾಸಿಗೆ ತೆಗೆದು ರಾಮುಸ್ವಾಮಿಯ ಕೈಗೆ ಕೊಟ್ಟ. ರಾಮುಸ್ವಾಮಿ ಎರಡನ್ನೂ ಒಂದಾದಮೇಲೊಂದು ಇಳಿಸಿಕೊಂಡ. ಆಮೇಲೆ ಎರಡು ಹಿಡಿಬುಟ್ಟಿ ಕೆಳಗಿಳಿದುವು. ರಾಮುಸ್ವಾಮಿ "ಇನ್ನೇನು?" ಎಂದು ಗೌರಿಯ ಕಡೆ ತಿರುಗಿದ. ಗೌರಿ "ಇನ್ನೂ ಇದೆ" ಎಂದಳು. ರಾಮುಸ್ವಾಮಿ ಗಾಡಿಯ ಕಡೆ ನೋಡಿದ. ಕೂಲಿಯವನು ಪಾತ್ರೆಯ ಚೀಲ ಇಳಿಸುತ್ತಿದ್ದ. ರಾಮುಸ್ವಾಮಿ ಹೋಗಿ ಆ ಚೀಲ ಹಿಡಿದುಕೊಂಡ. ಇಬ್ಬರೂ ಸೇರಿ ಅದನ್ನು ನೆಲದ ಮೇಲೆ ಇಟ್ಟಮೇಲೆ ರಾಮುಸ್ವಾಮಿ ಹತ್ತಿರದಲ್ಲಿಯೇ ನಿಂತಿದ್ದ ಗೌರಿಯ ಮುಖ ನೋಡಿದ. ಗೌರಿಗೆ ನಗು ಬಂತು; ಕೈ ತುಟಿ ಮುಚ್ಚಿಕೊಂಡಿತು. ರಾಮುಸ್ವಾಮಿಗೆ ಅರ್ಥವಾಯಿತು, ಅದು ನಮ್ಮ ಸಂಸಾರದ ಪಾತ್ರೆಪಡಗ ಎಂಬುದು. "ಇನ್ನೇನು?" ಎಂದು ಬಾಗಿಲ ಹತ್ತಿರಕ್ಕೆ ಹೋದ. ನಂಜಮ್ಮನವರು "ಇನ್ನೇನೂ ಇಲ್ಲ" ಎಂದು ತಮ್ಮ ಒಂದು ಪುಟ್ಟ ಹಾಸಿಗೆ ಹಿಡಿದುಕೊಂಡು ಇಳಿದರು. ರಾಮುಸ್ವಾಮಿ "ಅವನೇ ಇಳಿಸ್ತಾನೆ, ಅವನ ಕೈಯಲ್ಲಿ ಕೊಡಿ, ಎಂದ. ನಂಜಮ್ಮನವರು "ಪರವಾಯಿಲ್ಲ, ಏನೂ ಭಾರ ಇಲ್ಲ." ಎಂದರು.

"ಜಟಕಾಗಾಡಿ ಬೇಕ ಸಾಮಿ?" ಎಂದು ಇಬ್ಬರು ಮೂವರು ಬಂದು ಕೇಳಿದರು. ರಾಮುಸ್ವಾಮಿ "ಬೇಕು ಸ್ವಲ್ಪ ತಡಿಯಪ್ಪ," ಎಂದು ಹೇಳಿ ತಂದೆಯವರಿಗಾಗಿ ಅತ್ತ ಇತ್ತ ನೋಡಿದ. ಅವರ ಸುಳಿವು ಕಾಣಲಿಲ್ಲ. "ಹಾಸನದಲ್ಲಿ ನಮ್ಮ ತಂದೇನ್ನ ನೋಡಿದಿರೇನು?" ಎಂದ. ಆ ಪ್ರಶ್ನೆ ತಾಯಿ ಮಗಳು ಇಬ್ಬರನ್ನೂ ಕೇಳಿದಹಾಗಿತ್ತು. ನಂಜಮ್ಮನವರು "ಇಲ್ಲ,

ಕಾಣಿಸಲಿಲ್ಲ. ಯಾಕೆ, ಇನ್ನೂ ಊರಿಗೆ ಬಂದಿಲ್ಲವೇನು?" ಎಂದು ಕೇಳಿದರು. ರಾಮಸ್ವಾಮಿ "ಇಲ್ಲ, ಈ ರೈಲಿನಲ್ಲೇ ಬರಬಹುದು ಅಂದ್ಕೊಂಡಿದ್ದೆ. ಬಂದ ಹಾಗೆ ಕಾಣಿಸೊಲ್ಲ. ಹ್ನು ಹೋಗೋಣ. ರಾತ್ರಿ ರೈಲಿನಲ್ಲಿ ಬರಬಹುದು" ಎಂದು ಕೆಳಗಿದ್ದ ಚೀಲ, ರೈಲುತಂಬಿಗೆಯನ್ನು ಕೈಗೆ ತೆಗೆದುಕೊಂಡ.

ಗಾಡಿಯವನನ್ನು ಗೊತ್ತು ಮಾಡಿಕೊಂಡ ಮೇಲೆ ಕೂಲಿಯವನು ಎಲ್ಲ ಸಾಮಾನನ್ನೂ ಸಾಗಿಸಿ ಗಾಡಿಗೆ ಹಾಕಿದ. ಒಂದು ಗಾಡಿ ತುಂಬ ಸಾಮಾನೇ ಆಯಿತು. ಇನ್ನೊಂದು ಗಾಡಿ ಮಾಡಲೇ ಬೇಕಾಯಿತು. ಪಕ್ಕದ ಗಾಡಿಯವನು "ಬರಲಾ ಸಾಮಿ?" ಎಂದು ಕೇಳಿದ. ರಾಮಸ್ವಾಮಿ ಆ ಗಾಡಿಯನ್ನೂ ಗೊತ್ತು ಮಾಡಿದ. ನಂಜಮ್ಮನವರು "ಸಾಮಾನಿನ ಜೊತೆ ನಾನು ಈ ಗಾಡೀಲಿ ಕೂತ್ಕೊಳ್ತೀನೆ; ನೀವಿಬ್ಬರೂ ಆ ಗಾಡಿಯಲ್ಲಿ ಕೂತ್ಕೊಳ್ಳಿ" ಎಂದರು. "ಬೇಡ ಬೇಡ, ನಾನು ಅಲ್ಲಿ ಕೂತ್ಕೊಳ್ತೀನಿ, ನೀವಿಬ್ಬರೂ ಈ ಗಾಡೀಲಿ ಕೂತ್ಕೊಳ್ಳಿ" ಎಂದು ರಾಮಸ್ವಾಮಿ ಹೇಳಿದರೂ ಕೇಳದೆ ನಂಜಮ್ಮನವರು ಸಾಮಾನು ತುಂಬಿದ ಗಾಡಿ ಹತ್ತಿದರು.

ಗೌರಿ ಗಂಡನ ಮುಖ ನೋಡಿದಳು. ರಾಮಸ್ವಾಮಿ "ಹ್ನು, ಹತ್ತು" ಎಂದು ನಕ್ಕ. ಗೌರಿಯೂ ನಗುತ್ತ ಗಾಡಿ ಹತ್ತಿದಳು.

ಮನೆ ತಲಪಿದಾಗ ಸರಿಯಾಗಿ ಎರಡೂಕಾಲು ಗಂಟೆ. ಸಾಮಾನನ್ನೆಲ್ಲ ಇಳಿಸಿಕೊಂಡು, ಬಾಡಿಗೆ ಕೊಟ್ಟು, ಗಾಡಿಗಳನ್ನು ಕಳಿಸಿದ್ದಾಯಿತು. ಮನೆ ಮತ್ತು ಆಗಿರುವ ಏರ್ಪಾಟು ಎಲ್ಲ ನೋಡಿ ತಾಯಿ ಮಗಳಿಗೆ ತುಂಬ ಸಂತೋಷವಾಯಿತು. ನಂಜಮ್ಮನವರು ಒಂದು ಸಾರಿ ಮನೆಯೆಲ್ಲ ಪರೀಕ್ಷೆ ಮಾಡಿ ಬಂದರು. "ನೀರು ಹೇಗೆ? ಸದಾ ಇರುತ್ತಂತೋ?" ಎಂದು ಕೇಳಿದರು. ರಾಮಸ್ವಾಮಿ ಹೆಂಡತಿಯ ಅಪ್ಪಣೆಯಂತೆ ತಿಂಡಿ ಬುಟ್ಟಿಯ ದಾರ ಬಿಚ್ಚುತ್ತ "ಇರುತ್ತೆ. ರಾತ್ರಿ ಒಂದು ಹೊತ್ತಿನಲ್ಲಿ ಮಾತ್ರ ಇರೊಲ್ಲ. ಪರವಾಯಿಲ್ಲ, ಈ ಮನೇಲಿ ನೀರಿನ ಸೌಕರ್ಯ ಬಹಳ ಚೆನ್ನಾಗಿದೆ" ಎಂದ. ಗೌರಿಯೂ ಒಮ್ಮೆ ಮನೆಯನ್ನೆಲ್ಲ ಪರಿಶೀಲಿಸಿಕೊಂಡು ಬಂದಳು. ಕೋಣೆ, ಅಡಿಗೆಮನೆ, ಬಚ್ಚಲು ಮನೆ ಎಲ್ಲ ನೋಡಿ ಮನಸ್ಸಿಗೆ ತೃಪ್ತಿಯಾಯಿತು.

ತಿಂಡಿಬುಟ್ಟಿಯ ದಾರ ಬಿಚ್ಚುವ ಹೊತ್ತಿಗೆ ಗೌರಿ ಬಂದು ಬುಟ್ಟಿಯ ಮುಚ್ಚಳ ತೆಗೆದಳು.

ರಾಮಸ್ವಾಮಿ "ನಿಮ್ಮ ಊಟ ಆಗಿದೆ ತಾನೆ?" ಎಂದ.

ಗೌರಿ "ಆಗಿದೆ. ನಿಮ್ಮದು ?" ಎಂದು ಕೇಳಿದಳು.

ರಾಮಸ್ವಾಮಿ "ಆಗಿದೆ" ಎಂದ.

ಗೌರಿ ಬುಟ್ಟಿಯಿಂದ ರವೆ ಉಂಡೆ, ಕೋಡುಬಳೆ, ಚಕ್ಕುಲಿ, ಹೊರಗೆ ತೆಗೆದಳು. ಆಗ ಅವಳಿಗೆ ತಟ್ಟೆಯ ಯೋಚನೆ ಬಂತು.

ಪಾತ್ರೆಯ ಚೀಲ ಬಿಚ್ಚಲು ಹೊರಟಳು. ದಾರದ ಗಂಟನ್ನು ಬಿಚ್ಚಲು ಸಾಧ್ಯವಾಗದೆ "ಕತ್ತರಿ ಇದೆಯಾ ?" ಎಂದು ಗಂಡನನ್ನು ಕೇಳಿದಳು. ಗಂಡ "ಇಲ್ಲ" ಎಂದು ತಾನೇ ದಾರ ಬಿಚ್ಚತೊಡಗಿದ. ಬಿಚ್ಚಿ, ಒಳಗಿದ್ದ ಪಾತ್ರೆಗಳನ್ನು ಒಂದೊಂದಾಗಿ ಹೊರಗೆ ತೆಗೆದಿಟ್ಟ. ಎಲ್ಲ ಹೊಸ ಹೊಸ ಪಾತ್ರೆ! ಅನ್ನದ ತಪ್ಪಲೆ, ಸಾರಿನ ಕೊಳದಪ್ಪಲೆ, ಮಜ್ಜಿಗೆ ಪಾತ್ರೆ, ನೀರಿನ ಕೊಳದಪ್ಪಲೆ, ಡಬರಿ, ಕಾಫಿಬೋಸಿ, ಸ್ನಾನದ ಬೋಸಿ, ಸೌಟು, ಪರಾತ, ಬಾಣಲೆ, ಜಾಲಿಸೌಟು, ಮೊಗಚೋಕೈ ಮೊದಲುಗೊಂಡು ಎಲ್ಲ ಪಾತ್ರೆಪಡಗಗಳನ್ನೂ ಗೌರಿ ತೌರುಮನೆಯಿಂದ ತಂದಿದ್ದಳು. ಚೀಲದ ತಳದಲ್ಲಿದ್ದ ನಾಲ್ಕು ತಟ್ಟೆ, ಕಂಚಿನ ಲೋಟಗಳನ್ನು ಗೌರಿ ಕೈಹಾಕಿ ಹೊರಗೆ ತೆಗೆದಳು. ಎಲ್ಲ ಪಾತ್ರೆಗಳನ್ನೂ ನೋಡಿ ರಾಮಸ್ವಾಮಿಗೆ ಆಶ್ಚರ್ಯವಾಯಿತು. ಗೌರಿಯ ಮುಖ ನೋಡಿ ನಕ್ಕ. ಗೌರಿ ತಟ್ಟೆ ಲೋಟ ತೆಗೆದುಕೊಂಡು ಬಚ್ಚಲುಮನೆಗೆ ಹೋಗಿ ತೊಳೆದುಕೊಂಡು ಬಂದಳು. ಮೂರು ತಟ್ಟೆಯಲ್ಲಿ ಎರಡೆರಡು ಕೋಡುಬಳೆ, ಚಕ್ಕುಲಿ, ಒಂದೊಂದು ರವೆ ಉಂಡೆ ಇಟ್ಟಳು. ನಂಜಮ್ಮನವರು "ನನಗೆ ಬೇಡಮ್ಮ, ನೀವಿಬ್ಬರೂ ತೊಗೊಳ್ಳಿ" ಎಂದರು. ಗೌರಿ, ರಾಮಸ್ವಾಮಿ ತಿಂಡಿ ತೆಗೆದು ಕೊಂಡು ನೀರು ಕುಡಿದರು.

ಪಾತ್ರೆಗಳನ್ನೆಲ್ಲ ತೊಳೆದು ಅವುಗಳನ್ನು ಅಡಿಗೆಮನೆಯ ನಾಗಂದಿಗೆಯ ಮೇಲೆ ಇಡಲು ಹೋದಾಗ, ಗೌರಿ ಹೆಡ್‌ಮಾಸ್ಟರ ಮನೆಯ ತಪ್ಪಲೆ, ಕೊಳದಪ್ಪಲೆ ಮುಂತಾದುವುಗಳನ್ನು ನೋಡಿದಳು. ರಾಮಸ್ವಾಮಿ "ಇವು

ನಮ್ಮ ಹೆಡ್‌ಮಾಸ್ಟರ ಮನೇದು" ಎಂದ. ಗೌರಿ "ಹಾಗಾದರೆ ಅವನ್ನೆಲ್ಲ ವಾಪಸು ಕೊಟ್ಟಿಡಿ, ಇನ್ಯಾಕೆ" ಎಂದು, ಕೆಳಗಿದ್ದ ಗೂಡು ನೋಡಿದಳು. ರಾಮಸ್ವಾಮಿ ಹೊಸದಾಗಿ ಕೊಂಡುಕೊಂಡು ಬಂದಿದ್ದ ನಾಲ್ಕು ಅಲ್ಯೂಮಿನಿಯಂ ಲೋಟ ಆ ಗೂಡಿನಲ್ಲಿ ಒಂದರೊಳಗೊಂದು ಕುಳಿತಿದ್ದುವು. ಗೌರಿ "ಇದೇನಿದು ಲೋಟ?" ಎಂದು ಅವುಗಳನ್ನು ಕೈಗೆ ತೆಗೆದುಕೊಂಡಳು. ರಾಮಸ್ವಾಮಿ "ಅವು ನಮ್ಮನೇದೇ. ನಾನು ಮೊನ್ನೆ ಕೊಂಡುಕೊಂಡು ಬಂದೆ" ಎಂದ. ಗೌರಿ "ಈಗ್ಯಾಕೆ ಇವು, ಲೋಟ ಇವೆಯಲ್ಲ" ಎಂದಳು. ಮಾರನೆಯ ದಿನ ಅವು ಕೋಣೆಯ ಗೂಡು ಸೇರಿದುವು.

* * * * *

ರಾತ್ರಿ ನಂಜಮ್ಮನವರು ಅನ್ನ, ಸಾರು, ಪಲ್ಯ, ಪಾಯಸ ಮಾಡುವ ಹೊತ್ತಿಗೆ ಒಂಬತ್ತು ಗಂಟೆಯಾಯಿತು. ಅಷ್ಟು ಹೊತ್ತಿಗೆ ಗೌರಿ ತಾವು ತಂದಿದ್ದ ಸಾಮಾನನ್ನೆಲ್ಲ ವಿಂಗಡಿಸಿ ಯಾವುಯಾವುದನ್ನು ಎಲ್ಲೆಲ್ಲಿ ಇಡಬೇಕೊ ಅಲ್ಲಲ್ಲಿ ಇಟ್ಟಿದ್ದಳು. ತಮ್ಮಿಬ್ಬರ ಹಾಸಿಗೆಗಳನ್ನು ಕೋಣೆಗೆ ಸಾಗಿಸಿ, ಎರಡು ಚಾಪೆ ಹಾಕಿ ಹಾಸಿಗೆಗಳನ್ನು ಹೇಗೆ ಹಾಸಬೇಕೆಂಬುದನ್ನೂ ಆಗಲೆ ನಿರ್ಧರಿಸಿದ್ದಳು. ರಾಮಸ್ವಾಮಿ ಒಂದು ರೌಂಡು ಹೋಗಿ ಎಂಟೂಮುಕ್ಕಾಲು ಗಂಟೆಗೆ ಮನೆಗೆ ಬಂದ.

ಅಡಿಗೆ ಮುಗಿದ ಮೇಲೆ ನಂಜಮ್ಮನವರು ಪಡಸಾಲೆಗೆ ಬಂದು, "ರಂಗಣ್ಣನವರು ಬಂದರೆ ಯಾವ ರೈಲಿನಲ್ಲಿ ಬರ್ತಾರೆ?" ಎಂದು ಕೇಳಿದರು. ರಾಮಸ್ವಾಮಿ "ಅಯ್ಯೋ, ನಾವು ಅವರಿಗೆ ಕಾಯೋಕಾಗೊಲ್ಲ, ರೈಲು ಬರೋದು ರಾತ್ರಿ ಹನ್ನೆರಡೂವರೆಗೆ. ಅವರು ಬಂದರೆ ಊಟ ಮಾಡಿಕೊಂಡೇ ಬರ್ತಾರೆ. ಅವರಿಗೇನು ಕಾಯೋದು ಬೇಡ. ಅಡಿಗೆ ಆಗಿದ್ದರೆ ನಮಗೆ ಬಡಿಸಿ, ನೀವೂ ಕೂತ್ಕೊಂಡ್ಬಿಡಿ" ಎಂದ.

ಮೂವರ ಊಟವೂ ಮುಗಿಯುವ ಹೊತ್ತಿಗೆ ಹತ್ತೂಕಾಲು ಗಂಟೆಯಾಯಿತು. ಕಸಮುಸುರೆ ಎಲ್ಲ ಮುಗಿಸಿ ಬಾಗಿಲು ಹಾಕಿಕೊಂಡು ತಾಯಿಗೆ ಹೇಳಿ, ಗೌರಿ ಎಲೆ ಅಡಕೆ ತಟ್ಟೆಯೊಡನೆ ಕೋಣೆಗೆ ಬಂದಾಗ ಹನ್ನೊಂದೂಮುಕ್ಕಾಲು ಗಂಟೆ ಆಗಿತ್ತು. ರಾಮಸ್ವಾಮಿ ತನ್ನ ಹಾಸಿಗೆಯ ಮೇಲೆ ಸುಮ್ಮನೆ ಮಲಗಿಕೊಂಡಿದ್ದ. ಆ ಹಾಸಿಗೆಯ ಪಕ್ಕದಲ್ಲಿ ಚಾಪೆಯ

ಮೇಲೆ, ಅವಳ ಹಾಸಿಗೆ ಸುರುಳಿ ಮಲಗಿತ್ತು. ಕೋಣೆಯ ಬಾಗಿಲನ್ನು ಹಾಕಿ, ಗೌರಿ ಹಾಸಿಗೆ ಉರುಳಿಸಿಕೊಂಡಳು. ಹಾಸಿದ್ದಾದ ಮೇಲೆ ಅದರ ಮೇಲೆ ಗಂಡನ ಹತ್ತಿರ ಕುಳಿತು ಎಲೆ ಅಡಕೆ ಮಡಿಸಲು ತಟ್ಟೆಗೆ ಕೈಹಾಕಿದಳು. ಗಂಡ ಎದ್ದು ಕುಳಿತು "ಸ್ವಲ್ಪ ತಡಿ" ಎಂದ. ಗೌರಿ "ಯಾಕೆ ?" ಎಂದು ಮುಖ ನೋಡಿದಳು. "ರೇಷನ್ ಮುಗಿದು ಹೋಗಿರೋದರಿಂದ ತುಂಬ ಬಾಡಿಬಿಟ್ಟಿದೆ ತುಟಿ" ಎಂದು ಬಾಚಿ ತಬ್ಬಿಕೊಂಡ. ಬಲಗೈಯಲ್ಲಿ ಎಳೆಯ ವೀಳೆದೆಲೆ ಹಿಡಿದ ಗೌರಿ ಹಾಗೆಯೇ ಗಂಡನನ್ನು ಅಪ್ಪಿಕೊಂಡಳು. ಎರಡು ಮುಖಗಳೂ ಒಂದಾದುವು........

"ತಿಂಡಿ ಯಾವತ್ತು ಮಾಡ್ತೀಯ ?"—ರಾಮಸ್ವಾಮಿ ಗೌರಿಯನ್ನು ಅಪ್ಪಿಕೊಂಡೇ ಕೇಳಿದ.

ಗೌರಿ "ಮಾಡಿಕೊಂಡೇ ಬಂದ್ಬಿಟ್ಟಿದೀನಲ್ಲ ?" ಎಂದಳು.

"ಎಲ್ಲಿಂದ ?"

"ಊರಿಂದ."

"ಯಾವಾಗ ?"

"ಇದೇನು ಹೀಗೆ ಕೇಳ್ತೀರಿ ? ಈ ಊರಿಗೆ ಬಂದ ಕೂಡಲೆ ಮೊದಲು ಅದೇ ಕೆಲಸ ಮಾಡಿದೀನಿ."

"ಏನು ಮಾಡಿದಿ ?"

"ಮಾಡಿಕೊಂಡು ಬಂದಿದ್ದ ರವೆ ಉಂಡೆ, ಕೋಡುಬಳೆ, ಚಕ್ಕುಲಿ ಎಲ್ಲ ತಟ್ಟೇಲಿಟ್ಟು ಕೊಟ್ಟಿದೀನಿ ?"

"ಅದೆಲ್ಲ ಯಾರು ಮಾಡಿದ್ದು ?"

"ನಾನೇ. ಅದಕ್ಕೋಸ್ಕರವೇ, ಮನೆಗೆ ಬಂದ ಕೂಡಲೆ ಮೊದಲು ಬುಟ್ಟಿ ಬಿಚ್ಚಿ, ತಿಂಡಿ ಹಂಚಿದ್ದು."

"ಆದರೆ ಇದು ನಿಮ್ಮನೇಲಿ ಮಾಡಿದ್ದಾಯ್ತು ! ನಮ್ಮನೇಲಿ ?"

"ಮಾಡೋಣ, ಅದಕ್ಕೇನು ? ಹಾಗಾದರೆ ನಾನು ಮಾಡ್ಕೊಂಡ್ಬಂದಿರೋದು ನೀವು ಪಾಸಾಗಿದ್ದಕ್ಕೆ ನನ್ನ ತಿಂಡಿ. ಈ ಮನೇಲಿ ಮಾಡೋದು ನೀವು ಪಾಸಾಗಿದ್ದಕ್ಕೆ ನಿಮ್ಮ ತಿಂಡಿ !"

"ಹಾಗಾದರೆ ಇದು ಯಾರ ಮನೆ?"

"ಅಯ್ಯೊ ತಪ್ಪಾಯ್ತೂಂದ್ರೆ, ಈ ಮನೆ ಅಲ್ಲ, ನಮ್ಮನೆ, ನಮ್ಮನೆ!"—ಗೌರಿಯ ತೋಳು ಬಿಗಿಯಿತು.

ಹೊರಗೆ ಬಾಗಿಲು ಸದ್ದಾಯಿತು.

ಗೌರಿ ದೂರ ಸರಿದಳು. ರಾಮಸ್ವಾಮಿ "ಯಾರದು?" ಎಂದು ಒಳಗೆ ಕುಳಿತುಕೊಂಡೇ ಕೇಳಿದ. ಹೊರಗೆ "ನಾನು" ಎಂದ ಹಾಗಾಯಿತು. ತಕ್ಷಣವೆ ರಾಮಸ್ವಾಮಿ ಎದ್ದು ಕೋಣೆಯ ಬಾಗಿಲು ತೆಗೆದು ಪಡಸಾಲೆಗೆ ಬಂದ. ಪಡಸಾಲೆಯಲ್ಲಿ ಮಲಗಿದ್ದ ನಂಜಮ್ಮನವರೂ ಎದ್ದು ದೀಪ ಹಾಕಿ, ಸರಸರ ಹಾಸಿಗೆ ಸುತ್ತಿಕೊಳ್ಳುತ್ತ "ರಂಗಣ್ಣೋರೂಂತ ಕಾಣುತ್ತೆ" ಎಂದು ಹಾಸಿಗೆಯೊಡನೆ, ಅಡಿಗೆಮನೆಗೆ ಹೋದರು.

* * * * *

ರಾಮಸ್ವಾಮಿ ಬಾಗಿಲು ತೆಗೆದ.

ತಂದೆ ಕೆಂಪು ಶಾಲಿನ ಒಂದು ಸುರುಳಿಯನ್ನು ಕಂಕುಳಲ್ಲಿಟ್ಟು ನಿಂತಿದ್ದರು.

"ಬಾ" ಎಂದು ಮಗ ಕರೆದ. ರಂಗಣ್ಣನವರು ಒಳಗೆ ಬಂದರು.

"ಈಗ ರೈಲು ಬಂತಾ?"

"ಹೌದು. ರೈಲು ಇವತ್ತು ಸರಿಯಾದ ಟೈಮಿಗೇ ಬಂತೂಂತ ಕಾಣುತ್ತೆ. ಈಗ ಹನ್ನೆರಡೂಮುಕ್ಕಾಲು ಇರಬಹುದು" ಎಂದು ಹೇಳುತ್ತ ತಂದೆ ಶಾಲಿನ ಸುರುಳಿಯನ್ನು ಚಾಪೆಯ ಮೇಲಿಟ್ಟು, ಕೋಟು ಬಿಚ್ಚಿದರು.

"ಮನೆ ಹೇಗೆ ಗೊತ್ತಾಯ್ತು?"

"ಗೊತ್ತಾಯ್ತು. ನೀನು ಇಂಥ ಕಡೆ ಅಂತ ಬರೆದಿದ್ಯಲ್ಲ; ಅದೂ ಅಲ್ಲದೆ ನಿಮ್ಮ ಸ್ಕೂಲು ಹುಡುಗಾನೇ ಒಬ್ಬ ಬಾಗೇಶಪುರದಿಂದ ಇಲ್ಲಿಗೆ ಬಂದ. ಅವನಿಗೆ ಗೊತ್ತಿತ್ತು ನಿನ್ನ ಮನೆ. ಇಲ್ಲೀವರೆಗೂ ಬಂದು ತೋರಿಸಿ ಹೋದ."

"ಮಧ್ಯಾಹ್ನವೇ ಬರ್ತೀಯಾಂತಿದ್ದೆ."

"ಎಲ್ಲಿ, ಆಗಲಿಲ್ಲ, ನಾನು ಹಳ್ಳೀಗ್ಹೋಗಿಬಿಟ್ಟಿದ್ದೆ. ಬಂದಿದ್ದೇ ಆರು ಗಂಟೆ. ಬಂದರೋ ಹೊಳೆನರಸೀಪುರದಿಂದ?"

"ಬಂದರು"

"ಯಾರ್‍ಯಾರು ಬಂದಿದಾರೆ?"

"ತಾಯಿ ಮಗಳು"

"ಯಾವ ರೈಲಿನಲ್ಲಿ ಬಂದರು?"

"ಮಧ್ಯಾಹ್ನದ ರೈಲಿನಲ್ಲಿ. ಏಳು, ಕೈಕಾಲು ತೊಳೆದುಕೊ. ಊಟ ಮಾಡ್ತೀಯಂತೆ."

"ಬೇಡಪ್ಪ ನಂದೂಟ ಆಗಿದೆ. ಹೇಗಿದ್ದರೂ ನಾಳೆ ಗುರುವಾರ, ದಿವಸ ಚೆನ್ನಾಗಿದೆ. ಗೃಹ ಪ್ರವೇಶದ ಶಾಸ್ತ್ರ ಮಾಡ್ತೀಯ, ಅಷ್ಟು ಹೊತ್ತಿಗೆ ಹೋದರೆ ಸಾಕು ಅಂತ, ಮಧ್ಯಾಹ್ನ ಹೊರಡೋ ಏರ್ಪಾಟಿಟ್ಟು ಕೊಳ್ಳಲಿಲ್ಲ."

"ಸರಿ. ನಾಳೇನೇ ಇಟ್ಟುಕೊಂಡಿದೀವಿ. ಆದರೆ ಇವತ್ತು ರಾತ್ರಿ ಅಡಿಗೆ ಆಗಲೇಬೇಕಲ್ಲ. ಒಂದನ್ನ ಸಾರು ಪಾಯಸ ಮಾಡಿಸಿದ್ದೆ. ಏಳು, ಸ್ವಲ್ಪ ಊಟ ಮಾಡು. ನಿನ್ನ ಪಾಲಿಂದು ಹಾಗೇ ಇದೆ."

"ಬೇಡಪ್ಪ, ನನಗೇನೂ ಬೇಡ, ಅದೂ ಅಲ್ಲದೆ, ಈಗೆಂಥ ಊಟ ಮಾಡೋದು. ಆಗಲೆ ಒಂದು ಗಂಟೆ ಸಮಯ. ಒಂದು ಲೋಟ ನೀರು ಕೊಟ್ಬಿಡು. ಹಾಸಿಗೆ ಉರುಳಿಸ್ಕೊಂಡು ಮಲಗ್ಬಿಡ್ತೀನಿ"

ರಾಮಸ್ವಾಮಿ "ಆಗಲಿ" ಎಂದು ಅಡಿಗೆಮನೆಯ ಬಾಗಿಲ ಹತ್ತಿರಕ್ಕೆ ಹೋದ. ಅಷ್ಟು ಹೊತ್ತಿಗಾಗಲೆ ಗೌರಿ ಕೋಣೆಯಿಂದ ಅಡಿಗೆ ಮನೆಗೆ ಹೋಗಿದ್ದಳು. ಒಂದು ಲೋಟ ನೀರು ತಂದು ಎದುರಿಗೆ ಹಿಡಿದಳು. ರಾಮಸ್ವಾಮಿ "ಕೊಡು" ಎಂದ. ಗೌರಿ ನೀರಿನ ಬಟ್ಟಲನ್ನು ತಂದು, ಮಾವನವರು ಕುಳಿತಿದ್ದ ಚಾಪೆಯ ಹತ್ತಿರ ಇಟ್ಟುಹೋದಳು. ರಂಗಣ್ಣನವರು ನೀರು ಕುಡಿದು, ಶಾಲು ಬಿಚ್ಚಿ ಅದರಲ್ಲಿದ್ದ ದುಪ್ಪಟಿಯನ್ನು ಚಾಪೆಯ ಮೇಲೆ ಹಾಸಿಕೊಂಡರು. ಅವರ ಹಾಸಿಗೆಯನ್ನೇ ನೋಡುತ್ತಿದ್ದ ರಾಮಸ್ವಾಮಿ "ಯಾಕಣ್ಣಾ, ಬೇರೆ ಹಾಸಿಗೆ ಇದೆ, ಕೊಡ್ತೀನಿ" ಎಂದು ತನ್ನ ಹಳೆಯ ಹಾಸಿಗೆ ತರಲು ಕೋಣೆಯ ಕಡೆ ಹೊರಟ. ರಂಗಣ್ಣನವರು "ಬೇಡ ಬೇಡಪ್ಪ. ತಲೇಗೆ ಏನಾದರೂ

ಒಂದು ಕೊಡು. ದಿಂಬೋ ಬಟ್ಟೇನೋ" ಎಂದು ಶಾಲು ಬಿಚ್ಚಿ ಹೊದೆಯಲು ಹವಣಿಸಿಕೊಂಡರು. ರಾಮಸ್ವಾಮಿ. ಸರಿಯಾದ ಒಂದು ದಿಂಬನ್ನೇ ತಂದುಕೊಟ್ಟ. ರಂಗಣ್ಣನವರು ಅದನ್ನು ತಲೆಗಿಟ್ಟುಕೊಂಡು ಮಲಗಿದರು.

* * * * *

ಗುರುವಾರದ ಶಾಸ್ತ್ರ ಮುಗಿದ ಕೂಡಲೆ ಮುದುಕ ಊರಿಗೆ ಹೊರಡುವ ಯೋಚನೆ ಮಾಡಿತು. ರಾಮಸ್ವಾಮಿ "ಒಂದು ವಾರವಾದರೂ ಇದ್ದು ಹೋಗು. ಮುಂದಿನ ಭಾನುವಾರ ನಂಜಮ್ಮನವರು ಊರಿಗೆ ಹೋಗ್ತಾರೆ. ಹಾಸನದ ವರೆಗೆ ಅವರಿಗೂ ಜೊತೆ ಆಗುತ್ತೆ" ಎಂದು ಎಷ್ಟೆಷ್ಟೋ ಹೇಳಿದ. ಆದರೆ ಅವರು ಕೇಳಲೇ ಇಲ್ಲ. "ನಮ್ಮ ಬೀದೀಲಿ ಮೊನ್ನೆ ರಾತ್ರಿ ಏನಾಯ್ತು ಗೊತ್ತೆ. ಆ ಅಕ್ಕಸಾಲಿ ನಂಜಪ್ಪನ ಮನೆಗೆ ಮೂರು ಜನ ನುಗ್ಗಿ ಒಂದು ಪಾವು ಬಂಗಾರ, ಎರಡು ಬೆಳ್ಳಿ ತಟ್ಟೆ; ಒಂದು ಡಾಬು, ನಗದು ಐವತ್ತು ರೂಪಾಯಿ ಎಲ್ಲ ಹೊಡಕೊಂಡ್ಹೋದರು. ಇನ್ನೂ ಪತ್ತೇನೇ ಆಗಿಲ್ಲ. ಈಗಿನ ಕಾಲದಲ್ಲಿ ಮನೆಗೆ ಬೀಗ ಹಾಕ್ಕೊಂಡು ಬರಲೇಬಾರದು. ನಮ್ಮ ಹತ್ತಿರ ಇರೋ ಆಸ್ತಿ ಅಷ್ಟರಲ್ಲೇ ಇದೆ. ಅನ್ನ ಮಾಡೋ ಪಾತ್ರೆ ಪಡಗಾನೇ ಕದ್ದುಕೊಂಡ್ಹೋದರೆ ಗತಿಯೇನು! ಆದ್ದರಿಂದ ನೀನು ನಂಗೆ ಬಲವಂತ ಮಾಡ್ಬೇಡ. ಯಾವಾಗ ಆಗುತ್ತೋ ಆವಾಗ ಬಂದೇ ಬರ್ತೀನಿ, ಇರ್ತೀನಿ" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ರಾಮಸ್ವಾಮಿ ಬಲವಂತ ಮಾಡಲಿಲ್ಲ.

ರಂಗಣ್ಣನವರು ಊಟ ಮುಗಿಸಿಕೊಂಡು ಒಂದು ಅರ್ಧ ಗಂಟೆ ವಿಶ್ರಾಂತಿ ತೆಗೆದುಕೊಂಡರು. ಸೊಸೆ ಗೌರಮ್ಮ ಮಾವನವರಿಗೆ, ಗಂಡನಿಗೆ ಬಿಸಿಬಿಸಿ ಕಾಫಿ ಮಾಡಿಕೊಟ್ಟಳು. ರಂಗಣ್ಣನವರು ಕಾಫಿ ತೆಗೆದುಕೊಂಡು, ತೋಳಿಗೆ ಕೋಟು ಸಿಕ್ಕಿಸಿಕೊಂಡರು. ಅವರು ಮನೆ ಬಿಟ್ಟು ಹೊರಡುವ ಹೊತ್ತಿಗೆ ಮೂರು ಗಂಟೆ ಆಗಿತ್ತು. ರಾಮಸ್ವಾಮಿಯೂ ತಂದೆಯೊಡನೆ ನಿಲ್ದಾಣದ ವರೆಗೆ ಹೊರಟ.

ದಾರಿಯಲ್ಲಿ, ಮತ್ತೊಮ್ಮೆ ತಂದೆಗೆ ಹೇಳಬೇಕೆನ್ನಿಸಿತು.

"ನೀನೂ ಇಲ್ಲಿಗೇ ಬಂದ್ಬಿಟ್ಟರೆ ಚೆನ್ನಾಗಿರುತ್ತೆ, ಆ ಭಾಗಾನೂ ಬಾಡಿಗೆಗೆ ಕೊಟ್ಟುಬಿಡಬಹುದು." ಎಂದ.

"ಅಯ್ಯೊ ಅಯ್ಯೊ, ಈಗ ಒಂದು ಭಾಗ ಕೊಟ್ಟಿರೋದೇ ಸಾಕಾಗಿದೆ. ಮೊನ್ನೆ ಆರನೇ ತಾರೀಕು ನಂಗೂ ಚಂದ್ರಶೇಖರಯ್ಯಂಗೂ ವ್ಯಾಜ್ಯಾನೇ ನಡೆದ್ಹೋಯ್ತು."

"ಯಾಕೆ ?"

"ಗೊತ್ತೇ ಇದೆಯಲ್ಲ. ಬಾಡಿಗೆ ಐದು ರೂಪಾಯಿ ಕೊಟ್ಟರು. ಇನ್ನೈದು ರೂಪಾಯನ್ನ ಹನ್ನೆರಡನೇ ತಾರೀಕಾದ ಮೇಲೆ ಕೊಡ್ತೀನೀಂದರು. ನಂಗೆ ರೇಗಿಹೋಯ್ತು. ಇಲ್ಲ ಆಗೊಲ್ಲ. ನನಗೆ ಬೇಕು, ಈಗಲೇ ಕೊಟ್ಬಿಡಿ ಅಂದೆ; ಸರಿ ಮಾತಿಗೆ ಮಾತು. ಈ ಬಾಡಿಗೆಯೋರ ಸಹವಾಸಾನೇ ಹೀಗೆ. ಆ ಭಾಗ ಖಾಲಿ ಆದರೆ ಈಗ ಹದಿನೈದು ರೂಪಾಯಿ ಕೊಡೋರಿದಾರೆ. ಬಿಡೂಂದರೆ ಇತ್ತಲಾಕಡೆ ಬಿಡೋದೂ ಇಲ್ಲ, ಬಾಡಿಗೇನಾದರೂ ಸಲೀಸಾಗಿ ಕೊಡ್ತಾನೇಂದರೆ ಅದೂ ಇಲ್ಲ. ಈಚೀಚೆಗೆ ತುಂಬ ಹಿಂಸೆ ಮಾಡ್ತಾ ಇದಾನೆ. ಇಂಥದರಲ್ಲಿ ಈ ಭಾಗಾನೂ ಬಾಡಿಗೆಗೆ ಕೊಡೂಂತೀಯಲ್ಲ. ಬೇಡಪ್ಪ ಬೇಡ. ಬಾಡಿಗೆಯೋರ ಸಹವಾಸವೇ ಬೇಡ"

ರಾಮಸ್ವಾಮಿ ಸುಮ್ಮನಾದ.

ರೈಲು ನಿಲ್ದಾಣ ಬಂತು. ಮಗನೇ ಮುಂದೆ ಹೋಗಿ ಹಾಸನಕ್ಕೆ ಒಂದು ಟಿಕೀಟು ಕೊಂಡುತಂದು ತಂದೆಯ ಕೈಯಲ್ಲಿಟ್ಟ.

ರಂಗಣ್ಣನವರು "ಗಂಟೆ ಎಷ್ಟು ನೋಡು" ಎಂದರು. ರಾಮಸ್ವಾಮಿ ಸ್ಟೇಷನ್ ಮಾಸ್ಟರ ಕಚೇರಿಯಲ್ಲಿದ್ದ ದೊಡ್ಡ ಗಡಿಯಾರ ನೋಡಿದ. ಮೂರೂ ನಲವತ್ತಾಗಿತ್ತು. ಆಗಲೆ ರೈಲು ಬಂದು ನಿಂತು ಬಹಳ ಹೊತ್ತಾಗಿತ್ತು.

ರಂಗಣ್ಣನವರು ಹಾಗೂ ಹೀಗೂ ನೋಡಿ ಒಂದು ಗಾಡಿ ಹತ್ತಿ ಕುಳಿತರು. ರಾಮಸ್ವಾಮಿ ತಂದೆ ಕುಳಿತಿದ್ದ ಕಿಟಕಿಯ ಹತ್ತಿರದಲ್ಲಿಯೇ ನಿಂತುಕೊಂಡ. ತಂದೆಗೆ ಮತ್ತೊಮ್ಮೆ "ಒಂದೆರಡು ದಿನ ಇದ್ಬಿದ್ದರೆ

ಚೆನ್ನಾಗಿತ್ತು" ಎಂದು ಹೇಳೋಣ ಅನ್ನಿಸಿತು. ಆದರೆ ತಡೆದುಕೊಂಡ; ಮಾತಾಡಲಿಲ್ಲ, ಸುಮ್ಮನೆ ಮುಖ ನೋಡಿದ. ರಂಗಣ್ಣನವರೂ ಆಗ ಏಕೋ ಮಗನ ಮುಖ ನೋಡಿದರು. ಅವರು ಎಂದೂ ಹಾಗೆ ನೋಡಿರ ಲಿಲ್ಲ.

ರೈಲು ಹೊರಟಿತು.

* * * * *

ಗೌರಿ ಊರಿಗೆ ಬಂದು ಮೂರು ತಿಂಗಳಾಗಿತ್ತು. ಆಗಲೆ ಅವಳು ಚೆನ್ನಾಗಿ ಪಳಗಿಕೊಂಡು ಮನೆಯನ್ನು ತುಂಬ ಅಚ್ಚುಕಟ್ಟಾಗಿಟ್ಟು ಕೊಂಡಿದ್ದಳು; ರಾಮಸ್ವಾಮಿಯ ಅಚ್ಚುಮೆಚ್ಚಿನ ಮಡದಿಯಾಗಿ ಬಿಟ್ಟಿದ್ದಳು. ಒಂಬತ್ತು ದಿನದ ದಸರಾ ರಜಾ ಮುಗಿಯುತ್ತಾ ಬಂದಿತ್ತು. ಬೆಳಗ್ಗೆ, ಒಂದು ದಿನ ಕಾಫಿ ಕುಡಿಯುವಾಗ ರಾಮಸ್ವಾಮಿ "ಇವತ್ತು ಯಾವ ವಾರ ಹೇಳು?" ಎಂದು ಹೆಂಡತಿಯನ್ನು ಕೇಳಿದ. ಗೌರಿ ಕ್ಯಾಲೆಂಡರ್ ಕಡೆ ನೋಡಿ "ಗುರುವಾರ" ಎಂದಳು. "ಮುಂದಿನ ವಾರ ಈ ದಿನ ಎಲ್ಲಿರ್ತೀವಿ ಹೇಳು?" ಎಂದು ಮತ್ತೆ ಗಂಡ ಕೇಳಿದ. ಹೆಂಡತಿ "ಮೈಸೂರಲ್ಲಿ" ಎಂದು ನಕ್ಕಳು.

ರಾಮಸ್ವಾಮಿ "ನಿನ್ನ ಕರಕೊಂಡ್ಹೋಗಲ್ಲ, ನಾನೊಬ್ಬನೇ ಹೋಗೋದು. ಸುಮ್ನೆ ರೈಲು ಛಾರ್ಜು ದಂಡ. ನೀನ್ಯಾಕೆ" ಎಂದ.

"ಊಹ್ಞೂ. ನಾನು ನೋಡ್ಬಾರ್ದೇನೊ ಕಾನ್ವೊಕೇಷನ್ನ?" ಎಂದು ಗೌರಿ ಕೇಳಿದಳು.

"ನೀನೇನು ನೋಡೋದು, ನಿಂಗೇನು ಗೊತ್ತಾಗುತ್ತೆ?" ಎಂದ ರಾಮಸ್ವಾಮಿ.

"ಹ್ಞೂ ಹಾಗೆ ಮಾಡಿ, ನಿಮ್ಮ ಮಾಧೂರಾಯರು ನಿಮ್ಮನ್ನ ಸುಮ್ಮನೆಬಿಡ್ತಾರಾ, ಕಿವಿ ಕಿತ್ತ್ಹಾಕಿಬಿಡ್ತಾರೆ, ಅಷ್ಟೆ" ಎಂದು ಗೌರಿ ಹೆದರಿಸಿದಳು.

ರಾಮಸ್ವಾಮಿ ನಗುತ್ತಾ ಹೊರಗೆ ಹೊರಟ.

ಅವನು ಕಾನ್ವೊಕೇಷನ್ನಿಗೆ ಒಬ್ಬನೇ ಹೋಗುವ ಯೋಚನೆ

ಮಾಡಿರಲಿಲ್ಲ. ಇಬ್ಬರೂ ಹೋಗಬೇಕೆಂದೇ ತೀರ್ಮಾನಿಸಿದ್ದ. 'ಇಬ್ಬರೂ ಬರುತ್ತೇವೆ' ಎಂದು ಮಾಧವರಾಯರಿಗೆ ಮೂರು ದಿನಗಳ ಹಿಂದೆಯೇ ಕಾಗದ ಹಾಕಿದ್ದ.

ಆದರೆ?

ನಗುತ್ತಾ ಹೋದ ರಾಮುಸ್ವಾಮಿ ಮರುಕ್ಷಣವಲ್ಲೇ ಅಳುತ್ತ ಮನೆಗೆ ಬಂದ.

ಗೌರಿಗೆ ಗಾಬರಿಯಾಯಿತು; "ಇದೇನಿದು!'' ಎಂದಳು.

"ಅಣ್ಣಾ ಹೋಗಿಬಿಟ್ಟ!'' ಎಂದು ರಾಮುಸ್ವಾಮಿ ಚಾಪೆಯ ಮೇಲೆ ಕುಸಿದು ಕುಳಿತುಬಿಟ್ಟ.

"ಅಯ್ಯೋ! ಯಾರು ಹೇಳಿದರು ?" ಗೌರಿ ಕಾತರದಿಂದ ಕೇಳಿದಳು.

ರಾಮುಸ್ವಾಮಿ "ನೋಡು" ಎಂದು ಕೈಯಲ್ಲಿದ್ದ ತಂತಿಯನ್ನು ಚಾಪೆಯ ಮೇಲೆ ಹಾಕಿದ.

ತಮ್ಮ ಮನೆಯ ಒಂದು ಭಾಗದಲ್ಲಿ ಬಾಡಿಗೆಗಿದ್ದ ಚಂದ್ರಶೇಖರಯ್ಯನವರು ತಂತಿ ಕಳಿಸಿದ್ದರು. ಗೌರಿ ತನಗೆ ಇಂಗ್ಲಿಷ್ ಚೆನ್ನಾಗಿ ಬಾರದಿದ್ದರೂ ಅದನ್ನು ಬಿಚ್ಚಿ ನೋಡಿಕೊಂಡಳು. ಎದುರಿಗೆ ಗಂಡ ದಿಕ್ಕು ತೋಚದೆ ಎಳೆಯ ಮಗುವಿನಂತೆ ಅಳುತ್ತ ತಲೆಯ ಮೇಲೆ ಕೈಯಿಟ್ಟುಕೊಂಡು ಕುಳಿತುಬಿಟ್ಟಿದ್ದ. ಹೆಂಗಸಾದರೂ ತಾನೇ ಸಮಾಧಾನ ತಂದುಕೊಳ್ಳಬೇಕಾಯಿತು; ಗಂಡನನ್ನು ಸಮಾಧಾನ ಮಾಡಬೇಕಾಯಿತು.

"ಏಳಿ, ಹೀಗೆ ಅಳ್ತಾ ಕೂತ್ಬಿಟ್ರೆ?" ಎಂದು ಭುಜ ಮುಟ್ಟಿ ಹೇಳಿದಳು.

ರಾಮುಸ್ವಾಮಿ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದ. ಕಂಬನಿ ಕಣ್ಣು ತುಂಬಿ ಹರಿಯುತ್ತಿತ್ತು. ಆದರೆ ಒಳಗಿದ್ದ ವಿವೇಕ 'ಏಳು, ಅಳ್ತಾ ಕೂತರೆ ಮುಂದಿನ ಕೆಲಸ?' ಎಂದು ಹೊಡೆದೆಬ್ಬಿಸಿತು; ಎದ್ದ.

"ನನಗೆ ಏನೂ ತೋಚೋದೇ ಇಲ್ಲವಲ್ಲ ಗೌರಿ!?"

"ಏನು ಮಾಡೋದು, ತಡ್ಕೊಳ್ಬೇಕು."

ರಾಮಸ್ವಾಮಿ ಕೋಣೆಗೆ ಎರಡು ಬಾರಿ ಹೋಗಿಬಂದ. ಕೈಕಾಲೇ ಓಡದಂತಾಯಿತು. "ಕೈಕಾಲೇ ಇಲ್ಲದಂತಾಗಿದೆ ಗೌರಿ" ಎಂದ. ಗೌರಿ "ಸಮಾಧಾನ ತಂದ್ಕೊಳ್ಳಿ. ಹೀಗೆ ಕೂತರೆ ಮುಂದಿನ್ಕೆಲ್ಸ?" ಎಂದಳು.

ರಾಮಸ್ವಾಮಿಗೆ ಏನೂ ತೋಚದೆ "ಹೆಡ್‌ಮಾಸ್ಟರ ಮನೆಗೆ ಹೋಗಿಬರ್ತೀನಿ, ತಡಿ" ಎಂದು ಹೊರಗೆ ಹೊರಟುಹೋದ.

ಹೆಡ್‌ಮಾಸ್ಟರ್ ರಾಮರಾಯರು ಆಗತಾನೇ ಸ್ನಾನ ಮುಗಿಸಿಕೊಂಡು ಅಂಗಿ ಹಾಕಿಕೊಳ್ಳುತ್ತಿದ್ದರು. ರಾಮಸ್ವಾಮಿಯ ಮುಖ ನೋಡಿ ಅವರಿಗೆ ಗಾಬರಿಯಾಯಿತು. "ಏನು ಮಿಸ್ಟರ್ ರಾಮಸ್ವಾಮಿ?" ಎಂದರು. ಉತ್ತರ ಹೇಳುವ ಶಕ್ತಿ ರಾಮಸ್ವಾಮಿಯ ಬಾಯಿಗೆ ಇರಲಿಲ್ಲ. ಗಂಟಲಿಗೆ ಬಿರಡೆ ಹಾಕಿ ಒತ್ತಿದಂತಿತ್ತು. "ನಮ್ಮ ತಂದೆ...." ಎಂದು ಕೈಯಲ್ಲಿದ್ದ ತಂತಿಯನ್ನು ಅವರ ಕೈಗೆ ಕೊಟ್ಟ. ರಾಮರಾಯರು ಅದನ್ನು ಓದಿಕೊಂಡರು. ಬಹಳ ದುಃಖವಾಯಿತು. ತಂದೆಯನ್ನು ಕಳೆದುಕೊಂಡು ಎದೆ ಒಡೆದ ಮಗ ಎದುರಿಗೆ ನಿಂತಿರುವಾಗ ಹೇಳಬಾರದೆಂದುಕೊಂಡರೂ ಬಾಯಿ "ಛೆ, ಎಂಥ ಕೆಲಸ ಆಯಿತು!" ಎಂದಿತು. ಆದರೆ ತಕ್ಷಣವೆ ರಾಮಸ್ವಾಮಿಗೆ ಸಮಾಧಾನ ಹೇಳಿ ಮುಂದಿನ ಕೆಲಸಗಳಿಗೆ ಅವರು ತುಂಬ ನೆರವಾದರು. ಕೂಡಲೆ "ಬನ್ನಿ ರಾಮಸ್ವಾಮಿ" ಎಂದು ಅವನನ್ನು ಕರೆದುಕೊಂಡು ಬಸ್ ಸ್ಟ್ಯಾಂಡಿನ ಕಡೆಗೆ ಹೊರಟರು. ಹತ್ತು ಗಂಟೆಗೆ ಒಂದು ಬಸ್ಸು ಹಾಸನಕ್ಕೆ ಹೊರಡುತ್ತದೆ. ಎಂದು ತಿಳಿಯಿತು. "ಸರಿ. ಆದರಲ್ಲೇ ಹೊರಡಿ. ಒಂದು ಗಂಟೆ ಅವಕಾಶ ಇದೆ. ಬೇಗ ಬೇಗ ಬಟ್ಟೆಬರೆ ತೊಗೊಂಡು ನಿಮ್ಮ ಹೆಂಡತೀನ್ನೂ ಕರಕೊಂಡು, ಮನೆಗೆ ಬೀಗ ಹಾಕಿ ಬಂದುಬಿಡಿ. ನಾನೂ ಬರ್ತೀನಿ ಬಸ್‌ಸ್ಟ್ಯಾಂಡ್ ವರೆಗೆ" ಎಂದು ರಾಮರಾಯರು ಹೇಳಿದರು. ರಾಮಸ್ವಾಮಿ 'ಆಗಲಿ' ಎಂದು ಬೇಗಬೇಗ ಮನೆಯ ಕಡೆಗೆ ಹೊರಟ.

ಬೇಕಾದ ಒಟ್ಟೆಬರೆಗಳನ್ನು ಸುತ್ತಿ ಒಂದು ಪುಟ್ಟ ಹಾಸಿಗೆ ಮಾಡಿಕೊಂಡುದಾಯಿತು; ಪೆಟ್ಟಿಗೆಯಲ್ಲಿದ್ದ ಹದಿನೈದು ರೂಪಾಯಿಯನ್ನು ಕೈಗಾವಲಿಗೆ ಇರಲಿ, ಎಂದು ಜೇಬಿಗೆ ಸೇರಿಸಿದ್ದಾಯಿತು. ಗೌರಿ

ಮನೆಯ ಬಾಗಿಲುಗಳನ್ನೆಲ್ಲ ಸರಿಯಾಗಿ ಹಾಕಿಕೊಂಡು ಬಂದಳು. ಅವಳು ಪಕ್ಕದ ಮನೆಯ ಶಂಕರಮ್ಮನವರಿಗೆ "ನಾವು ಬರೋ ವರೆಗೂ ದಯವಿಟ್ಟು ಸ್ವಲ್ಪ ಮನೇ ಕಡೆ ನೋಡಿಕೊಳ್ಳಿರಿ" ಎಂದು ಹೇಳಿ ಬರುವ ಹೊತ್ತಿಗೆ ರಾಮುಸ್ವಾಮಿ ಹಾಸಿಗೆಯನ್ನು ಹೊರಗೆ ತಂದು ಬೀದಿಯ ಬಾಗಿಲಿಗೆ ಬೀಗ ಹಾಕಿದ.

ಹೆಡ್‌ಮಾಸ್ಟರ್ ರಾಮರಾಯರ ಮನೆಯ ಮುಂದೇ ಹಾದು ಬಸ್ ಸ್ಟ್ಯಾಂಡಿಗೆ ಹೋಗಬೇಕಾಗಿತ್ತು. ಅವರ ಮನೆಯ ಹತ್ತಿರ ಬಂದಾಗ, ಅವರು ಬಾಗಿಲಲ್ಲಿಯೇ ನಿಂತು, ಇವರಿಗಾಗಿ ಕಾಯುತ್ತಿದ್ದರು. "ಬನ್ನಿ ಒಂದು ನಿಮಿಷ" ಎಂದು ರಾಮುಸ್ವಾಮಿಯನ್ನು ಒಳಗೆ ಕರೆದರು. ರಾಮುಸ್ವಾಮಿ ಹಾಸಿಗೆಯನ್ನು ಜಗಲಿಯ ಮೇಲಿಟ್ಟು ಒಳಗೆ ಹೋದ. ಗೌರಿಯೂ ಗಂಡನ ಹಿಂದೆ ಹೋದಳು. ರಾಮರಾಯರ ಹೆಂಡತಿ ಅಡಿಗೆ ಮನೆಯ ಬಾಗಿಲಲ್ಲಿ ನಿಂತಿದ್ದರು. ರಾಮರಾಯರು ಷರಟಿನ ಜೇಬಿನಲ್ಲಿದ್ದ ಹದಿನೈದು ರೂಪಾಯಿ ತೆಗೆದು "ಇದನ್ನು ಇಟ್ಟುಕೊಂಡಿರಿ; ಸ್ವಲ್ಪ ಸಹಾಯ ಆದೀತು" ಎಂದು ಮುಂದೆ ಹಿಡಿದರು. ಅದನ್ನು ತೆಗೆದು ಕೊಳ್ಳಲು ರಾಮುಸ್ವಾಮಿಗೆ ಸ್ವಲ್ಪ ಸಂಕೋಚವಾಯಿತು. ತಲೆಯೆತ್ತಿ ಅವರ ಮುಖ ನೋಡಿದ. "ಇರಲಿ, ಇಟ್ಟುಕೊಂಡಿರಿ. ಆಮೇಲೆ ಕೊಟ್ಟರಾಯಿತು" ಎಂದು ಅವರು ಮತ್ತೆ ಹೇಳಿ, ನೋಟಿನ ಕೈಯನ್ನು ಇನ್ನೂ ಮುಂದೆ ನೀಡಿದರು. ರಾಮುಸ್ವಾಮಿ ತೆಗೆದುಕೊಳ್ಳಬೇಕಾಯಿತು. ಗೌರಿ ಸುಮ್ಮನೆ ತಲೆ ತಗ್ಗಿಸಿಕೊಂಡು ಬಾಗಿಲ ಹತ್ತಿರ ನಿಂತಿದ್ದಳು. ರಾಮರಾಯರ ಹೆಂಡತಿ "ಬೆಳಗ್ಗೆ ಏನೂ ತೆಗೆದುಕೊಂಡಿಲ್ಲವೇನೊ. ಸ್ವಲ್ಪ ಉಪ್ಪಿಟ್ಟಿದೆ. ಕೊಡ್ತೀನಿ" ಎಂದು ಅಡಿಗೆ ಮನೆಯೊಳಗೆ ಹೋದರು. ರಾಮುಸ್ವಾಮಿ "ಬೇಡ ತಾಯಿ, ಈಗೇನೂ ಬೇಡ ತಿನ್ನೋಕಾಗೊಲ್ಲ. ಸುಮ್ನೆ ಯಾಕೆ!" ಎಂದ. ಗೌರಿಯೂ "ಬೇಡ ಬೇಡ" ಎಂದಳು. ತಂದಿದ್ದ ಎರಡು ತಟ್ಟೆ ಉಪ್ಪಿಟ್ಟನ್ನು ರಾಮರಾಯರ ಹೆಂಡತಿ ಹಾಗೆಯೇ ವಾಪಸು ತೆಗೆದುಕೊಂಡುಹೋಗಬೇಕಾಯಿತು.

ರಾಮುಸ್ವಾಮಿ "ನಾಡಿದ್ದಿಂದ ಸ್ಕೂಲು. ನಾನು ರಜಾಕ್ಕೆ ಬರೆದ್ಕೊಂಡಿಲ್ಲವಲ್ಲ ಸಾರ್?" ಎಂದ.

ರಾಮರಾಯರು "ಪರವಾಯಿಲ್ಲ. ಊರಿಂದ ಬರೆದು ಹಾಕಿ. ಮೊದಲು ನಡೀಬೇಕಾದ ಕೆಲಸ ನಡೀಲಿ. ಹೋಗಿಬನ್ನಿ" ಎಂದರು. ಬಸ್ ಸ್ಟ್ಯಾಂಡಿನ ವರೆಗೂ ಬಂದು, ಇಬ್ಬರನ್ನೂ ಬಸ್ಸಿನಲ್ಲಿ ಕೂಡಿಸಿದರು.

ಬಸ್ ಹತ್ತುಗಂಟೆಗೆ ಹೊರಡಲಿಲ್ಲ. ಪೋಲಿಸ್ ಸಬ್ ಇನ್‌ಸ್ಪೆಕ್ಟರಿಗಾಗಿ ಕಾಯುತ್ತಾ ನಿಂತುಕೊಂಡಿತು. ರಾಮಸ್ವಾಮಿಗೆ ನಿಮಿಷನಿಮಿಷವೂ ಗಂಟೆಗಂಟೆಯಾಗಿಬಿಟ್ಟಿತ್ತು. ಬೇಗ ಹಾಸನ ತಲಪಿದರೆ ಸಾಕಪ್ಪಾ ಎನ್ನಿಸಿತ್ತು. ಎರಡು ಮೂರು ಸಲ ಡ್ರೈವರನ್ನು ಕುರಿತು "ಎಷ್ಟು ಹೊತ್ತಿಗಪ್ಪ, ಹೊರಡೋದು ?" ಎಂದು ವಿಚಾರಿಸಿದ. ಡ್ರೈವರ್ "ಈಗ ಈಗ" ಎಂದೇ ಅರ್ಧಗಂಟೆ ಕಳೆದ. ಸಬ್ ಇನ್‌ಸ್ಪೆಕ್ಟರ್ ಸಾಹೇಬರು ಬಂದು ಮುಂದಿನ ಆಸನವನ್ನು ಆಕ್ರಮಿಸಿಕೊಂಡ ಮೇಲೆ, ಬಸ್ಸು ಸರಿಯಾಗಿ ಹತ್ತೂವರೆ ಗಂಟೆಗೆ ಹೊರಟಿತು.

ಹಾಸನ ತಲಪಿದಾಗ ಹನ್ನೆರಡೂವರೆ ಗಂಟೆ.

* * * * *

ರಾಮಸ್ವಾಮಿ ಮತ್ತು ಗೌರಿ ಗಾಡಿಯಲ್ಲಿ ಕುಳಿತು ಮನೆ ತಲಪಿದಾಗ ಜಗಲಿಯ ಮೇಲೆ ಚಂದ್ರಶೇಖರಯ್ಯನವರು ನಿಂತಿದ್ದರು. ಬೀದಿಯ ಬಾಗಿಲು ಸಂಪೂರ್ಣವಾಗಿ ತೆರೆದಿತ್ತು. ರಾಮಸ್ವಾಮಿ ಹಾಸಿಗೆಯೊಡನೆ ಇಳಿದ. ಚಂದ್ರಶೇಖರಯ್ಯನವರು ಗಾಡಿಯ ಹತ್ತಿರ ಬಂದರು. "ಏನು ಚಂದ್ರಶೇಖರಯ್ಯನೋರೆ, ಹೀಗಾಗ್ಹೋಯ್ತಲ್ಲ" ಎಂದು ರಾಮಸ್ವಾಮಿ ಹಾಸಿಗೆಯನ್ನು ಕೆಳಗೆ ಹಾಕಿ, ಕೈವಸ್ತ್ರದಲ್ಲಿ ಮುಖ ಮುಚ್ಚಿಕೊಂಡು ಅಲ್ಲೇ ನಿಂತುಬಿಟ್ಟ. ಗೌರಿ ಹಾಸಿಗೆಯನ್ನು ಕೈಗೆ ತೆಗೆದುಕೊಂಡಳು. ಚಂದ್ರಶೇಖರಯ್ಯನವರು ಸಮಾಧಾನ ಮಾಡಿ ರಾಮಸ್ವಾಮಿಯನ್ನು ಪಡಸಾಲೆಗೆ ಕರೆದುಕೊಂಡು ಬಂದರು. ಅಲ್ಲಿ ಅಚ್ಚಂಭಟ್ಟರ ತಮ್ಮ ನಾರಾಯಣ ರಂಗಣ್ಣನವರ ಮೃತದೇಹದ ಹತ್ತಿರ ಕುಳಿತಿದ್ದ. ರಾಮಸ್ವಾಮಿ ಬೇಗ ಹೋಗಿ ದೇಹದ ಮೇಲಿದ್ದ ಬಟ್ಟೆಯನ್ನು ಓರೆ ಮಾಡಿ ಮುಖ ನೋಡಿದ. ತಂದೆಯವರ ಮುಖ ತುಂಬ ವಿಕಾರವಾಗಿತ್ತು. ನೋಡಲಾರದೆ ಬಟ್ಟೆಯನ್ನು ಮತ್ತೆ ಮೇಲೆಳೆದು, ತಲೆಯ ಮೇಲೆ ಕೈ ಹೊತ್ತುಕೊಂಡು ಅಲ್ಲಿಯೇ ಕುಳಿತುಬಿಟ್ಟ.

ರಾತ್ರಿ ಒಂದು ಹೊತ್ತಿನಲ್ಲಿ ರಂಗಣ್ಣನವರ ಮನೆಯಲ್ಲಿ ಯಾರೋ ಗಟ್ಟಿಯಾಗಿ ಕೂಗಿದ ಹಾಗಾಯಿತಂತೆ. ಚಂದ್ರಶೇಖರಯ್ಯನವರು ಹೊರಗೆ ಬಂದು ರಂಗಣ್ಣನವರ ಮನೆಯ ಬೀದಿಯ ಬಾಗಿಲ ಹತ್ತಿರ ನಿಂತುಕೊಂಡು "ರಂಗಣ್ಣೋರೆ, ರಂಗಣ್ಣೋರೆ" ಎಂದು ಕೂಗಿದರಂತೆ. ರಂಗಣ್ಣನವರು ಮಾತಾಡಲೇ ಇಲ್ಲವಂತೆ. ನಿದ್ದೆಗಣ್ಣಲ್ಲಿ ಅವರೇ ಕಿರಿಚಿರಬಹುದು, ಎಂದುಕೊಂಡು ಚಂದ್ರಶೇಖರಯ್ಯನವರು ಹೋಗಿ ಮಲಗಿಕೊಂಡರಂತೆ. ಆದರೆ ಬೆಳಗ್ಗೆ ಆರುಗಂಟೆಗೇ ಏಳುತ್ತಿದ್ದ ರಂಗಣ್ಣನವರ ಸುಳಿವೇ ಇಲ್ಲದೆ ಅನುಮಾನವಾಗಿ, ಚಂದ್ರಶೇಖರಯ್ಯನವರು ಸುಮಾರು ಏಳುಗಂಟೆಯ ಹೊತ್ತಿಗೆ ಪುನಃ ಬಾಗಿಲು ತಟ್ಟಿ ಕೂಗಿದರಂತೆ. ಉತ್ತರ ಬರಲಿಲ್ಲ ಅಗಳಿ ಹಾಕಿದ ಹಾಗೆಯೇ ಇತ್ತು. ಕೊನೆಗೆ ಏನೋ ಎಂತೋ ಎಂದು, ಎದುರುಮನೆಯ ಲಾಯರ್ ನಂಜುಂಡಯ್ಯನವರನ್ನು ಕರೆದುಕೊಂಡು ಬಂದು "ಏನು ಮಾಡೋಣ? ಹೇಳಿ" ಎಂದು ಕೇಳಿದರಂತೆ. ಅವರು "ಅನುಮಾನವಾಗಿದ್ದ ಮೇಲೆ ಬಾಗಿಲು ತೆಗಸಿ. ಅದಕ್ಕೇನು ಪರವಾಯಿಲ್ಲ. ನಾವೆಲ್ಲ ಇದೀವಿ. ಅವರ ನಂಟರಿಷ್ಟರು ಹತ್ತಿರ ಯಾರೂ ಇಲ್ದೇ ಇರೋವಾಗ ನೀವು ತೆಗಸಬಹುದು" ಎಂದು ಸಲಹೆ ಮಾಡಿದರಂತೆ. ಅವರ ಮಾತಿನ ಮೇಲೆ ಚಂದ್ರಶೇಖರಯ್ಯನವರು ಎಂಟು ಗಂಟೆಗೆ ಬೀದಿಯ ಬಾಗಿಲು ಒಡಸಿದರು. ಒಳಗೆ ನೋಡುತ್ತಾರೆ, ರಂಗಣ್ಣನವರು ಇನ್ನೂ ಮಲಗೇ ಇದ್ದಾರೆ! ಮುಖ ನೋಡಿದಾಗ ತಿಳಿಯಿತು, ಪ್ರಾಣ ಹೋಗಿ ಬಹಳ ಹೊತ್ತಾಗಿದೆ, ಎಂದು. ಸರಿ, ತಕ್ಷಣವೇ ಹಾಸನಕ್ಕೆ ತಂತಿ ಕಳಿಸಿದರು. ಅಷ್ಟು ಹೊತ್ತಿಗೆ ಅಚ್ಚಂಭಟ್ಟರ ಮನೆಗೆ ಹೇಗೋ ಸುದ್ದಿ ತಲಪಿತು. ಭಟ್ಟರು ಊರಲ್ಲಿರಲಿಲ್ಲ. ಅವರ ತಮ್ಮ ನಾರಾಯಣ ತಕ್ಷಣವೇ ಓಡಿಬಂದ. ಅವನಿಗೆ, ಡಾಕ್ಟರ್ ಕೃಷ್ಣಸ್ವಾಮಿಯನ್ನು ಕರೆದು ತೋರಿಸೋಣ, ಎನ್ನಿಸಿತು. ಚಂದ್ರಶೇಖರಯ್ಯನವರು ತಂತಿ ಕೊಟ್ಟು ಬರುವುದರೊಳಗಾಗಿ ಆ ಕೆಲಸವೂ ಆಯಿತು. ಡಾಕ್ಟರ್ "ಎದೆ ಒಡೆದು ರಾತ್ರಿ ಸುಮಾರು ಒಂದು ಗಂಟೆಯಲ್ಲೇ ಪ್ರಾಣ ಹೋಗಿಬಿಟ್ಟಿದೆ" ಎಂದು ಹೇಳಿ ಹೊರಟುಹೋದರು.

ನಾರಾಯಣ "ಏಳಿ ರಾಮುಸ್ವಾಮಿ, ಹೀಗೆ ಕುಳಿತ್ಬಿಟ್ಟರೆ ಹ್ಯಾಗೆ? ನಾವು ನಿಮಗೋಸ್ಕರ ಕಾಯ್ತಾ ಇದ್ದೆವು" ಎಂದು ರಾಮುಸ್ವಾಮಿಯನ್ನು ಸಮಾಧಾನ ಮಾಡಿದ. ಗೌರಿ ದೂರ ಕುಳಿತು ಅಳುತ್ತಿದ್ದಳು.

ಚಂದ್ರಶೇಖರಯ್ಯನವರು "ನಾನು ಆ ರಂಗಾಜೋಯಿಸರನ್ನ ಕರಕೊಂಡು ಹೋಗಿ ಬೇಕಾದ ಸಾಮಾನೆಲ್ಲ ತರ್ತೀನಿ. ನೀವು ಏಳಿ ಏಳಿ. ಆದದ್ದಾಗಿಹೋಯಿತು. ತಡಕೊಳ್ಬೇಕು. ಹೋದ ಜೀವ ಬರೋಹಾಗಿಲ್ಲ" ಎಂದರು. ರಾಮುಸ್ವಾಮಿ ಎದ್ದು, ಕಣ್ಣೊರಸಿಕೊಂಡ. ಜೇಬಿನಿಂದ ಹತ್ತು ರೂಪಾಯಿಯ ನೋಟು ತೆಗೆದು ಚಂದ್ರಶೇಖರಯ್ಯನವರ ಕೈಯಲ್ಲಿಡುತ್ತ "ತಗೊಳ್ಳಿ, ಈಗ ತರಬೇಕಾದ ಸಾಮಾನಿಗೆ. ನಿಮಗೆಲ್ಲ ನಾನು ತುಂಬ ತೊಂದರೆ ಕೊಡ್ತಾ ಇದೀನಿ'' ಎಂದ. ಚಂದ್ರಶೇಖರಯ್ಯನವರು "ಛೆ, ಛೆ, ಹಾಗಂದರೇನು! ನೀವೇನೂ ತಿಳಿಕೊಳ್ಳಬೇಡಿ. ನೆರೆಹೊರೆಯೋರು ಅಂದ ಮೇಲೆ ಇಷ್ಟೂ ಮಾಡದಿದ್ದರೆ!" ಎಂದು ಜೋಯಿಸರನ್ನು ಹುಡುಕಿಕೊಂಡು ಹೊರಟರು.

ಗೌರಿ "ನಮ್ಮ ತಂದೆಗೆ ತಂತಿ ಕೊಡೀಂದ್ರೆ. ಅವರೂ ಬರ್ತಾರೆ" ಎಂದಳು. ರಾಮುಸ್ವಾಮಿ "ಹೌದು, ಕೊಡೋಣ" ಎಂದುಕೊಂಡು, ಕೂತಿದ್ದ ನಾರಾಯಣನ ಕೈಯಲ್ಲಿ ಐದು ರೂಪಾಯಿಯ ನೋಟು ಕೊಟ್ಟು, ''ರಿಟೈರ್ಡ್ ಶಿರಸ್ತೇದಾರ್ ಶಾಮಣ್ಣೋರು, ಹೊಳೆನರಸೀಪುರ, ಈ ಅಡ್ರೆಸ್ಸಿಗೆ ಈ ವಿಷಯ ತಿಳಿಸಿ ಒಂದು ತಂತಿಕೊಟ್ಟುಬಿಟ್ಟು ಬಾಪ್ಪ'' ಎಂದು ಕಳಿಸಿದ. ನಾರಾಯಣ ಹೋಗಿ ತಂತಿಕೊಟ್ಟು ಬಂದ.

ಅಷ್ಟು ಹೊತ್ತಿಗೆ ಜೋಯಿಸರು ಸಾಮಾನಿನೊಡನೆ ಬಂದರು.

ಚಂದ್ರಶೇಖರಯ್ಯನವರು "ಉಂಗುರಗಿಂಗರ ಅಥವಾ ಬೀಗದಕ್ಕೈ ಇದ್ದರೆ ತೆಗೆದುಬಿಡಿ" ಎಂದಾಗ, ರಾಮುಸ್ವಾಮಿಗೆ ತಂದೆಯವರ ಪೆಟ್ಟಿಗೆಯ ಬೀಗದಕ್ಕೈ ಜ್ಞಾಪಕಕ್ಕೆ ಬಂತು. ತಕ್ಷಣವೆ ದೇಹದ ಮೇಲಿದ್ದ ಬಟ್ಟೆಯನ್ನು ಸರಿಸಿ ಜನಿವಾರ ನೋಡಿದ. ಬೀಗದಕ್ಕೈ ಜನಿವಾರದಲ್ಲಿಯೇ ಇತ್ತು. ಅದನ್ನು ಬಿಚ್ಚಿ ಗೌರಿಯ ಕೈಗೆ ಕೊಟ್ಟ. ಗೌರಿ ಅದನ್ನು ಉಡಿಯಲ್ಲಿ ಸಿಕ್ಕಿಸಿಕೊಂಡಳು.

ಶಾಸ್ತ್ರವೆಲ್ಲ ಮುಗಿದು, ಶ್ಮಶಾನಯಾತ್ರೆ ಹೊರಡುವ ಹೊತ್ತಿಗೆ ಮೂರು ಗಂಟೆ ಆಯಿತು. ಗೌರಿ ತಂದೆಯವರನ್ನೇ ಎದುರು ನೋಡುತ್ತ ಚಂದ್ರಶೇಖರಯ್ಯನವರ ಮನೆಯಲ್ಲಿ ಕುಳಿತಳು.

ರಾಮಸ್ವಾಮಿ ತಂದೆಯವರನ್ನು ಕಳಿಸಿ ಮನೆಗೆ ವಾಪಸು ಬಂದಾಗ ಆರು ಗಂಟೆ. ಮಾವನವರು ಇನ್ನೂ ಊರಿಗೆ ಬಂದಿರಲಿಲ್ಲ. "ಅವರಿಗೆ ತಂತಿ ತಲಪಿತೊ ಇಲ್ಲವೊ, ತಲಪಿದ್ದರೆ ಇಷ್ಟು ತಡ ಮಾಡುತ್ತಿರಲಿಲ್ಲ," ಎಂದು ಗೌರಿ ಹೇಳಿದಳು. ಸುಮಾರು ಏಳು ಗಂಟೆಯ ಹೊತ್ತಿಗೆ ಶಾಮಣ್ಣನವರು ಒಂದು ಚೀಲ ಹಿಡಿದುಕೊಂಡು ಬಂದರು. "ಯಾಕಣ್ಣಾ, ತಂತಿ ಬೇಗ ಸಿಕ್ಕಲಿಲ್ಲವೇ?" ಎಂದು ಗೌರಿ ಕೇಳಿದಳು. "ಇಲ್ಲಮ್ಮ, ಅಡ್ರೆಸ್ ತಪ್ಪಾಗಿ, ಅದು ಟವನ್ನಲ್ಲಿರೋ ಸಾಹುಕಾರ್ ಶಾಮಣ್ಣೋರ ಮನೇಗೆ ಹೋಗಿಬಿಟ್ಟಿತ್ತು; ಆಮೇಲೆ ಅವರು ಹೇಗೆಹೇಗೋ ಪತ್ತೆ ಮಾಡಿ ನನಗೆ ತಲಪಿಸಿದರು. ಅದು ನನ್ನ ಕೈಗೆ ಸಿಕ್ಕಾಗ ಐದು ಗಂಟೆ. ತಕ್ಷಣವೆ ಗಜಾನನ ಬಸ್ಸಿನಲ್ಲಿ ಹೊರಟುಬಂದೆ" ಎಂದರು. ರಾಮಸ್ವಾಮಿ ಚಾಪೆಯ ಮೇಲೆ ತಲೆತಗ್ಗಿಸಿಕೊಂಡು ಸುಮ್ಮನೆ ಕುಳಿತಿದ್ದ. ಮಾವನವರೇ, ಚೀಲವನ್ನು ಗೋಡೆಯ ಅಂಚಿನಲ್ಲಿಟ್ಟು "ಏನು ರಾಮಸ್ವಾಮಿ" ಎಂದರು. ಕೂಡಲೆ ರಾಮಸ್ವಾಮಿ "ಆಗ್ಹೋಯ್ತು!" ಎಂದು ಅಳುವುದಕ್ಕೆ ಮೊದಲುಮಾಡಿದ. ಶಾಮಣ್ಣನವರು "ಛೆ ಛೆ, ಅಳಬಾರದು. ಆದದ್ದಾಗ್ಹೋಯ್ತು. ಇನ್ನೇನು, ಹೋದ ಜೀವಾನ ಬಾ ಎಂದರೆ ಬರುತ್ತ್ಯೆ? ದುಃಖ ಆಗುತ್ತೆ ನಿಜ. ಆದರೆ ಮರೆತ್ಬಿಡ್ಬೇಕು. ನಮ್ಮಂಥ ಗಂಡಸರೇ ಹೀಗೆ ಮಾಡಿದರೆ ಹೇಗೆ!" ಎಂದು ಅಳಿಯನನ್ನು ಸಮಾಧಾನ ಮಾಡಿದರು.

* * * * *

ಸಮಾಧಾನವಾಯಿತು.

ತನ್ನ ಹದಿನೈದು ರೂಪಾಯಿ, ಹೆಡ್‌ಮಾಸ್ಟರ್ ಕೊಟ್ಟ ಹದಿನೈದು ರೂಪಾಯಿ ಹದಿನೈದು ನಿಮಿಷಗಳೊಳಗಾಗಿ ಖರ್ಚಾಗಿತ್ತು; ಚಂದ್ರಶೇಖರಯ್ಯನವರೂ ಬೇರೆ ತಮ್ಮ ಜೇಬಿನಿಂದ ಹತ್ತುರೂಪಾಯಿ ಖರ್ಚು

ಮಾಡಿದ್ದರು. ಮುಂದೆ ಖರ್ಚಿಗೆ ಹಣ ಇರಲಿಲ್ಲ. ತಕ್ಷಣವೆ ತಂದೆಯವರ ಪೆಟ್ಟಿಗೆಯ ನೆನಪಾಯಿತು. ಗೌರಿಯನ್ನು ಕೂಗಿ, ಪೆಟ್ಟಿಗೆಯ ಬೀಗದಕೈ ತೆಗೆದುಕೊಂಡ. ಬೀಗ ತೆಗೆದು ನೋಡಿದಾಗ, ಮೊದಲು ಕಣ್ಣಿಗೆ ಬಿದ್ದುದು ಪೋಸ್ಟಾಫೀಸಿನ ಪಾಸ್ ಬುಕ್ಕು! ಇನ್ನೂರು ರೂಪಾಯಿಯ ನೆನಪಾಯಿತು. ತಂದೆ ಹೇಳಿದ ಮಾತು ಜ್ಞಾಪಕಕ್ಕೆ ಬಂದು ತುಂಬ ಸಂಕಟವಾಯಿತು. ಅವರು ಎರಡು ಮೂರು ಬಾರಿ 'ಸಮಯ ಸಂದರ್ಭ ಹೇಗೆ ಬರುತ್ತೋ, ಇರಲಿ ಅದು ಹಾಗೇ' ಎಂದು ಹೇಳಿದ್ದರು. ಈ ಸಂದರ್ಭ ಒದಗಿತ್ತು.

ಅವರ ಹೆಸರಿನಲ್ಲಿರುವ ಈ ಹಣವನ್ನು ತಾನು ಈಗ ಹೇಗೆ ತೆಗೆದುಕೊಳ್ಳುವುದು, ಎಂಬ ಯೋಚನೆ ಬಂತು. 'ಪರವಾಯಿಲ್ಲ, ವಿಚಾರಿಸಿ ನೋಡೋಣ' ಎಂದು ಪಾಸ್ ಬುಕ್ಕಿನ ಹಾಳೆ ತೆಗೆದ. ಆಶ್ಚರ್ಯವಾಯಿತು! ನೂರುನೂರು ರೂಪಾಯಿಯ ಎರಡು ನೋಟು ಅಲ್ಲೇ ಇದ್ದುವು. ತಂದೆಯವರೇ ಆ ಹಣವನ್ನು ಪೋಸ್ಟಾಫೀಸಿನಿಂದ ತೆಗೆದು ಈ ಸಂದರ್ಭಕ್ಕೆ ಒದಗಿಸಿಕೊಂಡಿದ್ದರು. ಯಾವತ್ತು ತೆಗೆದರೋ ನೋಡೋಣ, ಎಂದು ಪಾಸ್‌ಬುಕ್ಕಿನ ದಾಖಲೆ ನೋಡಿದ. ಮೊನ್ನೆ ತಾನೆ ಇನ್ನೂರು ರೂಪಾಯಿ ಖರ್ಚುಬಿದ್ದಿತ್ತು. ಇವರ ಬಾಬ್ತು ಎರಡು ರೂಪಾಯಿ ಎಂಟಾಣೆ ಮಾತ್ರ ಪೋಸ್ಟಾಫೀಸಿನಲ್ಲಿ ಉಳಿದಿತ್ತು. ಇನ್ನೇನಾದರೂ ಹಣ ಇದೆಯೊ ಏನೊ ನೋಡೋಣ, ಎಂದು ರಾಮುಸ್ವಾಮಿ ಪೆಟ್ಟಿಗೆಯನ್ನೆಲ್ಲ ಶೋಧಿಸಿದ. ಏನೂ ಇರಲಿಲ್ಲ. ಸೊಸೈಟಿಯ ಪಾಸ್ ಬುಕ್ ಸಿಕ್ಕಿತು. ಅಲ್ಲಿ ಎಷ್ಟು ಹಣ ಇದೆಯೊ ನೋಡೋಣ, ಎಂದು ಆ ಪುಸ್ತಕದ ಹಾಳೆ ತೆಗೆದ. ಸೊಸೈಟಿಯಲ್ಲಿ ಕೇವಲ ಇಪ್ಪತ್ತೈದು ರೂಪಾಯಿ ಇತ್ತು. ತನಗೆ ತಿಳಿದಂತೆ ಅವರು ಸುಮಾರು ಐನೂರು ರೂಪಾಯಿಯನ್ನು ಸೊಸೈಟಿಯಲ್ಲಿಟ್ಟಿದ್ದರು; ಅದನ್ನು ಯಾವುದಕ್ಕೂ ಉಪಯೋಗಿಸುತ್ತಿರಲಿಲ್ಲ. ಆದರೆ ಅದರಲ್ಲಿ ಈಗ ಕೇವಲ ಇಪ್ಪತ್ತೈದು ರೂಪಾಯಿ ಉಳಿದಿತ್ತು. ಆಶ್ಚರ್ಯವಾಯಿತು. ಹೊಸ ಜಮೀನಿಗೆ ಸಂಬಂಧಪಟ್ಟ ಕಾಗದ ಪತ್ರ ನೋಡಿದಾಗ ತಿಳಿಯಿತು, ಎಲ್ಲ ಆ ಹಾಳು ಜಮೀನಿನ ರಿಪೇರಿಗಾಗಿ

ಖರ್ಚು ಮಾಡಿದ್ದರು. ರೈತ ಮಾದಪ್ಪ ಆಗಾಗ ಹಣ ತೆಗೆದುಕೊಂಡು ರುಜು ಹಾಕಿದ್ದ ರಸೀತಿಗಳೆಲ್ಲ ಆ ಕಾಗದಪತ್ರಗಳ ಜೊತೆಯಲ್ಲಿಯೇ ಇದ್ದುವು.

* * * * *

ಮೂರು ದಿನಗಳ ಕೆಲಸ ಮುಗಿಸಿಕೊಂಡು ಅರಸೀಕೆರೆಗೆ ಹೊರಡುವುದೆಂದು ರಾಮುಸ್ವಾಮಿ ನಿರ್ಧರಿಸಿದ. ಶಾಮಣ್ಣನವರು "ಬೇಡ, ಇನ್ನೂ ಒಂದು ವಾರ ರಜಾಕ್ಕೆ ಬರೆದುಕೊಂಡು ಹೊಳೆನರಸೀಪುರಕ್ಕೆ ಬಂದುಬಿಡಿ. ಅಲ್ಲೇ ಮುಂದಿನ ಕೆಲಸ ಮಾಡಿ" ಎಂದರು. ರಾಮುಸ್ವಾಮಿ "ಬೇಡ ಬೇಡ, ಅರಸೀಕೆರೇಲೂ ಎಲ್ಲ ಅನುಕೂಲ ಇದೆ. ಸುಮ್ಮನೆ ಯಾಕೆ. ಅಲ್ಲೇ ಮಾಡ್ತೀನಿ. ಅದೂ ಅಲ್ದೆ ಈಗತಾನೆ ದಸರಾ ರಜಾ ಮುಗಿದಿದೆ. ರಜಾ ಕೊಡೊಲ್ಲ. ಅರಸೀಕೆರೇಲೇ ಮಾಡ್ತೀನಿ" ಎಂದ. ಶಾಮಣ್ಣನವರು ಸುಮ್ಮನಾಗಬೇಕಾಯಿತು.

"ನೀವೂ ಬನ್ನಿ ಅರಸೀಕೆರೆಗೆ. ಒಂದೆರಡು ದಿನ ಇದ್ದು ಹೋಗಿ" ಎಂದು ಮಾವನವರನ್ನೇ ರಾಮುಸ್ವಾಮಿ ಕೇಳಿಕೊಂಡ. ಅದಕ್ಕೆ ಶಾಮಣ್ಣನವರು "ಎಲ್ಲಿ, ಮನೇಲಿ ಇಬ್ಬರೇ ಇರೋದು. ಗಂಡು ದಿಕ್ಕಿಲ್ಲ, ಇನ್ನೊಂದ್ಸಲ ಬರ್ತೀನಿ. ಈ ಸಲ ಬೇಡ" ಎಂದು ಹೇಳಿ ಮೂರನೆಯ ದಿನವೇ ಹೊಳೆನರಸೀಪುರಕ್ಕೆ ಹೊರಟರು.

ಅರಸೀಕೆರೆಗೆ ರಜಾಚೀಟಿ ಬರೆದ ದಿನವೇ ಮೈಸೂರಿನ ಮಾಧವರಾಯರ ಮನೆಗೂ ರಾಮುಸ್ವಾಮಿ ಒಂದು ಕಾಗದ ಹಾಕಿದ. ಅವರು 'ಅಯ್ಯೋ, ಪಾಪ!' ಎಂದುಕೊಂಡರು. 'ತುಂಬ ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಏನು ಮಾಡೋದಕ್ಕಾಗುತ್ತದೆ. ಆಗೋದನ್ನೆಲ್ಲ ಅನುಭವಿಸಲೇಬೇಕು. ಕಾನ್ವೊಕೇಷನ್ ತಪ್ಪಿಹೋಯಿತು. ಪರವಾಯಿಲ್ಲ, ಆಮೇಲಾದರೂ ನೀವು ಗಂಡ ಹೆಂಡತಿ ಬಂದು ಒಂದೆರಡು ದಿನ ಇದ್ದು ಹೋಗಿ ; ಸದ್ಯದಲ್ಲಿಯೇ ಸಾಧ್ಯವಾಗದಿದ್ದರೆ ಮುಂದಿನ ವರುಷದ ಕಾನ್ವೊಕೇಷನ್ನಿಗೆ ಇಬ್ಬರೂ ತಪ್ಪದೆ ಬನ್ನಿ' ಎಂದು ಅವರು ಕಾಗದ ಬರೆದರು. ಆದರೆ ಮುಂದಿನ ವರುಷವೂ ರಾಮುಸ್ವಾಮಿ ಮೈಸೂರಿಗೆ ಹೋಗಲಾಗಲಿಲ್ಲ. ಹತ್ತು ರೂಪಾಯಿ ಕಳಿಸಿ, ಅಂಚೆಯ ಮೂಲಕ ಡಿಗ್ರಿ ತರಿಸಿಕೊಳ್ಳಬೇಕಾಯಿತು.

ತಂದೆ ಕೆಟ್ಟ ನಕ್ಷತ್ರದಲ್ಲಿ ತೀರಿಕೊಂಡಿದ್ದರಿಂದ ಮೂರು ತಿಂಗಳು ಮನೆಗೆ ಯಾರೂ ಬಾಡಿಗೆಗೆ ಬರುವಂತಿರಲಿಲ್ಲ. ಅಲ್ಲಿದ್ದ ಸಾಮಾನನ್ನೆಲ್ಲ ಅರಸೀಕೆರೆಗೆ ಸಾಗಿಸಿ, ಬಾಗಿಲಿಗೆ ಬೀಗ ಹಾಕಬೇಕಾಯಿತು. ರಾಮುಸ್ವಾಮಿ ಚಂದ್ರಶೇಖರಯ್ಯನವರೂ ಎಲ್ಲಿ ಮನೆ ಬಿಟ್ಟುಬಿಡುತ್ತಾರೊ, ಎಂದು ಕೊಂಡಿದ್ದ. ಆದರೆ ಅವರು ಬಿಡುವುದಿಲ್ಲ, ಎಂಬುದು ಆಮೇಲೆ ತಿಳಿಯಿತು. "ದಯವಿಟ್ಟು ಮೂರು ತಿಂಗಳಾದ ಮೇಲೆ ಬಾಗಿಲು ತೆಗೆಸಿ, ಸುಣ್ಣ ಹಚ್ಚಿಸಿ, ಯಾರಿಗಾದರೂ ಒಳ್ಳೆಯವರಿಗೆ ಬಾಡಿಗೆಗೆ ಕೊಡಿ" ಎಂದು ಹೇಳಿ ರಾಮುಸ್ವಾಮಿ ಮನೆಯ ಬೀಗದಕೈಯನ್ನು ಚಂದ್ರಶೇಖರ ಯ್ಯನವರ ಕೈಯಲ್ಲಿ ಕೊಟ್ಟ. ಅವರ ಸಹಾಯಕ್ಕಾಗಿ ಅವರಿಗೆ ತುಂಬ ಕೃತಜ್ಞತೆಯನ್ನು ಸಲ್ಲಿಸಿದ.

ನಾಲ್ಕನೆಯ ದಿನ ಒಂದು ಗಾಡಿ ಮಾಡಿ, ತಂದೆಯವರ ಸಾಮಾನ ನ್ನೆಲ್ಲ ಅದರಲ್ಲಿ ಹಾಕಿಕೊಂಡು, ತಮ್ಮ ಪುಟ್ಟ ಹಾಸಿಗೆಯನ್ನೂ ಇಟ್ಟು ಕೊಂಡು, ಗಂಡ ಹೆಂಡತಿ ಕುಳಿತು ನಿಲ್ದಾಣದ ಕಡೆಗೆ ಹೊರಟರು.

ರೈಲು ಹನ್ನೆರಡೂ ನಲವತ್ತಕ್ಕೆ ಬಂತು.

ನಿಲ್ದಾಣದ ಹತ್ತಿರ ಚಂದ್ರಶೇಖರಯ್ಯನವರೂ ಬಂದಿದ್ದರು. ಅವರ ಸಹಾಯವನ್ನು ಮತ್ತೊಮ್ಮೆ ನೆನಸಿಕೊಂಡು ರಾಮುಸ್ವಾಮಿ "ನಿಮಗೆ ತುಂಬ ತೊಂದರೆ ಕೊಟ್ಟೆ, ಕ್ಷಮಿಸಿ" ಎಂದ. ಚಂದ್ರಶೇಖರಯ್ಯನವರು "ಛೆ ಛೆ, ಹಾಗಂದ್ರೇನು!" ಎಂದರು. ರಾಮುಸ್ವಾಮಿ "ಅಚ್ಚಂಭಟ್ಟರು ಊರಿಗೆ ಬಂದ ಮೇಲೆ ದಯಪಿಟ್ಟು ಅವರಿಗೆ ಈ ವಿಷಯ ತಿಳಿಸಿ. ಅವರ ನಾರಾಯಣನಿಗೆ ನನ್ನ ನಮಸ್ಕಾರ ಹೇಳಿ. ಅವನನ್ನ ನೋಡೋಕೇ ಆಗಲಿಲ್ಲ" ಎಂದ. ಚಂದ್ರಶೇಖರಯ್ಯನವರು "ಆಗಲಿ ಆಗಲಿ, ನಾ ಹೇಳ್ತೀನಿ" ಎಂದರು.

ರಾಮುಸ್ವಾಮಿಗೆ ಹಾಸನ ಬರಡಾಗಿ ಕಾಣಿಸಿತು.

ರೈಲು ಹೊರಟಿತು.

ಆರು ವರುಷಗಳಾದುವು. ಈ ಆರು ವರುಷಗಳಲ್ಲಿ ಏನೇನೋ ಬದಲಾವಣೆಗಳಾಗಿಬಿಟ್ಟುವು. ತಂದೆ ಹೋದ ಕೇವಲ ಏಳು ತಿಂಗಳ ಲ್ಲಿಯೇ ರಾಮಸ್ವಾಮಿ ಅರಸೀಕೆರೆಯನ್ನು ಬಿಟ್ಟು ಬೆಂಗಳೂರಿಗೆ ಬರಬೇಕಾಯಿತು. ಸೈನ್ಸ್ ಟೀಚರ್ ಕೃಷ್ಣಸ್ವಾಮಿಯ ಬಲವಂತದಿಂದ ಕೊ-ಆಪರೇಟಿವ್ ಸೊಸೈಟಿ ಇನ್‌ಸ್ಪೆಕ್ಟರ ಕೆಲಸಕ್ಕೆ ಅರ್ಜಿ ಸಲ್ಲಿಸಿದ್ದ. ಅರ್ಜಿ ಹೋದ ಒಂದು ತಿಂಗಳಲ್ಲಿಯೇ ಇಂಟರ್‌ವ್ಯೂಗೆ ಬರಬೇಕೆಂದು ಕರೆ ಬಂತು. ಅದಾದ ಹದಿನೈದು ದಿನಗಳಲ್ಲಿಯೇ ಕೆಲಸದ ಆರ್ಡರ್ ಬಂತು. ಹೆಡ್‌ಮಾಸ್ಟರ್ ರಾಮರಾಯರಿಗೆ ರಾಮಸ್ವಾಮಿಯನ್ನು ಬಿಟ್ಟು ಕೊಡಲು ಇಷ್ಟವಿರಲಿಲ್ಲ. ಆದರೆ ಉಪಾಧ್ಯಾಯ ವೃತ್ತಿಗಿಂತ ಅದು ಉತ್ತಮ ಎಂಬುದು ಅವರಿಗೆ ಗೊತ್ತಿತ್ತು. "ಪರವಾಯಿಲ್ಲ ರಾಮಸ್ವಾಮಿ, ಹೋಗಿ. ಆ ಕೆಲಸ ಸಿಕ್ಕೋದೇ ಕಷ್ಟ. ಸಿಕ್ಕಿದೆ, ಬಿಡಬೇಡಿ. ಮೇಷ್ಟರ ಕೆಲಸ ಏನು ಮಹಾ" ಎಂದು ಸಂತೋಷದಿಂದ ರಾಮಸ್ವಾಮಿಯ ರಾಜೀನಾಮೆಯನ್ನು ಅಂಗೀಕರಿಸಿದರು.

ಗೌರಿಯೂ "ಮೇಷ್ಟರ ಕೆಲಸಕ್ಕಿಂತ ಅದೇ ಮೇಲು. ಒಪ್ಪಿಕೊಳ್ಳಿ, ಹೋಗೋಣ. ಒಂದೆರಡು ತಿಂಗಳು ಕಷ್ಟ ಆಗಬಹುದು, ಬೆಂಗಳೂರು ಸಂಸಾರ. ಆದರೂ ಪರವಾಯಿಲ್ಲ" ಎಂದಳು.

ಈ ವಿಷಯವಾಗಿ ರಾಮಸ್ವಾಮಿ ಮಾವನವರಿಗೂ ಕಾಗದ ಬರೆದಿದ್ದ. ಅವರೂ ಸಂತೋಷವನ್ನು ವ್ಯಕ್ತಪಡಿಸಿ "ಬಹಳ ಒಳ್ಳೆಯದು, ಆ ಕೆಲಸ ಸಿಕ್ಕುವುದೇ ಕಷ್ಟ. ನನ್ನ ಸ್ನೇಹಿತ ನರಸಿಂಹಮೂರ್ತಿ ಅಂತ ಇದಾನೆ. ಅವನೂ ರಿಜಿಸ್ಟ್ರಾರ್ ಆಫೀಸಿನಲ್ಲಿಯೇ ಇರುವುದು. ಅವನಿಗೆ ಒಂದು ಕಾಗದ ಬರೆದು ಕೊಡುತ್ತೇನೆ. ಅವನು ನಿಮಗೆ ಸಹಾಯ ಮಾಡುತ್ತಾನೆ. ನೀವು ಯಾವತ್ತು ಅಲ್ಲಿಗೆ ಹೊರಡುತ್ತೀರಿ? ಹೊರಡುವುದಕ್ಕೆ ಎರಡು ದಿನ ಮುಂಚೆ ಹೊಳೆನರಸೀಪುರಕ್ಕೆ ಬನ್ನಿ. ಇಲ್ಲಿ ಎರಡು ದಿನ ಇದ್ದು ಹೋಗೋರಂತೆ. ಬೆಂಗಳೂರಿನಲ್ಲಿ ಸರಿಯಾದ ಮನೆ ಸಿಕ್ಕುವ ವರೆಗೆ ಗೌರಿಯನ್ನು ಇಲ್ಲೇ ಬಿಟ್ಟಿರಿ. ಬೇಕಾದರೆ ಹೆಚ್ಚಿಗೆ ಸಾಮಾನನ್ನೂ ಇಲ್ಲೇ

ಇಟ್ಟು ಎಷ್ಟು ಬೇಕೋ ಅಷ್ಟನ್ನು ಮಾತ್ರ ಊರಿಗೆ ತೆಗೆದುಕೊಂಡು ಹೋಗಬಹುದು" ಎಂದು ಬರೆದಿದ್ದರು. ರಾಮುಸ್ವಾಮಿ ಒಪ್ಪಿ, ಎಲ್ಲ ಸಾಮಾನನ್ನೂ ತೆಗೆದುಕೊಂಡು ಗೌರಿಯೊಡನೆ ಹೊಳೆನರಸೀಪುರಕ್ಕೆ ಹೋದ. ಮಾವನವರು ಬರೆದಿದ್ದಂತೆಯೇ ಎರಡು ದಿನ ಇದ್ದು, ಗೌರಿ ಯನ್ನು ಅಲ್ಲಿಯೇ ಬಿಟ್ಟು ಬೆಂಗಳೂರಿಗೆ ಹೋದ.

ಬೆಂಗಳೂರಿಗೆ ಹೋದ ಕೂಡಲೆ ತುಳಸೀತೋಟದ ಗಜಾನನ ಹೋಟಲಲ್ಲಿ ಇಳಿದುಕೊಳ್ಳಬೇಕಾಯಿತು. ಊಟ ಮಾಡಿಕೊಂಡು ಆಫೀಸಿಗೆ ಹೋದ. ಹೆಡ್ ಆಫೀಸಿನಲ್ಲಿ ಒಂದು ವರ್ಷವಾದರೂ ಇರಲೇ ಬೇಕಾಗುತ್ತದೆ, ಎಂದು ಆ ದಿನವೇ ತಿಳಿಯಿತು. ಸರಿ, ಆ ಸಂಜೆಯಿಂದಲೇ ಮನೆಯ ಬೇಟೆಗೆ ಷುರುವಾಯಿತು. ಮಾವನವರು ನರಸಿಂಹಮೂರ್ತಿ ಯವರಿಗೆ ಕೊಡಬೇಕೆಂದು ಕೊಟ್ಟಿದ್ದ ಕಾಗದವನ್ನು ಅವರಿಗೆ ತಲಪಿಸಿದ್ದ. ಅವರು "ಸಂಜೆ ಮನೆಯ ಹತ್ತಿರ ಬನ್ನಿ" ಎಂದಿದ್ದರು. ಏಳು ಗಂಟೆಯ ಹೊತ್ತಿಗೆ ಅವರ ಮನೆಗೆ ಹೋದ. ಅವರ ಮನೆ ಮಲ್ಲೇಶ್ವರದ ನಾಲ್ಕ ನೆಯ ಕ್ರಾಸಿನಲ್ಲಿತ್ತು. ಅಲ್ಲೇ ಹತ್ತಿರದಲ್ಲಿ ಒಂದೆರಡು ಮನೆ ಖಾಲಿ ಇದೆ, ಎಂದು ಅವರ ಮಗ ಲಚ್ಚನಿಗೆ ತಿಳಿದಿತ್ತಂತೆ. ನರಸಿಂಹಮೂರ್ತಿಯವರು ಮಗನನ್ನು ಕರೆದು ಕೇಳಿದರು. ಲಚ್ಚ "ಆಗಲೇ ಒಂದು ವಾರ ಆಯಿತು ನಾನು ನೋಡಿ. ಈಗ ಏನಾಗಿದೆಯೋ! ಯಾರಾದರೂ ಬಂದುಬಿಟ್ಟಿ ದಾರೋ ಏನೋ" ಎಂದ. ನರಸಿಂಹಮೂರ್ತಿಯವರು "ಇಲ್ಲೇ ಕೂತು ಕೊಂಡು ಎಲ್ಲ ನೀನೇ ಹೇಳಿಬಿಡಬೇಡ. ಹೋಗಿ ನೋಡಿಕೊಂಡು ಬಾ. ಖಾಲಿ ಇದ್ದರೆ, ನಾನೂ ಇವರೂ ಬರ್ತೀವಿ" ಎಂದು ಗದರಿಸಿ ಕಳಿಸಿದರು. ಲಚ್ಚ ಹೋಗಿ ನೋಡಿಕೊಂಡುಬಂದ. "ನಲವತ್ತು ರೂಪಾಯಿಂದು ಮಾತ್ರ ಖಾಲಿ ಇದೆ. ಇಪ್ಪತ್ತು ರೂಪಾಯಿಂದು ಎರಡೂ ಭರ್ತಿ ಆಗಿ ಬಿಟ್ಟವೆ" ಎಂದ. ನರಸಿಂಹಮೂರ್ತಿಯವರು "ಸರಿಯಪ್ಪ, ನೀನು ಹೋಗೋವಾಗಲೇ ರಾಗ ಎಳಕೊಂಡು ಹೋಗಿದ್ದಿ. ಇನ್ನೇನಾಗುತ್ತೆ ಹೇಳು. ಈಗೇನು ಮಾಡ್ತೀರಿ, ರಾಮುಸ್ವಾಮಿ? ನೋಡೋಣ ನಿಧಾನ ವಾಗಿ ಮತ್ತೆ, ಚಾಮರಾಜಪೇಟೇಲೇ ಸಿಕ್ಕಿದರೂ ಸಿಕ್ಕಬಹುದು.

ಆಫೀಸಿಗೆ ತುಂಬ ಹತ್ತಿರ; ಅಲ್ಲೇ ಪ್ರಯತ್ನ ಮಾಡಿ" ಎಂದರು. ರಾಮಸ್ವಾಮಿ ಅವರ ಮನೆಯಲ್ಲಿ ಒಂದು ಲೋಟ ಬಿಸಿಬಿಸಿ ಕಾಫಿ ಗಿಟ್ಟಿಸಿ ಹೊರಟ.

ಮಲ್ಲೇಶ್ವರದ ಚೌಕದ ಹತ್ತಿರ ಬಂದಾಗ ತಟ್ಟನೆ ಅನಂತಪಂಡಿತರ ನೆನಪಾಯಿತು. ಅವರ ಮನೆ ಐದನೆಯ ಕ್ರಾಸಿನಲ್ಲಿ ಇದ್ದಂತೆ ನೆನಪಿದೆ, ನೋಡೋಣ. ಅವರನ್ನೂ ಮಾತಾಡಿಸಿದ ಹಾಗಾಗುತ್ತೆ; ಅವರಿಗೆ ಯಾವುದಾದರೂ ಮನೆ ಗೊತ್ತಿದ್ದರೂ ಗೊತ್ತಿರಬಹುದು, ಎಂದುಕೊಂಡು ಮತ್ತೆ ಆ ಕಡೆಗೆ ಹೊರಟ. ಐದನೆಯ ಕ್ರಾಸಿಗೆ ಬಂದು ಬಲಕ್ಕೆ ತಿರುಗಿದಾಗ 'ಹೌದು ಇದೇ ಬೀದಿ, ಇಲ್ಲೇ ಅವರ ಮನೆ' ಎನ್ನಿಸಿತು. ನಾಲ್ಕು ಮನೆ ದಾಟಿದ ಕೂಡಲೆ ಸಂಪಗೆಗಿಡದ ಮನೆ ಕಾಣಿಸಿತು. ಇದೇ ಪಂಡಿತರ ಮನೆ ಎಂಬುದು ಆ ಗಿಡದಿಂದಲೇ ಗೊತ್ತಾಯಿತು. ಸುಮಾರು ನಾಲ್ಕು ವರುಷಗಳ ಹಿಂದೆ ರಾಮಸ್ವಾಮಿ ಆ ಮನೆಗೆ ಬಂದಿದ್ದ. ಆಗ ಆ ಗಿಡ ಚಿಕ್ಕದಾಗಿತ್ತು. ನಾಲ್ಕು ವರುಷಗಳಲ್ಲಿ ಅದು ಬಹಳ ಬೆಳೆದುಬಿಟ್ಟಿತ್ತು. ಪಂಡಿತರು ಮನೆಯಲ್ಲಿಯೇ ಇದ್ದರು. ಯಾರೋ ಇಬ್ಬರು ಗೌಡರು ಪ್ರಶ್ನೆ ಕೇಳುತ್ತಾ ಅವರ ಮುಂದೆ ಕುಳಿತಿದ್ದರು. ರಾಮಸ್ವಾಮಿಯ ಗುರುತು ಅವರಿಗೆ ಹತ್ತಲಿಲ್ಲ. ಆದರೂ ಅವನನ್ನು ನೋಡಿದ ಕೂಡಲೆ, ಹಿಂದೆ ಎಲ್ಲೋ ನೋಡಿದ್ದಂತೆ ಭಾಸವಾದುದರಿಂದ "ಬನ್ನಿ ಕೂತ್ಕೊಳ್ಳಿ," ಎಂದು ಕುರ್ಚಿ ತೋರಿಸಿದರು. ರಾಮಸ್ವಾಮಿ ಕುರ್ಚಿಯ ಮೇಲೆ ಕುಳಿತುಕೊಂಡ. ಗೌಡರ ಪ್ರಶ್ನೆ ಬಿಡಿಸುವುದರಲ್ಲೇ ಮಗ್ನರಾಗಿದ್ದ ಪಂಡಿತರು ಮಾಮೂಲಿನಂತೆ ರಾಮಸ್ವಾಮಿಯನ್ನೂ ಒಬ್ಬ ಗಿರಾಕಿ ಎಂದು ಪರಿಗಣಿಸಿ "ಏನು, ಏನಾಗಬೇಕಾಗಿತ್ತು?" ಎಂದು ಪ್ರಶ್ನಿಸಿದರು. ರಾಮಸ್ವಾಮಿ "ಏನೂ ಇಲ್ಲ, ನಾನು ರಾಮಸ್ವಾಮಿ. ನಿಮ್ಮನ್ನು ಸುಮ್ನೆ ನೋಡಿಕೊಂಡು ಹೋಗೋಣಾಂತ ಬಂದೆ" ಎಂದ. ಪಂಡಿತರಿಗೆ ಇನ್ನೂ ನೆನಪಾಗಲಿಲ್ಲ, ಎಂಬುದು ಅವರ ಕಣ್ಣುಗಳಲ್ಲೇ ಕಾಣಿಸಿತು. ಅವರು ಮಾತಾಡುವುದಕ್ಕೆ ಮುಂಚೆ ರಾಮಸ್ವಾಮಿಯೆ "ನಿಮ್ಮ ನಾರಾಯಣಮೂರ್ತಿ ಸ್ನೇಹಿತ ರಾಮಸ್ವಾಮಿ ಅಲ್ಲವೆ ನಾನು!

ಈಗ ನಾಲ್ಕು ವರ್ಷದ ಹಿಂದೆ ನಾವಿಬ್ರೂ ಬಂದಿರಲಿಲ್ವೆ?" ಎಂದ. ಆಗ ಪಂಡಿತರ ತಲೆ ಗುರುತು ಹಿಡಿಯಿತು. "ಓಹೊಹೊ! ಗೊತ್ತಾಯ್ತು. ನಾನು ನಿಮ್ಮ ಕೈ ಕೂಡ ನೋಡ್ದೆ ಅಲ್ಲವೆ?" ಎಂದರು. ರಾಮುಸ್ವಾಮಿ "ಹೌದು." ಎಂದು ನಕ್ಕ. "ಏನಪ್ಪ, ಗುರುತೇ ಗೊತ್ತಾಗಲಿಲ್ಲವಲ್ಲ, ನಾಲ್ಕು ವರುಷದಲ್ಲಿ ಎಷ್ಟೊಂದು ಬೆಳೆದುಬಿಟ್ಟದೀಯೆ. ಈಗಿನ ಕಾಲದ ಹುಡುಗರು ಈಗ ಇದ್ದಾಂಗೆ ಇನ್ನೊಂದು ಗಳಿಗೇಲಿರೋದಿಲ್ಲ, ಏನೂ.... ಈಗ ಎಲ್ಲಿರೋದು?" ಎಂದು ಕೇಳಿದರು.

"ಇಲ್ಲೇ ಸದ್ಯಕ್ಕೆ."

"ಏನು ಕೆಲಸ?"

"ಕೋ-ಆಪರೇಟಿವ್ ಸೊಸೈಟಿ ರಿಜಿಸ್ಟ್ರಾರ್ ಆಫೀಸಿನಲ್ಲಿ"

"ಅಲ್ಲಿ ಏನು? ಇನ್ಸ್ಪೆಕ್ಟರೊ?"

"ಇನ್ಸ್ಪೆಕ್ಟರೂಂತಲೆ, ಆದರೆ ಇನ್ನೂ ಟ್ರೈನಿಂಗ್ ತೊಗೋತಾ ಇದೀನಿ."

"ಎಷ್ಟು ಸಂಬಳ?"

"ಎಪ್ಪತ್ತೈದು."

"ಪರವಾಯಿಲ್ಲ."

"ಈಗ ನಾರಾಯಣಮೂರ್ತಿ ಎಲ್ಲಿದಾನೆ? ಅವನಿಂದ ಕಾಗದಾನೇ ಇಲ್ಲ, ನಾನಾದರೂ ಬರೆಯೋಣಾಂದರೆ ಅವನ ಅಡ್ರೆಸ್ಸೇ ಹೇಳೋರಿಲ್ಲ."

"ಅವನೆಲ್ಲಿ ಹೋಗಿದಾನೆ. ಇಲ್ಲೇ ಇದಾನೆ. ಬಿನ್ನಿ ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿಕೊಂಡಿದಾನೆ. ಅಪ್ಪ ಅಮ್ಮ ಎಲ್ಲ ಇಲ್ಲೇ ಬಂದಿದಾರೆ. ಅವನಿಗೂ ಅಲೊಯನ್ಸು ಎಲ್ಲ ಸೇರಿ ನೂರು ರೂಪಾಯಿ ಬರುತ್ತೆ."

"ಎಲ್ಲಿ ಅವನ ಮನೆ?"

"ಶ್ರೀರಾಮಪುರದಲ್ಲಿ. ಅಲ್ಲಿ ಪೋಸ್ಟಾಫೀಸಿನಲ್ಲಿ ರಾಜಣ್ಣಾಂತ ಇದಾರೆ. ಅವರು ನಾರಾಯಣಮೂರ್ತಿ ಭಾವನ ಅಣ್ಣ. ಅವರನ್ನ ವಿಚಾರಿಸಿದರೆ ಅವನ ಮನೆ ತೋರಿಸ್ತಾರೆ."

"ಸರಿ, ಶನಿವಾರ ಮಧ್ಯಾಹ್ನ ಆ ಕಡೆ ಹೋಗ್ತೀನಿ."

"ಇನ್ನೇನು ವಿಶೇಷ, ಮದುವೆ ಆಯ್ತೊ ?"

"ಇದೇನು ಹೀಗೆ ಕೇಳ್ತೀರಿ ? ನಾನು ಇಲ್ಲಿರೋವಾಗಲೇ ಅಲ್ಲವೆ, ಹೆಣ್ಣು ಗೊತ್ತಾದದ್ದು ? ನಾನು ನಾರಾಯಣಮೂರ್ತಿ ಇಬ್ಬರೂ ಬಂದು ನಿಮ್ಮನ್ನ ಈ ಸಂಬಂಧ ಹೇಗೆ ಅಂತ ಕೂಡ ಕೇಳಿದೆವು ?"

"ಆ್ಞಾ ಆ್ಞಾ, ಹೌದು. ಈಗ ನೆನಪಾಯ್ತು. ಬಂದಿದ್ದಿ "

"ನಿಮ್ಮನ್ನನೋಡಿದ ಎರಡು ಮೂರು ತಿಂಗಳಿಗೆಲ್ಲ ನನ್ನ ಮದುವೆ ಆಗ್ಹೋಯ್ತು."

"ಈಗೆಷ್ಟು ಮಕ್ಕಳು ?"

"ಇನ್ನೂ ಏನೂ ಇಲ್ಲ."

ಐದೂವರೆ ವರುಷಗಳ ಹಿಂದೆ ಹೇಳಿದ ಉತ್ತರ ಇದು. ಆಗ ಆ ಪ್ರಶ್ನೆ ಆ ಉತ್ತರ ಅವನ ಮನಸ್ಸಿನ ಮೇಲೆ ಅಷ್ಟು ಪರಿಣಾಮ ವನ್ನುಂಟುಮಾಡಿರಲಿಲ್ಲ. ಆದರೆ ಆಮೇಲೆ ಆ ಪ್ರಶ್ನೆ ಆ ಉತ್ತರ ಅವನ ತಲೆ ಕೆಡಿಸಿಬಿಟ್ಟಿದ್ದುವು. ಅವನು ಅರಸೀಕೆರೆಯಲ್ಲಿಯೇ ಇದ್ದಿದ್ದರೆ, ಅಥವಾ ಬೆಂಗಳೂರಿಗೆ ಬಂದ ಮೇಲೆ ಮತ್ತೆ ಅನಂತಪಂಡಿತರ ಮತ್ತು ನಾರಾಯಣಮೂರ್ತಿಯ ಸಹವಾಸ ಸಿಕ್ಕದೆ ಇದ್ದಿದ್ದರೆ ಹೀಗಾಗುತ್ತಿರ ಲಿಲ್ಲವೊ, ಏನೊ. ಅಂತೂ ಆ ಪ್ರಶ್ನೆ, ಆ ಉತ್ತರ ಅವನ ಮನಸ್ಸನ್ನು ಬದಲಾಯಿಸಿಬಿಟ್ಟಿದ್ದುವು.

ಅನಂತಪಂಡಿತರ ಸಹವಾಸ ಆಗಿದ್ದುದಕ್ಕಿಂತ ಅವರು ಇವನ ಆಜೀವ ಭವಿಷ್ಯ ಬರೆದದ್ದು ಈ ಬದಲಾವಣೆಗೆ ಮುಖ್ಯ ಕಾರಣವಾ ಯಿತು.

ಶ್ರೀರಾಮಪುರದಲ್ಲಿರುವ ನಾರಾಯಣಮೂರ್ತಿಯ ಸ್ನೇಹವಾದ ಮೇಲೆ ಪ್ರತಿ ಭಾನುವಾರವೂ ಇಬ್ಬರೂ ಸೇರುತ್ತಿದ್ದರು. ರಾಮಸ್ವಾಮಿಗೆ ನಾರಾಯಣಮೂರ್ತಿಯೇ ಆಫೀಸಿಗೆ ಹತ್ತಿರವಾಗಿರುವ ಚಾಮರಾಜ ಪೇಟೆಯ ಮೂರನೆಯ ಬೀದಿಯಲ್ಲಿ ಒಂದು ಮನೆ ಬಾಡಿಗೆಗೆ ಕೊಡಿಸಿದ. ಮನೆ ಮಾಡಿದ ಒಂದು ವಾರದೊಳಗಾಗಿ ಸಾಮಾನಿನೊಡನೆ ಗೌರಿ ಯನ್ನು ಹೊಳೆನರಸೀಪುರದಿಂದ ಕರಸಿದ್ದಾಯಿತು; ಬೆಂಗಳೂರು ಸಂಸಾರ

ಷುರುವಾಯಿತು. ನಾರಾಯಣಮೂರ್ತಿಗೆ ಸೈಕಲ್ ಇದ್ದುದರಿಂದ ಅವನೇ ಪ್ರತಿ ಭಾನುವಾರವೂ ಮಧ್ಯಾಹ್ನ ನಾಲ್ಕು ಗಂಟೆಯ ಹೊತ್ತಿಗೆ ರಾಮುಸ್ವಾಮಿಯ ಮನೆಗೆ ಬರುತ್ತಿದ್ದ. ಆಮೇಲೆ ಇಬ್ಬರೂ ಹಾಗೇ ಒಂದು ಸುತ್ತು ಸುತ್ತಿಕೊಂಡು ಬರುತ್ತಿದ್ದರು.

ಒಂದೆರಡು ಭಾನುವಾರ ಇಬ್ಬರೂ ಅನಂತಪಂಡಿತರ ಮನೆಗೆ ಹೋಗಿದ್ದರು. ಒಂದು ದಿನ ಆ ಮಾತು ಈ ಮಾತು ಆಡುತ್ತ ಪಂಡಿತರು "ನಾನು ನಿನ್ನ ಜಾತಕ ನೋಡಬೇಕು. ಸ್ವಲ್ಪ ತೊಗೊಂಡ್ಬಾ. ಹಾಗೇ ಇನ್ನೊಂದ್ಸಲ ಕೈನೂ ನೋಡ್ಬೇಕೂಂತಿದೀನಿ. ಒಂದು ಭಾನುವಾರ ಕೂತ್ಕೊಳ್ಳೋಣ. ನೀನೂ ಯಾಕೆ ಲೈಫ್ ರೀಡಿಂಗ್ ಬರಸಿಬಿಡಬಾರದು? ನಿಮ್ಮ ಮೂರ್ತೀಗೆ ಬರೆದುಕೊಟ್ಟಿದೀನಿ" ಎಂದರು. ನಾರಾಯಣ ಮೂರ್ತಿಯೂ ಪಂಡಿತರ ಈ ಸಲಹೆಗೆ ಪ್ರೋತ್ಸಾಹ ನೀಡಿದ. ಅವನಿಗೆ ಸಾಮುದ್ರಿಕ ಶಾಸ್ತ್ರದಲ್ಲಿ ಸಂಪೂರ್ಣ ನಂಬಿಕೆ. ಅವನೂ ಸಹ ಕೈ ನೋಡಿ ತಕ್ಕಮಟ್ಟಿಗೆ ಭವಿಷ್ಯ ಹೇಳುವುದನ್ನು ಕಲಿತಿದ್ದ. ರಾಮುಸ್ವಾಮಿ ಅವನನ್ನು ಭೇಟಿ ಮಾಡಿದಾಗಲೆಲ್ಲ ಯಾವುದಾದರೂ ಸಂಬಂಧದಲ್ಲಿ ಸಾಮುದ್ರಿಕ, ಭವಿಷ್ಯ ಈ ವಿಷಯಗಳ ಬಗ್ಗೆ ಅವನು ಏನಾದರೂ ಮಾತಾಡುತ್ತಲೇ ಇದ್ದ. ಅವನ ಬಲವಂತದ ಮೇಲೆ ರಾಮುಸ್ವಾಮಿ ಜಾತಕವನ್ನು ತೆಗೆದು ಕೊಂಡುಹೋಗಿ ಪಂಡಿತರ ಕೈಯಲ್ಲಿಟ್ಟ. ಪಂಡಿತರು ಜಾತಕವನ್ನು ಚೆನ್ನಾಗಿ ಪರಿಶೀಲಿಸಿ ರಾಮುಸ್ವಾಮಿಯ ಆಜೀವ ಭವಿಷ್ಯ ಬರೆದರು. ಒಂದು ಭಾನುವಾರ ನಾರಾಯಣಮೂರ್ತಿಯೊಡನೆ ಅವರ ಮನೆಗೆ ಹೋಗಿದ್ದಾಗ ಪಂಡಿತರು "ಗುರುವಾರ ಬಾಪ್ಪ, ದಿನ ಚೆನ್ನಾಗಿದೆ. ಅವತ್ತು ಅದನ್ನು ಓದಿ ಹೇಳ್ತೀನಿ" ಎಂದರು. ಪಂಡಿತರು ಮೂವತ್ತು ಪುಟಗಳ ಭವಿಷ್ಯ ಬರೆದಿದ್ದರು. ಅಷ್ಟು ಶ್ರಮವಹಿಸಿದ್ದ ಅವರಿಗೆ ಏನಾದರೂ ಕೊಡಬೇಕೆಂದು ರಾಮುಸ್ವಾಮಿಗೆ ಮನಸ್ಸಾಯಿತು. ದಾರಿ ಯಲ್ಲಿ ನಾರಾಯಣಮೂರ್ತಿಯನ್ನು ಕೇಳಿದ.

"ಲೈಫ್ ರೀಡಿಂಗಿಗೆ ಏನು ತೊಗೋತಾರೆ ಪಂಡಿತರು, ನಾರಾಯಣ ಮೂರ್ತಿ?"

"ನಿಂಗ್ಯಾಕೆ, ಅದು. ನೀನು ನನ್ನ ಸ್ನೇಹಿತಾಂತ ಏನೂ ತೊಗೊಳ್ದೆ, ಅವರಾಗವರೆ ಕೇಳಿ ಸಂತೋಷದಿಂದ ಬರೆದ್ಕೊಟ್ಟಿದಾರೆ."

"ಆದರೆ ನನ್ನ ಸಂತೋಷಕ್ಕೆ ನಾನು ಏನಾದರೂ ಕೊಡಬೇಡವೆ?"

"ಏನೂ ಬೇಡ ಕಣಯ್ಯ."

"ಇಲ್ಲ. ಅವರು ಸಾಮಾನ್ಯವಾಗಿ ತೊಗೊಳ್ಳೋದು ಎಷ್ಟು ಹೇಳು?"

"ತೊಗೊಳ್ಳೋದು ವಿಪರೀತ. ಇಪ್ಪತ್ತೈದು ರೂಪಾಯಿ ಇಲ್ಲದೆ ಅವರು ಲೈಫ್ ರೀಡಿಂಗ್ ಕೊಡೋದೇ ಇಲ್ಲ"

"ಓ. ಸರಿಯಪ್ಪ. ಅಷ್ಟು ಹೇಳೋದಕ್ಕೇನು!" ಎಂದ ರಾಮುಸ್ವಾಮಿ.

ಗುರುವಾರ ಸಂಜೆ ಆರು ಗಂಟೆಗೆ ರಾಮುಸ್ವಾಮಿ ಪಂಡಿತರ ಮನೆಗೆ ಹೋದ. ನಾರಾಯಣಮೂರ್ತಿಗೆ ಡ್ಯೂಟಿ ಇದ್ದುದರಿಂದ ಆಗ ಅವನಿಗೆ ಬರಲಾಗಲಿಲ್ಲ. ಪಂಡಿತರು ರಾಮುಸ್ವಾಮಿಯೊಬ್ಬನನ್ನೇ ಒಳಗಿನ ಕೋಣೆಯಲ್ಲಿ ಕೂಡಿಸಿಕೊಂಡು ಅವನ ಆಜೀವ ಭವಿಷ್ಯವನ್ನು ವಿವರವಾಗಿ ಓದಿ ಹೇಳಿದರು. ಭವಿಷ್ಯವನ್ನು ಮುಗಿಸಿ, ಪಂಡಿತರು "ಏನಾದರೂ ಕಹಿ ಇದ್ದರೆ ಅದನ್ನೇ ಮನಸ್ಸಿಗೆ ಹಚ್ಚಿಕೊಂಡು ಒದ್ದಾಡಬಾರದು. ಸಿಹಿ ಕಹಿ ಎಲ್ಲ ಒಂದೇ ಅಂತ ತೊಗೋಬೇಕಪ್ಪ" ಎಂದು ಹೇಳಿ ಭವಿಷ್ಯದ ಪುಸ್ತಕದ ಮೇಲೆ ಮಂತ್ರಾಕ್ಷತೆ, ಒಂದು ಮಲ್ಲಿಗೆ ಹೂ ಏರಿಸಿ ಏನೋ ಮಂತ್ರ ಹೇಳಿದರು. ರಾಮುಸ್ವಾಮಿಗೆ, ಆಗಲೇ ಪಂಡಿತರಿಗೆ ತನ್ನ ಕೈಲಾದ ಕಾಣಿಕೆಯನ್ನು ಅರ್ಪಿಸೋಣ, ಎನ್ನಿಸಿತು.

"ಇದಕ್ಕೆ ನಾನು ಏನು ಕೊಡಲಿ ಪಂಡಿತರೆ?" ಎಂದ.

"ಏನೂ ಬೇಡಪ್ಪ"

"ಛೆ ಛೆ, ಹಾಗಂದರೇನು?"

"ಹಾಗಾದರೆ ಬರವಣಿಗೆ ಛಾರ್ಜು ಕೊಡು. ಆ ಸೂರಿ ಎರಡು ದಿನ ಕಷ್ಟಪಟ್ಟು ಬರೆದಿದಾನೆ. ಅವನಿಗೆ ಕೊಟ್ಟುಬಿಡೋಣ."

"ಎಷ್ಟು?"

"ಐದು ರೂಪಾಯಿ ಕೊಡು ಸಾಕು."

ರಾಮುಸ್ವಾಮಿ ಮನಸ್ಸಿನಲ್ಲಿ ಮಾಡಿಕೊಂಡಿದ್ದಷ್ಟನ್ನೇ, ಅವನು ಜೇಬಿನಲ್ಲಿ ತಂದಿದ್ದುದಷ್ಟನ್ನೇ ಪಂಡಿತರು ಕೇಳಿದ್ದರು. ರಾಮುಸ್ವಾಮಿಗೆ ಆಶ್ಚರ್ಯವಾಯಿತು.

"ಸರಿ, ನಾನು ತಂದಿರೋದೂ ಅಷ್ಟೆ, ತೊಗೊಳ್ಳಿ" ಎಂದು ಐದು ರೂಪಾಯಿಯ ಒಂದು ನೋಟನ್ನು ಭಕ್ತಿಪೂರ್ವಕವಾಗಿ ಪಂಡಿತರಿಗೆ ಅರ್ಪಿಸಿದ.

ಪಂಡಿತರು ಬರೆದ ಆ ಭವಿಷ್ಯದರ್ಪಣ ಮನೆ ಸೇರಿದ ಮೇಲೆ ರಾಮುಸ್ವಾಮಿಯಲ್ಲಿ ತುಂಬ ಬದಲಾವಣೆ ಆಯಿತು. ಅವನು ಆಗಾಗ ಅದನ್ನು ತೆಗೆದುಕೊಂಡು ಗುಟ್ಟಾಗಿ ಓದಿ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕುತ್ತಿದ್ದ. ಬೀಗದಕೈಯನ್ನು ಸದಾ ತನ್ನ ಹತ್ತಿರವೇ ಇಟ್ಟುಕೊಂಡಿರುತ್ತಿದ್ದ. ಗೌರಿಗೆ ಈ ಗುಟ್ಟಿನ ಓದು ಗೊತ್ತಾಯಿತು. ಆದರೆ, ಅದೇನು ಎಂಬುದು ಬಗೆಹರಿಯಲಿಲ್ಲ. ಆ ವಿಷಯದಲ್ಲಿಯೇ ಗಂಡಹೆಂಡತಿಗೆ ಎರಡು ಮೂರು ದಿನ ಜಗಳವಾಯಿತು. ರಾಮುಸ್ವಾಮಿ ಗೌರಿಗೆ ನಿಜ ಹೇಳಲಿಲ್ಲ. "ನಿನಗ್ಯಾಕೆ ಅದು, ಸುಮ್ಮನೆ ಕೂತುಕೊ" ಎಂದು ಗದರಿಸಿಕೊಂಡ. ಗೌರಿ "ಇದ್ಯಾಕೆ ಈಚೆಗೆ ಹೀಗೆ ಮಾತಾಡ್ತೀರಿ?" ಎಂದಳು. ರಾಮುಸ್ವಾಮಿ "ಹೇಳಿದಷ್ಟು ಕೇಳಬೇಕು. ನೀನು ನೋಡೋದಲ್ಲ ಅದು" ಎಂದುಬಿಟ್ಟ.

ಗೌರಿಯ ಯೋಚನೆ ಬಲವಾಯಿತು. ಒಂದು ಭಾನುವಾರ ರಾತ್ರಿ, ಗಂಡ ಹತ್ತೂಕಾಲಾದರೂ ಬರಲಿಲ್ಲ. ಊಟವಿಲ್ಲದೆ ಹಾಸಿಗೆ ಹಾಸಿಕೊಂಡು ಗಂಡನಿಗಾಗಿ ಕಾಯುತ್ತ ಸುಮ್ಮನೆ ಬಿದ್ದುಕೊಂಡಿದ್ದಳು. ದೇಹ ಸುಮ್ಮನಿದ್ದರೂ ಮನಸ್ಸು ತುಂಬ ಕೆಲಸ ಮಾಡುತ್ತಿತ್ತು. 'ಗಂಡ ಬೆಂಗಳೂರಿಗೆ ಬಂದ ಮೇಲೆ ಬಹಳ ಬದಲಾಯಿಸಿಬಿಟ್ಟಿದಾರೆ; ಏನೋ ಇರಬೇಕು' ಎಂದು ತನ್ನ ಮನಸ್ಸು ಅನುಮಾನಪಡುತ್ತಿತ್ತು. ಆ ನಾರಾಯಣಮೂರ್ತಿಯ ಸಹವಾಸದಿಂದ ಹಾದಿ ತಪ್ಪಿಹೋಗಿದೆಯೊ ಏನೊ. ಆತ ಒಳ್ಳೆಯವನಲ್ಲ, ಎಂದು ಕಾಣುತ್ತದೆ. ಅವನು ತಪ್ಪದೆ ಪ್ರತಿ ಭಾನುವಾರವೂ ಸೈಕಲ್ಲಿನ ಮೇಲೆ ಶ್ರೀರಾಮುಪುರದಿಂದ ಚಾಮರಾಜ

ಪೇಟೆಗೆ ಬಂದು ತನ್ನ ಗಂಡನನ್ನು ಕರೆದುಕೊಂಡು ಹೋಗುವುದು ಎಲ್ಲಿಗೆ? ಹಳೆಯ ಸ್ನೇಹಿತ ಎಂದು ಹೇಳುತ್ತಾರೆ, ಆಗಲಿ. ಆದರೆ ಹಳೆಯ ಸ್ನೇಹಿತ ಆದ ಮಾತ್ರಕ್ಕೆ ಪ್ರತಿ ಭಾನುವಾರವೂ ಸಂಜೆಯೇ ಆತ ತಮ್ಮ ಮನೆಗೆ ಬರಲು ಕಾರಣವೇನು? ಹೊಸಬರು ಕೆಲವರು ಸ್ನೇಹಿತರಾಗಿದ್ದರೂ ಇವರಿಬ್ಬರೇ ಏಕೆ ಇಷ್ಟು ಹೊಂದಿಕೊಂಡಿದ್ದಾರೆ? ಇವರು ಪ್ರತಿ ಭಾನುವಾರವೂ ಎಲ್ಲಿಗೆ ಹೋಗುತ್ತಾರೆ? ಅರಸೀಕೆರೆಯಲ್ಲಿದ್ದಾಗ ಮತ್ತು ಬೆಂಗಳೂರಿಗೆ ಬಂದ ಹೊಸದರಲ್ಲಿ ತನ್ನ ಗಂಡ ಸ್ಕೂಲಿನಲ್ಲಿ, ಆಫೀಸಿನಲ್ಲಿ ನಡೆಯುವುದನ್ನೆಲ್ಲ ವಿವರವಾಗಿ ಹೇಳಿಕೊಳ್ಳುತ್ತಿದ್ದರು. ಪ್ರತಿಭಾನುವಾರ ಇಲ್ಲದಿದ್ದರೂ ಒಂದೊಂದು ಭಾನುವಾರವಾದರೂ ಅರಸೀಕೆರೆಯಲ್ಲಿ ಇಬ್ಬರೂ ವಾಕಿಂಗ್ ಹೋಗಿಬರುತ್ತಿದ್ದರು. ಏಕೆ, ಬೆಂಗಳೂರಿಗೆ ಬಂದಮೇಲೂ ಮೊದಲನೆಯ ಭಾನುವಾರ ಇಬ್ಬರೂ ಮಾರ್ಕೆಟ್ಟಿಗೆ ಹೋಗಿ ಬಂದಿದ್ದರು. ಆದರೆ ಈಚೆಗೆ ತುಂಬ ಬದಲಾಯಿಸಿಬಿಟ್ಟಿದ್ದಾರೆ. ಮಾತೆತ್ತಿದರೆ ಸಿಡಿಸಿಡಿಯಾಗುತ್ತಾರೆ. ಅವರ ಪೆಟ್ಟಿಗೆಯಲ್ಲಿ ಅದೇನೋ ಇದೆ. ಇಲ್ಲದಿದ್ದರೆ ಅವರು ಅಷ್ಟು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಏನಿರಬಹುದು?

'ಆ ನಾರಾಯಣಮೂರ್ತಿ ಕೆಟ್ಟ ಸಹವಾಸ ಮಾಡಿಸಿಬಿಟ್ಟಿದಾನೊ ಏನೊ! ಯಾವೋಳೋ ಗಂಟುಬಿದ್ದಿರಬೇಕು. ಅದೇ, ಅವಳ ಫೋಟೋನೊ, ಕಾಗದಾನೊ ಅವರು ಆಗಾಗ ನೋಡಿಕೊಳ್ಳುತ್ತಿರುತ್ತಾರೆ. ಗಂಡ ಹೆಂಡತಿಗೆ ಹೇಳದ ಗುಟ್ಟಿನ ವಿಷಯ ಅದೊಂದು ಬಿಟ್ಟರೆ ಬೇರೆ ಏನು? ಏನೂ ಇಲ್ಲ. ಅದೇ, ಅದೇ! ಆ ನಾರಾಯಣಮೂರ್ತಿಯ ನಡತೆ ಚೆನ್ನಾಗಿಲ್ಲ, ಎಂದು ಕಾಣಿಸುತ್ತದೆ. ಅವನನ್ನು ನೋಡಿದರೇ ಹೇಳುತ್ತದೆ; ಅವನ ಮುಖದ ಮೇಲೆ ಬ್ರಾಹ್ಮಣ ಕಳೆ ಕೂಡ ಇಲ್ಲ. ಕ್ರಿಶ್ಚಿಯನ್ ಇದ್ದ ಹಾಗಿದಾನೆ. ಅದಕ್ಕೆ ಸರಿಯಾಗಿ ಅವನ ಕೆಂಪುಗಣ್ಣು, ಕೋಟಿಲ್ಲದೆ, ಬರಿಯ ಷರಟಿನ ಕೆಳಗೆ ಮಾಸಿದ ನೀಲಿ ಷರಾಯಿ, ಎಣ್ಣೆ ಗಮುಟಿನ ಹ್ಯಾಟು, ಹಳೇ ಸೈಕಲ್ಲು ಎಲ್ಲ ಹೇಳುತ್ತವೆ ಅವನೇನೂ ಅಷ್ಟು ಒಳ್ಳೆಯವನಲ್ಲ ಎಂದು. ಇವರು ಅವನೊಡನೆ ಹೀಗೆ ಭಾನುವಾರವೆಲ್ಲ ಕಳೆದುಬಿಟ್ಟರೆ, ಇನ್ನೂ ಏನೇನು ಕೆಟ್ಟ ಚಾಳಿ ಕಲಿತುಬಿಡುತ್ತಾರೊ

ಏನೊ. ಹೀಗಾಗುತ್ತಾರೆ ಎಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಮದುವೆಯಾದ ಮೇಲೆ ಮೂರು ವರುಷ ತಂದೆಯಿಂದ ಮನಸ್ತಾಪ ಉಂಟಾಗಿತ್ತು. ಆದರೆ ಇವರು ಮಾತ್ರ ಎರಡನೆಯ ಬಾರಿ ತನ್ನನ್ನು ನೋಡಿದಾಗ ಹೊಂದಿಕೊಂಡರು. ಒಂದೆರಡು ದಿನಗಳಲ್ಲಿಯೇ ತುಂಬ ಹೊಂದಿಕೊಂಡುಬಿಟ್ಟರು. ರಸರಸವಾಗಿ ಮಾತಾಡಿದರು. ಅರಸೀಕೆರೆಗೆ ಹೋದಮೇಲಂತೂ ಅವರೇ ಹೇಳುವಂತೆ 'ಮುದ್ದಣಮನೋರಮೆ'ಯರಾಗಿಯೇ ಇದ್ದರು. ಆದರೆ ಈಗ? ಅವರೇಕೆ ಒಂದು ತರಹವಾಗಿಬಿಟ್ಟಿದ್ದಾರೆ. ತನ್ನನ್ನು ಕಂಡರೆ ಅಲಕ್ಷ್ಯವಿಲ್ಲದಿದ್ದರೂ ತನ್ನೊಡನೆ ಆ ಒಂದು ಗುಟ್ಟನ್ನು ಮಾತ್ರ ಹೇಳುತ್ತಿಲ್ಲ; ತಾನೇ ಕೇಳಿದರೆ ''ನಿಂಗ್ಯಾಕೆ ಕೂತ್ಕೋ'' ಎಂದು ಗದರಿಸಿಕೊಳ್ಳುತ್ತಾರೆ. ಇನ್ನೂ ಬಲವಂತ ಮಾಡಿದರೆ ರೇಗಿಬಿಡುತ್ತಾರೆ. ಅರಸೀಕೆರೆಯಲ್ಲಿರುವ ವರೆಗೆ ಅವರು ಒಂದು ದಿನವೂ ರೇಗಿರಲಿಲ್ಲ; ಆದರೆ ಈಗ? ಏನೋ ಆಗಿದೆ. ಇಲ್ಲದಿದ್ದರೆ ಅವರು ಇಷ್ಟು ಬದಲಾಯಿಸುತ್ತಿರಲಿಲ್ಲ' ಎಂದು ಮನಸ್ಸು ಏನೇನೋ ಅಂದುಕೊಂಡಿತು.

ಬೀದಿಯ ಬಾಗಿಲು ಸದ್ದಾಯಿತು.

ಗಂಡ ಬಂದರೆಂದು ತಿಳಿದುಕೊಂಡು ತಟ್ಟನೆ ಎದ್ದು ಹೋಗಿ ಬಾಗಿಲು ತೆರೆದಳು. ರಾಮಸ್ವಾಮಿ ಒಳಗೆ ಬಂದು, ಚಪ್ಪಲಿಯನ್ನು ಬಾಗಿಲ ಹಿಂದೆ ಬಿಟ್ಟು ಕೋಣೆಗೆ ಹೋದ.

''ಇದೇನಿದು ಇಷ್ಟು ಹೊತ್ತು? ಎಲ್ಲಿ ಹೋಗಿದ್ದಿರಿ?'' ಗೌರಿಗೆ ಕೇಳಬೇಕೆನ್ನಿಸಿತು, ಕೇಳಿದಳು.

"ನಾರಾಯಣಮೂರ್ತಿ ಮನೇಗೆ"

"ಇಷ್ಟೊತ್ತಾಯ್ತು?"

"ಹೌದು. ಅವರ ಮನೆ ಬಿಟ್ಟದ್ದೇ ತಡ. ನಂದು ಊಟ ಆಗಿದೆ."

''ಅದೇನು?"

''ಸುಮ್ನೆ. ಬಲವಂತ ಮಾಡಿದ. ಆಗಲೀಂತ ಕೂತ್ಕೊಂಡ್ಬಿಟ್ಟೆ."

''ನಿಜವಾಗೂ ಊಟ ಮಾಡಿದೀರ?''

''ಹೌದು. ಹಾಗಾದರೆ ನಾನು ಸುಳ್ಳು ಹೇಳ್ತಾ ಇದೀನೀಂತ ತಿಳಕೊಂಡ್ಯಾ?''

"ಇಲ್ಲ. ಸುಮ್ನೆ ಹೊತ್ತಾಯ್ತಲ್ಲಾಂತ ಹೇಳ್ತಾ ಇದೀರೇನೋಂತ"

"ಏನಿಲ್ಲ. ನನ್ನೂಟ ಆಗಿದೆ."

"ಹಾಗಾದರೆ ನನ್ನೂಟಾನೂ ಆಗಿದೆ."

"ಹಾಗಂದರೆ ?"

"ನಿಮ್ಮೂಟ ಆಗಿದ್ದರೆ ನನ್ನೂಟಾನೂ ಆಗಿದೆ."

"ಇದೇನಿದು ?"

ಗೌರಿ ಸುಮ್ಮನಿದ್ದಳು.

ರಾಮುಸ್ವಾಮಿ ಮತ್ತೆ ಕೇಳಿದ: "ಇದೇನಿದು ಹೀಗ್ಮಾತಾಡ್ತಾ ಇದೀಯೆ ?"

ಗೌರಿ ತಕ್ಷಣವೆ ಹೇಳಿದಳು: "ನಂಗೆ ತುಂಬ ಬೇಜಾರಾಗಿದೆ ಅಂದ್ರೆ !"

"ಯಾಕೆ ?"

"ಮತ್ತೆ ನೀವು ಇಷ್ಟೊತ್ತು ಮಾಡ್ಕೊಂಡು ಬಂದರೆ ?"

"ಈಗ ಆದದ್ದೇನು ?"

"ಏನೂ ಇಲ್ಲ. ನನಗೆ ತುಂಬ ಬೇಜಾರು."

"ಯಾಕೆ ಬೇಜಾರು ಮಾಡಿಕೊಳ್ಳಬೇಕು ?"

"ನೀವು ಪ್ರತಿ ಭಾನುವಾರಾನೂ ಹೀಗೆ ಹೋದರೆ ನನಗೇಕೊ ತುಂಬ ಭಯವಾಗುತ್ತೆ........"

"ಏನು ಗೌರಿ ನೀನು ಮಾತಾಡ್ತಾ ಇರೋದು ? ನನಗರ್ಥವಾಗೊಲ್ಲ !"

"ಹೌದು ನಿಮಗರ್ಥವಾಗೊಲ್ಲ"—ಎಂದು ಗೌರಿ ತಕ್ಷಣವೆ ಓಡಿ ಹೋಗಿ, ಮುಖ ಮುಚ್ಚಿಕೊಂಡು ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡಳು.

ರಾಮುಸ್ವಾಮಿಗೆ ಇದು ಅರ್ಥವಾಗಲಿಲ್ಲ. ಬಟ್ಟೆ ಬಿಚ್ಚಿ, ಒಳಗೆ ಹೋಗಿ ಕೈಕಾಲು ತೊಳೆದುಕೊಂಡು ಬಂದ. ಗೌರಿ ಮಲಗಿಕೊಂಡೇ ಅಳುತ್ತಿದ್ದಳು.

ಅವಳ ಹತ್ತಿರ ಬಂದು, ಹಣೆ ಎತ್ತಿ "ಯಾಕೆ ಗೌರಿ ?'' ಎಂದ.

ಗೌರಿ ಮುಖವನ್ನು ಎರಡು ಕೈಗಳಿಂದಲೂ ಮುಚ್ಚಿಕೊಂಡು ಹಾಸಿಗೆಗೆ ಅಂಟಿಕೊಂಡಂತೆ ಮಲಗಿದ್ದಳು. ಗಂಡನ ಪ್ರಶ್ನೆಗೆ ಉತ್ತರವಾಗಿ ಬಿಕ್ಕಿಬಿಕ್ಕಿ ಅಳತೊಡಗಿದಳು.

ರಾಮಸ್ವಾಮಿ ಅವಳನ್ನು ಮಗ್ಗುಲು ಮಾಡಿ, ಮತ್ತೆ ಅದೇ ಪ್ರಶ್ನೆ ಹಾಕಿದ.

ಗೌರಿ ಉತ್ತರ ಕೊಡಲಿಲ್ಲ. ಗಂಡ ಬಲವಂತದಿಂದ ಕೈ ಬಿಡಿಸಿದ. ಮುಖ ಕೆಂಪಾಗಿತ್ತು, ಕಂಬನಿಯಲ್ಲಿ ತೊಳೆದಿತ್ತು, ಮುಂಗುರುಳೆಲ್ಲ ಒದ್ದೆಯಾಗಿತ್ತು.

"ಯಾಕೆ ಗೌರಿ ?" ಎಂದು ಮತ್ತೆ ಕೇಳಿದ.

"ನಿಜವಾಗೂ ಹೇಳಿ ನೀವು ಈಗ ಎಲ್ಲಿಗೆ ಹೋಗಿದ್ದಿರಿ ?"

"ಹಾಗಂದರೆ ?"

"ನೀವು ಈಗ ಎಲ್ಲಿಗೆ ಹೋಗಿದ್ದಿರಿ ?"—ಗಂಡನನ್ನೇ ನೋಡುತ್ತ ಗೌರಿ ಮತ್ತೆ ಪ್ರಶ್ನೆ ಹಾಕಿದಳು.

"ನೀನು ಹೇಳುವುದು ನನಗೆ ಅರ್ಥವಾಗೊಲ್ಲ. ಆಗಲೆ ಹೇಳಲಿಲ್ಲವೆ ? ನಾನು ನಾರಾಯಣಮೂರ್ತಿ ಮನೆಗೆ ಹೋಗಿದ್ದೆ."

"ನಿಜವಾಗೂ ಅಲ್ಲಿಗೇನ ಹೋಗಿದ್ದು ?"

"ನಿಜಾನೇ ಹೇಳ್ತಾ ಇರೋದು"

"ಇಲ್ಲ, ನೀವು ನಿಜ ಹೇಳ್ತಾ ಇಲ್ಲ''

"ಅದ್ಯಾ್ಯಗೆ ಹೇಳ್ತೀಯೆ ?"

"ಹೌದು. ನೀವು ಈಗ ಬದಲಾಯಿಸಿಬಿಟ್ಟಿದೀರಿ"

"ನಿನ್ನ ಮಾತು ಅರ್ಥವಾಗ್ತಿಲ್ಲ ಗೌರಿ?"

"ಹೌದು ನಿಮಗರ್ಥವಾಗೊಲ್ಲ. ಎಲ್ಲಿ ಅರ್ಥವಾಗುತ್ತೆ. ನಿಮ್ಮ ಮನಸ್ಸೆಲ್ಲ ಬೇರೆ ಕಡೆ ಇರೋವಾಗ ನನ್ನ ಮಾತು ಹೇಗೆ ಅರ್ಥವಾಗುತ್ತೆ."

"ಏನು ಹೀಗಂದ್ರೆ ಗೌರಿ ?"

"ನಿಮ್ಮ ಪೆಟ್ಟಿಗೇಲಿ ಇರೋದು ಏನು ?"

"ಏನಾದರೂ ಆಗಲಿ ನಿಂಗೇನು?"

"ಅದ್ಯಾಕೆ ನೀವು ಅದನ್ನ ನಂಗೆ ತೋರಿಸಲ್ಲ ?"

"ನೀನು ನೋಡಬಾರದು?"

"ಅದೇನು ಅಂಥ ಗುಟ್ಟೆಂದು ?"

"ಹೌದು. ಅದು ಗುಟ್ಟೆಂದೇ."

"ನನಗೆ ತೋರಿಸಲ್ವಾ ?"

"ಇಲ್ಲ."

"ದಯವಿಟ್ಟು ತೋರಿಸಿ ಅದನ್ನ?"

"ಇಲ್ಲ. ನೀನು ನೋಡಬಾರದು."

"ನಾನು ನೋಡಿದರೆ ಏನಾಗುತ್ತೆ ?"

"ಏನೊ. ನಾನು ತೋರಿಸಲ್ಲ"

"ನಾನೇ ನೋಡ್ತೀನಿ"

"ನೀನು ನೋಡಕೂಡದು"

"ಯಾಕೆ?"

"ಯಾಕೊ."

"ನಾನು ನೋಡ್ತೀನಿ. ಹೆಂಡತಿ ಆದೋಳಿಗೆ ಅಷ್ಟೂ ಹಕ್ಕಿಲ್ಲವೆ?"

"ಇಲ್ಲ. ನೀನು ನೋಡಕೂಡದು"

"ನೋಡ್ತೀನಿ"

"ಗೌರಿ, ನಿಂಗೇನು ತಲೆಗಿಲೆ ಕೆಟ್ಟದೆಯೊ! ಏನು ಹೀಗೆಲ್ಲ ಮಾತಾಡ್ತಾ ಇದೀಯೆ. ಯಾಕೊ ತಲೆ ಕೆಡಿಸಿಕೊಂಡ ಹಾಗೆ ಕಾಣುತ್ತೆ."

"ನಾನಲ್ಲ ತಲೆ ಕೆಡಿಸಿಕೊಂಡಿರೋಳು. ನೀವು."

"ಮುಚ್ಚು ಬಾಯಿ. ನೀನು ಇಷ್ಟೆಲ್ಲ ಮಾತಾಡ್ತೀಯೆ ಅಂತ ನಂಗೊತ್ತಿರಲಿಲ್ಲ."

"ನೀವೇ ಹೀಗೆಲ್ಲ ಮಾತಾಡಿಸ್ತಾ ಇರೋರು."

"ಒದ್ದು ಬಿಡ್ತೀನಿ ನೋಡು"

ತಕ್ಷಣವೆ ಗೌರಿ ಅಳುತ್ತಾ "ಹ್ಞು, ಒದೀರಿ. ನಿಮ್ಮ ಕೈಲಿ ಒದಸ್ಕೊಳ್ಳೋಕೇ ನಾನು ಬಂದಿರೋದು" ಎಂದು ನೆಟ್ಟಗೆ ಕುಳಿತು ಕೊಂಡಳು.

ರಾಮುಸ್ವಾಮಿಗೆ ಬೇಸರವಾಯಿತು.

"ಹೋಗ್ ನಡಿ, ನಿನ್ನ ಹತ್ತಿರ ಮಾತಾಡೊಲ್ಲ" ಎಂದು ಹೇಳಿ ತನ್ನ ಹಾಸಿಗೆಯನ್ನು ಒಂದು ಮಾರು ಆ ಕಡೆ ಎಳೆದುಕೊಂಡು ಮಲಗಿ ಮುಸುಕೆಳೆದುಕೊಂಡ. ಗೌರಿ ಮತ್ತೆ ಎರಡು ಕೈಗಳಲ್ಲಿಯೂ ಮುಖವಿಟ್ಟು ಅಳುತ್ತಾ ಬಿದ್ದುಕೊಂಡಳು.

* * * * *

ಅವಳು ಅಳುತ್ತಲೇ ಇದ್ದಳು.

ರಾಮುಸ್ವಾಮಿ ಸುಮ್ಮನೆ ಮುಸುಕು ಹಾಕಿಕೊಂಡು ಬಿದ್ದು ಕೊಂಡಿದ್ದ. ನಿದ್ದೆ ಬರುವಂತಿರಲಿಲ್ಲ.

ಗೌರಿ ಎಂದೂ ಅವನನ್ನು ಹಾಗೆ ಪ್ರಶ್ನಿಸಿರಲಿಲ್ಲ. ಅವನು ಎಂದೂ ಗೌರಿಯನ್ನು ಹಾಗೆ 'ಒದ್ದುಬಿಡ್ತೀನಿ' ಎಂದು ಬಯ್ದಿರಲಿಲ್ಲ.

ಅದುವರೆಗೂ ನಡೆಯದೇ ಇದ್ದುದು ನಡೆದುಹೋಯಿತು. ಅದಕ್ಕೆ ಕಾರಣವಿತ್ತು.

ಪಂಡಿತರು ಬರೆದುಕೊಟ್ಟ ಭವಿಷ್ಯ ಮನೆಯ ಪೆಟ್ಟಿಗೆ ಸೇರಿ ಮೂರು ತಿಂಗಳಾಗಿದ್ದರೂ ಗೌರಿಗೆ ಅದರ ಸುಳಿವು ಗೊತ್ತಾಗಿರಲಿಲ್ಲ. ಆ ಮೂರು ತಿಂಗಳಲ್ಲಿ ಅವನು ಮೂರು ನಾಲ್ಕು ಬಾರಿ ಅದನ್ನು ಹೊರಗೆ ತೆಗೆದು ನೋಡಿದ್ದ; ಆದರೆ ಗೌರಿಗೆ ಕಾಣದಂತೆ ಆ ಕೆಲಸ ಮಾಡಿದ್ದ. ಹಾಗೆಯೇ ಅವಳಿಗೆ ಗೊತ್ತಾಗದಂತೆಯೇ ಅದನ್ನು ಇಟ್ಟಿರಬೇಕೆಂದು ಅವನ ಆಸೆಯಾಗಿತ್ತು; ಆದರೆ ಒಂದು ದಿನ ಅವಳು ನೋಡಿಬಿಟ್ಟಳು! ರಾಮುಸ್ವಾಮಿ ತಕ್ಷಣವೆ ಅದನ್ನು ತೆಗೆದು ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿದ. ಗೌರಿ "ಅದೇನು?" ಎಂದು ಕೇಳಿದಳು. ರಾಮುಸ್ವಾಮಿ "ಏನೂ ಇಲ್ಲ" ಎಂದ. ಗೌರಿ "ಇತ್ತು, ಏನೋ ನೋಡ್ತಾಇದ್ದಿರಿ. ಯಾವುದೋ ಕಾಗದ ಇದ್ದಾಂಗಿತ್ತು" ಎಂದಳು. "ಇಲ್ಲ" ಎಂದ ಗಂಡ. ಹೆಂಡತಿ "ನೀವು ಮತ್ತೆ ಏನು ನೋಡ್ತಾಇದ್ದದ್ದು?" ಎಂದು ಕೇಳಿದಳು. ಗಂಡ

"ಏನೂ ಇಲ್ಲ" ಎಂದು ಹೇಳಿಬಿಟ್ಟ. "ನೀವು ಯಾವುದೋ ಕಾಗದ ಓದ್ತಾ ಇದ್ದಿರಿ. ನಾನು ನೋಡ್ದೆ" ಎಂದು ಮತ್ತೆ ಗೌರಿ ಹೇಳಿದಳು. ಅವಳ ಕುತೂಹಲ ಕಡಮೆಯಾದೀತೆಂದು ರಾಮಸ್ವಾಮಿ "ಯಾವುದೂ ಅಲ್ಲ, ನಿಂದೇ ಹಳೇ ಕಾಗದ. ಕೈಗೆ ಸಿಕ್ಕಿತು. ಹಾಗೇ ನೋಡ್ತಾ ಇದ್ದೆ" ಎಂದು ಸುಳ್ಳು ಹೇಳಿದ. ಆದರೆ ಆ ಉತ್ತರ ಅವಳ ಕುತೂಹಲವನ್ನು ಇನ್ನೂ ಕೆರಳಿಸಿತು. "ಎಲ್ಲಿ ನೋಡೋಣ ಆ ಕಾಗದ ಕೊಡಿ?" ಎಂದು ಕೇಳಿದಳು. ರಾಮಸ್ವಾಮಿ ಆ ಕಾಗದವನ್ನು ಅವಳಿಗೆ ಕೊಡುವ ಸ್ಥಿತಿಯಲ್ಲಿರಲಿಲ್ಲ. "ಅದನ್ನೇನು ನೋಡೋದು ಹೋಗು" ಎಂದು ಎದ್ದು ಹಿತ್ತಲ ಕಡೆಗೆ ಹೊರಟುಬಿಟ್ಟ.

ಗೌರಿ. "ಇಲ್ಲ, ನಾನು ನೋಡಬೇಕೂಂದ್ರೆ" ಎಂದಳು.

ರಾಮಸ್ವಾಮಿ ಹಿತ್ತಲ ಬಾಗಿಲ ಹತ್ತಿರ ನಿಂತು "ಅದನ್ನ ನೀನು ನೋಡಬಾರದು" ಎಂದ.

ನಿಜ. ಗೌರಿ ಅದನ್ನು ನೋಡಬಾರದು. ನೋಡಿದರೆ ಅವಳ ಮನಸ್ಸಿನ ಮೇಲೆ ಅದು ಕೆಟ್ಟ ಪರಿಣಾಮವನ್ನುಂಟುಮಾಡುತ್ತದೆ. ಪಂಡಿತರು ಎಲ್ಲ ವಿವರವಾಗಿ ಬರೆದುಬಿಟ್ಟಿದಾರೆ. ಅವರು ಬರೆದ ಅನೇಕ ವಿಷಯ ಬರೆದಂತೆಯೇ ನಡೆಯುತ್ತಿದೆ. ತಾನು ಆಗಾಗ ಪರೀಕ್ಷಿಸಿ ನೋಡುತ್ತಿದ್ದಾನೆ. ಪಂಡಿತರ ಭವಿಷ್ಯ ನೂರಕ್ಕೆ ತೊಂಬತ್ತು ಭಾಗ ಸರಿಯಾಗಿರುವಂತಿದೆ. ಅವರು ಭವಿಷ್ಯ ಓದುವ ದಿನ ಮೊದಲು ಅವನ ಕೈ ನೋಡಿದರು. ಆಮೇಲೆ ಏನೇನೊ ಲೆಕ್ಕಾಚಾರ ಮಾಡಿ ಹೇಳಿದರು. ಹಾಗೆ ಹೇಳುವಾಗ ಇದ್ದಕ್ಕಿಂದ್ದಂತೆಯೆ "ನಿಮ್ಮ ಹೆಂಡತಿ ದಪ್ಪಗಿದ್ದಾರೆ, ಅಲ್ಲವೆ?" ಎಂದರು. ಅವರು ಗೌರಿಯನ್ನು ಕಣ್ಣಾರ ನೋಡದಿದ್ದರೂ ಹೀಗೆ ಹೇಳಿದುದನ್ನು ಕೇಳಿ ರಾಮಸ್ವಾಮಿಗೆ ಆಶ್ಚರ್ಯವಾಯಿತು. "ಇದು ಹೇಗೆ ಗೊತ್ತಾಗುತ್ತೆ ಪಂಡಿತರೆ?" ಎಂದು ಅವರನ್ನು ಕುತೂಹಲದಿಂದ ಕೇಳಿದ. ಪಂಡಿತರು "ಹೌದು, ಗೊತ್ತಾಗುತ್ತೆ. ಎಲ್ಲ ಲೆಕ್ಕಾಚಾರ ಸರಿಯಾಗಿ ಲೆಕ್ಕ ಮಾಡಿದರೆ ಸರಿಯಾದ ವಿಷಯ ತಿಳಿಯುತ್ತೆ" ಎಂದರು. ಪಂಡಿತರಿಗೆ ಒಂದು ವಿಷಯ ತಿಳಿಸಬೇಕೆನ್ನಿಸಿತು. "ನನ್ನ ಹೆಂಡತಿ

ಇಷ್ಟು ದಪ್ಪ ಆಗಿರಲಿಲ್ಲ. ನಾನು ಮದುವೆ ಮಾಡಿಕೊಳ್ಳೋದಕ್ಕೆ ಮುಂಚೆ, ಈ ಸಂಬಂಧ ಹೇಗಿರುತ್ತೇಂತ ತಮ್ಮನ್ನ ಕೇಳೋಕೆ ಬಂದಾಗ ಹುಡುಗಿ ತೆಳ್ಳಗೆ ಬೆಳ್ಳಗೆ ಚೆನ್ನಾಗಿದಾಳೆ, ಅಂದಿರಿ. ಮದುವೇಲಿ ತೆಳ್ಳಗೇ ಇದ್ದಳು. ಈಚೆಗೆ ದಪ್ಪ ಆಗಿಬಿಟ್ಟಿದಾಳೆ!" ಎಂದು ನಕ್ಕ. ಪಂಡಿತರು "ಕೆಲವರು ಹಾಗಾಗ್ತಾರೆ. ಚಿಕ್ಕಂದಿನಲ್ಲಿ ತೆಳ್ಳಗಿರ್‍ತಾರೆ. ಅದರಲ್ಲೂ ಹೆಂಗಸರಲ್ಲಿ ಕೆಲವರಿಗೆ ದೊಡ್ಡವರಾದ ಕೂಡಲೆ ಮೈ ಬಂದುಬಿಡುತ್ತೆ. ಅದರಲ್ಲಿ ಎರಡು ತರಹ. ಕೆಲವರಿಗೆ ಆ ಮೈ ಹಾಗೇ ಇದ್ದುಬಿಡುತ್ತೆ. ಕೆಲವರಿಗೆ ಒಂದೆರಡು ಮಕ್ಕಳಾದ ಮೇಲೆ ಅದು ಹೋಗಿಬಿಡುತ್ತೆ" ಎಂದು ಶರೀರ ಶಾಸ್ತ್ರದ ಮೇಲೆ ಮಾತಾಡಿದರು. ರಾಮಸ್ವಾಮಿಗೆ ಆ ವಿಷಯ ಸ್ವಾರಸ್ಯವಾಗಿಯೇ ಇತ್ತು. ಆದರೆ ಸ್ವಲ್ಪ ಹೊತ್ತಿಗೆ ಮುಂಚೆ 'ಗೌರಿಗೆ ಮಕ್ಕಳಾಗುವ ಸೂಚನೆ ಇಲ್ಲ' ಎಂದು ಹೇಳಿದ್ದ ಭವಿಷ್ಯ ಪಂಡಿತರ ಮಾತು ಕೇಳಿ 'ಗೌರಿಯ ಮೈ ಹಾಗೇ ಇರುತ್ತದೆ' ಎಂದು ಹೇಳಿತು.

ಪಂಡಿತರು "ನಿನಗೆ ಮಕ್ಕಳಾಗಬೇಕು ಅಂತ ಇಷ್ಟವೋ ?" ಎಂದು ಕೇಳಿದರು.

ರಾಮಸ್ವಾಮಿ "ಇಲ್ಲ. ಆದರೆ ಆಗಲಿ. ಆಗದೇ ಇದ್ದರೆ ವ್ಯಥೆ ಇಲ್ಲ" ಎಂದ.

"ಹಾಗಾದರೆ ನಾನು ಹೇಳಬಹುದೋ ?"

"ಹೇಳಿ ಅದಕ್ಕೇನು !"

"ಅಲ್ಲ, ಬರವಣಿಗೇಲೇ ಬರೆದ್ಬಿಟ್ಟಿದೀನಿ. ಆದರೆ ಬಾಯಲ್ಲೂ ಹೇಳಲೋಂತ ?"

"ಹೇಳಿ ಪರವಾಯಿಲ್ಲ. ಅದೂ ಅಲ್ಲದೆ, ಆ ಬರೆದಿರೋದನ್ನೆಲ್ಲ ನೀವು ಓದ್ತೀರಲ್ಲವೆ, ಈಗ ?"

"ಹೌದು."

"ಆದ್ದರಿಂದ, ಹೇಳಿ, ಅದಕ್ಕೇನು. ಅಲ್ಲಿ ಬರೆದಿರೋದನ್ನ ತಾನೇ ನೀವು ಹೇಳೋದು !"

"ಹೌದು. ಹೇಳ್ತೀನಿ, ಕೇಳು. ನಿನಗೆ ಮಕ್ಕಳಾಗೋದಿಲ್ಲ. ಹಾಗೆ ಮಕ್ಕಳು ಬೇಕೇಬೇಕೂಂತ ಇಷ್ಟವಿದ್ದರೆ ನಾಗಪ್ರತಿಷ್ಠೆ ಮಾಡಿಸಬೇಕು, ಸೇವೆ ಮಾಡಬೇಕು. ದೈವೇಚ್ಛೆ ಇದ್ದರೆ, ಅದರಿಂದ ಮಕ್ಕಳಾಗಬಹುದು. ದುಡ್ಡಿರೋರಿಗಾದರೆ ನಾನು ಏನು ಹೇಳ್ತೀನಿ ಗೊತ್ತೆ" ಎಂದು ಪಂಡಿತರು ನಗುತ್ತಾ "ಇದರ ಜೊತೆಗೆ ಇನ್ನೊಂದಿರಲೀಂತ ಎರಡನೇ ಮದುವೆ ಮಾಡ್ಕೋಬೇಕೂಂತೀನಿ!" ಎಂದರು.

ಪಂಡಿತರಿಗೆ ಇಂಥ ವಿಷಯ ಮಾತಾಡುವುದು ಸಾಮಾನ್ಯವಾಗಿ ಬಿಟ್ಟಿತ್ತು. ಕೇಳುವವರ ಮೇಲೆ ಆ ವಿಷಯ ಎಂಥ ಪರಿಣಾಮವನ್ನುಂಟು ಮಾಡುತ್ತದೆ, ಎಂಬುದನ್ನು ಅವರು ಹೆಚ್ಚು ಗಮನಿಸುತ್ತಿರಲಿಲ್ಲ. ಕಟು ವಾದ ಕಹಿಯನ್ನೇ ನಗುತ್ತಾ ಹೇಳಿಬಿಡುತ್ತಿದ್ದರು. ದಿನ ಬೆಳಗಾದರೆ ಅದೇ ಕೆಲಸ ಮಾಡುವ ಅವರಿಗೆ ಅದು ಸಾಮಾನ್ಯವಾಗಿತ್ತು.

ರಾಮುಸ್ವಾಮಿ "ಸಾಕು ಸಾಕು. ಈಗಿನ ಕಾಲದಲ್ಲಿ ಒಂದು ಮದುವೆ ಮಾಡಿಕೊಳ್ಳೋದೇ ಕಷ್ಟ. ಇನ್ನು ಎರಡು ಮದುವೆ ಮಾಡಿ ಕೊಂಡು ಏನು ಮಾಡೋದು. ಮಕ್ಕಳಿಲ್ಲದಿದ್ದರೂ ಚಿಂತೆಯಿಲ್ಲ. ಇಬ್ಬರ ಹೆಂಡತೀರ ಕಾಟ ಬೇಡ" ಎಂದು ಅವನೂ ನಕ್ಕ.

ಆದರೆ ಈಚೆಗೆ ಅವನ ಅಭಿಪ್ರಾಯ ಬದಲಾಯಿಸಿತ್ತು. ಹೆಂಡತಿ ಮನೆಗೆ ಬಂದು ಐದು ವರ್ಷ ಕಳೆದರೂ ಮಕ್ಕಳಾಗುವ ಸೂಚನೆ ಕಂಡು ಬರಲಿಲ್ಲ. ಪೆಟ್ಟಿಗೆಯಲ್ಲಿದ್ದ ಭವಿಷ್ಯ "ಹೌದು, ಗೌರಿಗೆ ಮಕ್ಕಳಾಗುವು ದಿಲ್ಲ" ಎಂದು ಹೇಳುತ್ತಿತ್ತು. ತಾಯಿಯ ಶ್ರಾದ್ಧದ ದಿನ ಬಿದ್ದ ಕನಸು ಅವನ ತಲೆಯನ್ನು ಕೆಡಿಸಿಬಿಟ್ಟಿತ್ತು.

ಅಬ್ಬ! ಅದೆಂಥ ಕನಸು!

ರಾಮುಸ್ವಾಮಿ ತಮ್ಮ ಹಾಸನದ ಮನೆಯಲ್ಲೇ ಇದ್ದಾನೆ. ತಾಯಿ ಸೀತಮ್ಮ ಗೋಡೆಯ ಹತ್ತಿರ ಹಾಸಿಗೆಯ ಮೇಲೆ ಮಲಗಿಕೊಂಡಿದ್ದಾರೆ. ಅವರಿಗೆ ಏನೋ ಖಾಯಿಲೆ. ನರಳುತ್ತಿದ್ದಾರೆ. 'ರಾಮಣ್ಣಾ!' ಎಂದು ರಾಮುಸ್ವಾಮಿಯನ್ನು ಕರೆದರು. ರಾಮುಸ್ವಾಮಿ ಅವರ ಹತ್ತಿರಕ್ಕೆ ಹೋದ. ಅವರು 'ಬಾ ಕೂತ್ಕೊ' ಎಂದು ಮಗನನ್ನು ಹತ್ತಿರ ಕೂಡಿಸಿಕೊಂಡರು.

ರಾಮಸ್ವಾಮಿ 'ಏನಮ್ಮಾ?' ಎಂದು ಕೇಳಿದ. ಸೀತಮ್ಮ 'ನನ್ನನ್ನ ಹೀಗೇ ಕಳಿಸ್ಬಿಡ್ತೀಯಾ?' ಎಂದು ಕೇಳಿದರು. ರಾಮಸ್ವಾಮಿಗೆ ಉತ್ತರ ಹೇಳುವ ಶಕ್ತಿ ಇರಲಿಲ್ಲ. ಮತ್ತೆ ತಾಯಿ ಅದೇ ಪ್ರಶ್ನೆ ಕೇಳಿದಳು. ಇದ್ದಕ್ಕಿದ್ದಂತೆ ಹತ್ತಾರು ಕಡೆ ತಾಯಿಯ ಮುಖ ಕಾಣಿಸಿತು. ಎಲ್ಲ ಇವನನ್ನೇ ನೋಡಿ ಪುನಃ ಅದೇ ಪ್ರಶ್ನೆ ಹಾಕಿದುವು. ಮರುಕ್ಷಣದಲ್ಲಿಯೆ ತಾಯಿ ಒಬ್ಬಳೇ ಹಾಸಿಗೆಯ ಮೇಲೆ ಮಲಗಿಕೊಂಡಿರುವಂತೆ ಕಾಣಿಸಿತು. ರಾಮಸ್ವಾಮಿ ತಾಯಿಯ ಮುಖ ನೋಡಿದ. ಅವಳು ಬಿಕ್ಕಿಬಿಕ್ಕಿ ಅಳುತ್ತಿದ್ದಳು. ತಕ್ಷಣವೆ ಇವನಿಗೂ ಅಳು ಬಂತು. ತಾಯಿಯ ಎದೆಯ ಮೇಲೆ ಮಲಗಿ ಕೊಂಡು ಬಿಕ್ಕಿಬಿಕ್ಕಿ ಅಳತೊಡಗಿದ. ತಾಯಿ ಇವನನ್ನು ತಳ್ಳಿ, ಎದ್ದು ಬಿಟ್ಟಳು. "ಇಲ್ಲ. ನಾನು ಈ ಮನೇಲಿರೊಲ್ಲ. ಹೊರಟ್ಹೋಗ್ತೀನಿ" ಎಂದು ಹೊರಟುಬಿಟ್ಟಳು. ದೂರ ದೂರ ಹೋದಳು. ರಾಮಸ್ವಾಮಿ ಎದ್ದು ಅವಳ ಹಿಂದೆಯೇ ಹೋದ. ಆದರೆ ಸ್ವಲ್ಪ ದೂರದಲ್ಲಿಯೇ ಕಾಲೇಳದೆ ಬಿದ್ದುಬಿಟ್ಟ. ಹಾಗೆಯೇ ಮೊಳಕೈಯೂರಿ, ತಲೆಯೆತ್ತಿ ನೋಡಿದ. ತಾಯಿ ದೂರದಲ್ಲಿ ನಿಂತು, ಇವನನ್ನೇ ನೋಡುತ್ತಿದ್ದಳು. ಇವನು ತಾಯಿಯ ಮುಖವನ್ನೇ ನೋಡಿದ. ಆ ಮೂರ್ತಿ ಮತ್ತೆ ಅಳುತ್ತಾ 'ನನ್ನನ್ನು ಹೀಗೇ ಕಳಿಸಿಬಿಡ್ತೀಯಾ?' ಎಂದು ಕೇಳಿತು.

ತಕ್ಷಣವೆ ರಾಮಸ್ವಾಮಿಗೆ ಎಚ್ಚರವಾಯಿತು. ತಲೆ ಭಾರವಾಗಿತ್ತು; ಮೈ ಝುಲ್ಲೆಂದಿತು. 'ಥೂ ಎಂಥ ಕನಸು!' ಎಂದುಕೊಂಡು ಮತ್ತೆ ಮಲಗಿ ಕೊಂಡ.

ಮೂರನೆಯ ದಿನವೇ ಭಾನುವಾರ. ಸಂಜೆ ನಾರಾಯಣಮೂರ್ತಿ ಯೊಡನೆ ದಂಡಿನ ಕಡೆಗೆ ಹೊರಟಿದ್ದ. ಕಾರ್ಲ್‌ಟನ್ ಹೋಟಲಿನಲ್ಲಿ ಕಾಫಿ ಕುಡಿದು ಹೊರಗೆ ಬರುತ್ತಿರುವಾಗ, ಎದುರಿಗಿಟ್ಟಿದ್ದ ತೂಕದ ಮಿಷಿನ್ ಕಾಣಿಸಿತು. ನಾರಾಯಣಮೂರ್ತಿ 'ತೂಕ ನೋಡಿಕೊಂಡು ಬಹಳ ದಿನ ಆಯ್ತು ಕಣೋ' ಎಂದು ಅದರ ಹತ್ತಿರ ಹೋದ. ರಾಮಸ್ವಾಮಿಗೂ ತನ್ನ ತೂಕ ನೋಡಿಕೊಳ್ಳಬೇಕೆನ್ನಿಸಿತು. ಮೊದಲು ನಾರಾಯಣಮೂರ್ತಿ ಒಂದಾಣೆ ಹಾಕಿ ತೂಕ ನೋಡಿಕೊಂಡ. ಹೊರಗೆ ಬಂದ ಟಿಕೆಟ್ಟಿನಲ್ಲಿ

ನೂರ ಇಪ್ಪತ್ತು ಪೌಂಡು ತೋರಿಸಿತು. ಅನಂತರ, ರಾಮಸ್ವಾಮಿ ತೂಕದ ಯಂತ್ರದ ಮೇಲೆ ನಿಂತುಕೊಂಡು, ಒಂದಾಣೆ ಹಾಕಿದ. ತೂಕದ ಟಿಕೆಟ್ ಹೊರಗೆ ಬಂತು. "ಎಲ್ಲಿ ನೋಡೋಣ" ಎಂದು ನಾರಾಯಣ ಮೂರ್ತಿ ಮೊದಲು ಆ ಟಿಕೆಟ್ ತೆಗೆದುಕೊಂಡು ಗುಣಾಕಾರ ಹಾಕಿದ. ರಾಮಸ್ವಾಮಿಯ ತೂಕ ನೂರ ಹತ್ತು ಪೌಂಡು ಎಂದು ಗೊತ್ತಾಯಿತು. ರಾಮಸ್ವಾಮಿ "ನಿನಗಿಂತ ನಾನು ಹತ್ತು ಪೌಂಡು ಕಡಮೆ" ಎಂದ.

ನಾರಾಯಣಮೂರ್ತಿ ಒಂದು ನಿಮಿಷ ಸುಮ್ಮನಿದ್ದು "ಏನಾದರೇನು ಒಟ್ಟಿನ ಮೇಲೆ ನಿಂದೇ ಹೆಚ್ಚು!" ಎಂದು ನಕ್ಕ.

"ಹೇಗೆ?"

"ನನ್ನ ಹೆಂಡತಿ ತೊಂಬತ್ತು ಪೌಂಡಿದಾಳೆ, ನಾನು ನೂರಿಪ್ಪತ್ತು ಪೌಂಡಿದೀನಿ. ಇಬ್ಬರದೂ ಕೂಡಿದರೆ ಇನ್ನೂರ ಹತ್ತು ಪೌಂಡಾಗುತ್ತೆ. ಆದರೆ ನಿಮ್ಮದು ಒಟ್ಟು ಕೊನೇ ಪಕ್ಷ ಇನ್ನೂರೈವತ್ತು ಪೌಂಡಿಲ್ಲವೆ?" ಎಂದು ನಾರಾಯಣಮೂರ್ತಿ ರಾಮಸ್ವಾಮಿಯ ಪಕ್ಕೆ ತಿವಿದು ನಕ್ಕ.

ರಾಮಸ್ವಾಮಿ ಸ್ವಲ್ಪ ನಕ್ಕು ಸುಮ್ಮನಾದ.

ನಾರಾಯಣಮೂರ್ತಿ ಮತ್ತೆ "ಅಂದ್ಹಾಗೆ, ನಿನ್ನ ಹೆಂಡತಿ ಎಷ್ಟು ಪೌಂಡಿದಾಳೊ?" ಎಂದು ಕೇಳಿದ.

ರಾಮಸ್ವಾಮಿ "ನನಗ್ಗೊತ್ತಿಲ್ಲಪ್ಪ. ತೂಕ ಮಾಡಿಸಿಲ್ಲ."

"ಅಂದಾಜು?"

"ನನಗ್ಗೊತ್ತಾಗೊಲ್ಲಪ್ಪ."

"ನೂರಿಪ್ಪತ್ತು ಪೌಂಡಿಲ್ಲವೆ? ಮದುವೇಲಿ ಹಾಗಿರಲಿಲ್ಲ, ಅಲ್ಲವೆ ರಾಮಸ್ವಾಮಿ?"

"ಹೌದು. ಆಗ ತೆಳ್ಳಗಿದ್ದಳು. ಈಚೆಗೆ ಮೈ ಬಂದಿದೆ."

"ಕೆಲವರಿಗೆ ಮಕ್ಕಳಾಗದೇ ಹೋದರೆ ಹಾಗೆ ಮೈ ಬರುತ್ತಂತೆ."

"ಮೂರ್ತಿ, ನಿನ್ನೆ ರಾತ್ರಿ ಒಂದು ಕನಸು ಬಿತ್ತು ಕಣೋ. ನಿನ್ನೆದು ರಿಗೆ ಹೇಳಬೇಕೂಂತಿದ್ದೆ."

"ಏನು?"

"ನಾನು ಹಾಸನದ ಮನೇಲಿದ್ದಾಗ. ನಮ್ಮ ತಾಯಿ ಹಾಸಿಗೇ ಮೇಲೆ ಮಲಕ್ಕೊಂಡಿದ್ದರು. ಅವರಿಗೆ ಏನೋ ಕಾಯಿಲೆ; ನರಳ್ತಾ ಮಲಗಿದ್ದರು. ನನ್ನ 'ರಾಮಣ್ಣಾ' ಅಂತ ಕರೆದರು. ನಾನು ಹೋದೆ. ಹೋದ ಕೂಡಲೆ 'ಬಾ ಕೂತ್ಕೊ' ಅಂತ ಹತ್ತಿರ ಕೂಡಿಸಿಕೊಂಡರು. ನಾನು 'ಏನಮ್ಮಾ?' ಅಂದೆ. ಅವಕ್ಕೆ ನಮ್ಮ ತಾಯಿ 'ನನ್ನನ್ನ ಹೀಗೇ ಕಳಿಸಿಬಿಡ್ತೀಯಾ?' ಅಂತ ಕೇಳಿದರು. ನಾನು ಉತ್ತರ ಹೇಳಲಿಲ್ಲ. ನಮ್ಮ ತಾಯಿ ಮತ್ತೆ ಹಾಗೇ ಕೇಳಿದರು. ಆಮೇಲೆ ನಾನು ತಲೆ ಎತ್ತಿ ನೋಡಿದೆ. ಅಲ್ಲೊಂದು ಇಲ್ಲೊಂದು ಹತ್ತಾರು ಕಡೆ ನಮ್ಮ ತಾಯಿಮುಖ ಕಾಣಿಸಿತು. ಎಲ್ಲ ಒಟ್ಟಿಗೆ ಮತ್ತೆ ಅದೇ ಪ್ರಶ್ನೆ ಹಾಕಿದುವು. ಆಮೇಲೆ ಇದ್ದಕ್ಕಿದ್ದಂತೆ ಬದಲಾವಣೆ ಆಗಿಬಿಟ್ಟಿತು. ನಮ್ಮ ತಾಯಿ ಮೊದಲಿದ್ದಾಗೇ ಹಾಸಿಗೆ ಮೇಲೆ ಮಲಕ್ಕೊಂಡಿದ್ದರು. ನಾನು ಅವರ ಮುಖ ನೋಡಿದೆ. ಅವರು ಬಿಕ್ಕಿಬಿಕ್ಕಿ ಅಳ್ತಾ ಇದ್ದರು. ನನಗೂ ಅಳು ಬಂತು. ಅಳುವುದಕ್ಕೆ ಮೊದಲುಮಾಡಿದೆ. ನಮ್ಮ ತಾಯಿ ನನ್ನ ಆಚೆ ತಳ್ಳಿ ಎದ್ದು ಹೊರಟುಬಿಟ್ಟರು. 'ಇಲ್ಲ ನಾನು ಈ ಮನೇಲಿ ಇರೋಲ್ಲ, ಹೊರಟ್ಹೋಗ್ತೀನಿ' ಅಂತ ಕೂಗಿಕೊಂಡು ಹೊರಟುಹೋದರು. ನಾನೂ ಎದ್ದು ಅವರ ಹಿಂದೆ ಹೊರಟೆ. ಅವರು ಬಹಳ ದೂರ ಹೋದರು. ಅವರ ಹಿಂದೆ ಹೋಗೋಕೆ ನನ್ನ ಕೈಯಲ್ಲಾಗಲಿಲ್ಲ. ಕಾಲು ಕುಸಿದು ಹೋಯಿತು, ಬಿದ್ದುಬಿಟ್ಟೆ. ನಮ್ಮ ತಾಯಿ ದೂರದಲ್ಲಿ ನಿಂತುಕೊಂಡು ನನ್ನನ್ನೇ ನೋಡ್ತಾ ಇದ್ದರು. ನಾನು ಅವರ ಮುಖಾನೇ ನೋಡಿದೆ. ಅವರು ಮತ್ತೆ ಅಳ್ತಾ 'ನನ್ನನ್ನ ಹೀಗೇ ಕಳಿಸಿಬಿಡ್ತೀಯಾ?' ಅಂದರು. ತಕ್ಷಣವೆ ನಂಗೆ ಎಚ್ಚರವಾಗ್ಹೋಯ್ತು. ಆವಾಗ ಮೈಯೆಲ್ಲ ಒಂದು ತರಹ ಜುಮ್ಮೆಂದಿತು. ಏನಿದರರ್ಥ ಹೇಳು ಮತ್ತೆ; ದೊಡ್ಡದಾಗಿ ಕನಸು ಸುಮ್‌ಸುಮ್ನೆ ಬೀಳೊಲ್ಲ. ಅದಕ್ಕೆ ಅರ್ಥ ಇದ್ದೇ ಇರುತ್ತೇಂತ ಹೇಳ್ತೀಯಲ್ಲ?"

ನಾರಾಯಣಮೂರ್ತಿ "ಹೌದು, ಅರ್ಥ ಇರುತ್ತೆ. ಇದಕ್ಕೂ ಅರ್ಥ ಇದ್ದೇ ಇದೆ. ನಿಮ್ಮ ತಾಯಿ ಬಂದು ಏನು ಹೇಳಿದರು ಕನಸಿನಲ್ಲಿ?" ಎಂದು ಕೇಳಿದ.

"ನನ್ನನ್ನ ಹೀಗೇ ಕಳಿಸಿಬಿಡ್ತೀಯಾಂತ."

ನಾರಾಯಣಮೂರ್ತಿ ಮಾತನಾಡದೆ ಸ್ವಲ್ಪ ಹೊತ್ತು ಸುಮ್ಮನೆ ನಡೆದ. ಇಬ್ಬರೂ ನಗರದ ಕಡೆಗೆ ಹೊರಟಿದ್ದರು. ಆಗಲೆ ಕಬ್ಬನ್ ಪಾರ್ಕ್ ದಾಟಿ ಮುಂದೆ ನಡೆದಿದ್ದರು. ನಾರಾಯಣಮೂರ್ತಿಗೆ ಆ ಪ್ರಶ್ನೆ ಅರ್ಥವಾಗಲಿಲ್ಲ.

"ನನಗೆ ಯಾಕೊ ಈ ಪ್ರಶ್ನೇನೇ ಅರ್ಥವಾಗ್ತಿಲ್ಲಪ್ಪ!"

"ನೋಡ್ಡಾ. ಇಷ್ಟೇನ? ಹೇಳ್ತೀನಿ, ಕೇಳು. ನಮ್ಮ ತಾಯಿ ಸಾಯೋವಾಗ ನನ್ನ ಕರೆದರು. ನಾನು ಅವರ ಹಾಸಿಗೇ ಹತ್ತಿರ ಹೋಗಿ ಕೂತ್ಕೊಂಡೆ. ಆಗ ಅವರು ಇದೇ ಮಾತಾಡಿದರು. ನನಗೆ ಮಕ್ಕಳಾಗೋದಿಲ್ಲ, ಅನ್ನೋದೇ ಅವರಿಗೆ ದೊಡ್ಡ ಯೋಚನೆ ಆಗಿಬಿಟ್ಟಿತ್ತು. ಆದ್ದರಿಂದ ಅವರು ನನ್ನನ್ನ ಆ ಪ್ರಶ್ನೆ ಕೇಳಿದರು. ಈಗ ಅರ್ಥವಾಯ್ತೊ ನಿನಗೆ?"

"ಅರ್ಥವಾಯ್ತು. ನೋಡ್ಡಾ, ನಿನಗೆ ಮಕ್ಕಳಾಗೊಲ್ಲ ಅನ್ನೋದು ತಿಳಿದಿದೆ. ಎಲ್ಲೋ ಅದೇ ಯೋಚನೆ ಮಾಡ್ತಾ ಮಲಗಿದ್ದೀಂತ ಕಾಣುತ್ತೆ. ನಿಮ್ಮ ತಾಯಿ ನೆನಪೂ ಆಗಿರಬೇಕು. ಆದ್ದರಿಂದ ಹಾಗೆ ಕನಸು ಬಿದ್ದಿದೆ."

"ಹೌದು. ನಿನ್ನೆ ನಮ್ಮ ತಾಯಿ ಸೆರಿಮನೀ ತಾನೆ. ಅದರದ್ದೇ ರವೆ ಉಂಡೆ ಮಧ್ಯಾಹ್ನ ನೀ ತಿಂದಿದ್ದು"

"ಓ. ನೋಡ್ಡಾ. ನಾ ಹೇಳೋದು ಸರಿ. ನೀನೆಲ್ಲೊ, ಅಪ್ಪ ಆಗೊಲ್ಲಾಂತ ಅಳ್ತಾ ಮಲಗಿದ್ದೀಂತ ಕಾಣುತ್ತೆ." ಎಂದು ನಾರಾಯಣಮೂರ್ತಿ ಗೆಳೆಯನ ಮುಖ ನೋಡಿ ನಕ್ಕ.

ರಾಮುಸ್ವಾಮಿ "ಇಲ್ಲಪ್ಪ. ಆಗದಿದ್ರೇನು!" ಎಂದು ತಾನೂ ನಕ್ಕ.

ಆದರೆ ಒಳಗೆ ಹೃದಯ ಹೀಗಾಯಿತಲ್ಲ, ಎಂದು ಹಲುಬುತ್ತಿತ್ತು. ಮುಪ್ಪಿನ ತಾಯಿ ತಂದೆಗೆ ಒಬ್ಬನೇ ಮಗನಾಗಿ, ಸೊಸೆ ಮನೆಗೆ ಬರುವುದಕ್ಕೆ ಮೊದಲೇ, ತನಗೆ ಮೊಮ್ಮಕ್ಕಳಾಗುವುದಿಲ್ಲ ಎಂಬ ಸಿದ್ಧಾಂತವನ್ನು ನಂಬಿ ಅದೇ ಕೊರಗಿನಲ್ಲಿ ಕಣ್ಣು ಮುಚ್ಚಿದ ತಾಯಿಯನ್ನು ನೆನಸಿಕೊಂಡಾಗ ರಾಮುಸ್ವಾಮಿಗೂ ಸಂಕಟವಾಗುತ್ತಿತ್ತು. ರಂಗಣ್ಣನ

ಮನೆ, ಜಮೀನು, ಹೆಸರು ಎಲ್ಲ ರಾಮುಸ್ವಾಮಿಯೊಡನೆಯೇ ಹೋಗಬೇಕು, ಎನ್ನಿಸಿದಾಗ ಅವನಿಗೆ ತುಂಬ ದುಃಖವಾಯಿತು. ದಿನದಿನಕ್ಕೂ ಈ ದುಃಖ ಹೆಚ್ಚಾಗತೊಡಗಿತು.

ಎರಡು ವರುಷದ ಹಿಂದೆ ಮದುವೆಯಾದ ಹೇಮಾವತಿ ಆಗಲೆ ಗಂಡು ಮಗನ ತಾಯಿಯಾಗಿದ್ದಳು. ಅದನ್ನು ನೆನಸಿಕೊಂಡಾಗಲಂತೂ "ನಿಜ. ಗೌರಿಗೆ ಮಕ್ಕಳಾಗುವುದಿಲ್ಲ." ಎನ್ನಿಸಿತು. ಕೆಲವರಿಗೆ ಮಕ್ಕಳಾಗುವುದು ತಡ. ಎರಡು ಮೂರು ವರುಷ ಆದ ಮೇಲೆ ಆಗುತ್ತದೆ, ಎಂದು ಹೇಳುವುದನ್ನು ಅವನು ಕೇಳಿದ್ದ. ಆದರೆ ಎರಡು, ಮೂರು, ನಾಲ್ಕು, ಐದು ವರುಷ ಕಳೆದರೂ ಆ ಆಸೆ ಈಡೇರುವ ಸೂಚನೆ ಕಂಡುಬರಲಿಲ್ಲ. ರಾಮುಸ್ವಾಮಿ ಒಳಗೊಳಗೇ ಕೊರಗುತ್ತಿದ್ದ. ತಾಯಿಯ ಕೊನೆಯ ಚಿತ್ರ ಅನೇಕ ಬಾರಿ ಅವನ ಮಾನಸ ಪಟದ ಮೇಲೆ ಮೂಡಿತ್ತು; ತಾಯಿ ಸೀತಮ್ಮ ಅನೇಕ ಬಾರಿ "ನನ್ನನ್ನ ಹೀಗೇ ಕಳಿಸಿಬಿಡ್ತೀಯ ?" ಎಂದು ಮಗನನ್ನು ಕೇಳಿದ್ದರು ; ಅನಂತಪಂಡಿತರು "ನಿನಗೆ ಮಕ್ಕಳಾಗೋದಿಲ್ಲ" ಎಂದು ಖಡಾಖಂಡಿತವಾಗಿ ಹೇಳಿಬಿಟ್ಟಿದ್ದರು.

ರಾಮುಸ್ವಾಮಿಗೆ ಹೆಂಡತಿ ದಪ್ಪಗಿರಬಾರದೆಂದು ಇಷ್ಟ. ಆದರೆ ಮದುವೆಯಾದ ಮೇಲೆ ಗೌರಿ ದಪ್ಪ ಆದಳು. ಅದರಲ್ಲಿಯೂ ಅವಳ ಹೊಟ್ಟೆ ಸ್ವಲ್ಪ ಹೆಚ್ಚು ಮುಂದುವರಿಯಿತು. ಒಂದು ದಿನ ಗುರುವಾರ ಸಂಜೆ, ಸೀತಾಪತಿ ಅಗ್ರಹಾರದಲ್ಲಿರುವ ರಾಘವೇಂದ್ರ ಸ್ವಾಮಿಗಳ ಮಠಕ್ಕೆ ಗಂಡ ಹೆಂಡತಿ ಇಬ್ಬರೂ ಹೋಗಿದ್ದರು. ಪೂಜೆ ಮಾಡಿಸಿಕೊಂಡು ವಾಪಸು ಬರುವಾಗ, ಗೌರಿಗೆ ಗುರುತಿರುವ ಯಾರೋ ಹೆಂಗಸರು ಅವಳನ್ನು ಮಾತಾಡಿಸಿದರು. ರಾಮುಸ್ವಾಮಿ ಸ್ವಲ್ಪ ಮುಂದೆ ಹೋಗಿ ನಿಂತುಕೊಂಡ. ಆದರೂ ಅವರು ಮಾತಾಡಿದ್ದು ಅವನಿಗೆ ಕೇಳಿಸಿಬಿಟ್ಟಿತು. ಆಕೆ ಗೌರಿಯ ಕ್ಷೇಮ ಸಮಾಚಾರ ವಿಚಾರಿಸಿಕೊಂಡು "ಎಷ್ಟು ತಿಂಗಳು ?'' ಎಂದು ಕೇಳಿದರು. ಗೌರಿ ತಲೆ ತಗ್ಗಿಸಿಕೊಂಡು ಏನೋ ಹೇಳಿದಳು. ಅವಳು ಹೇಳಿದ್ದು ರಾಮುಸ್ವಾಮಿಗೆ ಕೇಳಿಸಲಿಲ್ಲ. ಆಕೆ ಮಾತ್ರ "ಸುಳ್ಳು ಹೇಳ್ತೀಯಾ !" ಎಂದುಕೊಂಡು ಹೊರಟರು. ಹೌದು,

ಗೌರಿ ಹೊರಗಿನವರ ಕಣ್ಣಿಗೆ ಗರ್ಭಿಣಿಯಂತೆ ಕಾಣಿಸುತ್ತಿದ್ದಳು. ನಿತ್ಯ ಗರ್ಭಿಣಿ ಅಷ್ಟೆ!

ಇದೆಲ್ಲ ಅವನ ತಲೆ ಕೆಡಿಸಿಬಿಟ್ಟಿದ್ದುವು.

ಆದರೂ ಅವನು ಗೌರಿಯ ಎದುರಿನಲ್ಲಿ ಈ ವಿಷಯವಾಗಿ ಮಾತಾಡುತ್ತಿರಲಿಲ್ಲ. ಅವಳೂ ತುಂಬ ನೊಂದುಕೊಂಡಿದ್ದಳು. ಅವಳಿಗೂ ಅದೇ ಯೋಚನೆಯಾಗಿತ್ತು. ಜೊತೆಗೆ ಗಂಡ ಬದಲಾಯಿಸಿಬಿಟ್ಟಿದ್ದಾನೆ, ಎಂಬ ಯೋಚನೆ ಬೇರೆ ಅವಳ ತಲೆಯನ್ನು ಕೆಡಿಸಿತ್ತು. ಒಂದು ದಿನ ಅವಳೇ ಕೇಳಿಬಿಟ್ಟಳು. "ಮಕ್ಕಳಾಗಲಿಲ್ಲಾಂತ ನಿಮಗೆ ಯೋಚನೇನ? ಅದ್ಯಾಕೆ ಈಗ ಹೀಗಿದೀರಿ?'' ಎಂದಳು. ಗಂಡ "ಇಲ್ಲ, ಗೌರಿ. ನನಗೆ ಆ ಯೋಚನೆ ಇಲ್ಲ," ಎಂದು ಹೇಳಿದ.

"ಹಾಗಾದರೆ ನೀವು ಯಾಕೆ ನನ್ನನ್ನ ಕಂಡರೆ ಇಷ್ಟೊಂದು ಅಲಕ್ಷ್ಯ ಮಾಡ್ತೀರ?"

"ಇಲ್ವಲ್ಲ?"

"ಇಲ್ವೇ ಏನು?"

"ಹಾಗಾದರೆ ನಿಮ್ಮ ಪೆಟ್ಟಿಗೇಲಿರೋದನ್ನ ನನಗ್ಯಾಕೆ ತೋರಿಸ ಬಾರದು?''

"ಇಲ್ಲ. ನೀನು ಅದನ್ನ ನೋಡಬಾರದು''

"ಯಾಕೆ?"

"ಯಾಕೊ. ಅದನ್ನು ಕೇಳಬೇಡ"

"ನೀವು ಯಾಕೆ ಅದನ್ನ ಗುಟ್ಟಾಗಿಟ್ಟಿದೀರಿ?"

"ನೀನು ನೋಡಬಾರದೂಂತ?"

"ಅದೇನು ಅಂಥ ಗುಟ್ಟೆಂದು?"

"ಹೌದು. ಗುಟ್ಟೆಂದೇ. ಅದನ್ನ ನೀನು ನೋಡಬಾರದು." ಎಂದು ರಾಮಸ್ವಾಮಿ ಹೊರಗೆ ಹೊರಟುಬಿಟ್ಟ.

ನಿಜ. ಅದರಲ್ಲಿ ತುಂಬ ಗುಟ್ಟಿನ ವಿಷಯ ತುಂಬಿದೆ. ಆದ್ದರಿಂದಲೇ ರಾಮಸ್ವಾಮಿ ಅದನ್ನು ಐದು ವರ್ಷಗಳಿಂದ ಗುಟ್ಟಾಗಿಯೇ ಪೆಟ್ಟಿಗೆ

ಯಲ್ಲಿಟ್ಟುಕೊಂಡಿದ್ದಾನೆ. ಪಂಡಿತರು ಅವನ ಎಲ್ಲ ವಿಷಯಗಳನ್ನೂ ಅದರಲ್ಲಿ ಬರೆದಿದ್ದಾರೆ. ಅವನಿಗೆ ಗೌರಿಯಿಂದ ಮಕ್ಕಳಾಗುವುದಿಲ್ಲ. ಅವನಿಗೆ ಆರೇಳು ವರ್ಷ ವರ್ಗವಾಗುವುದಿಲ್ಲ. ಇದ್ದಲ್ಲೇ ಇರಬೇಕಾಗುತ್ತದೆ. ಆಮೇಲೆ ಬೇರೆ ಕಡೆಗೆ ವರ್ಗವಾಗೇ ಆಗುತ್ತದೆ. ಅವನು ಆಸ್ತಿಪಾಸ್ತಿ ಏನೂ ಮಾಡುವುದಿಲ್ಲ. ಇರುವ ಮನೆಯನ್ನೂ ನಲವತ್ತನೆಯ ವಯಸ್ಸಿನಲ್ಲಿ ಮಾರಿಬಿಡಬೇಕಾಗುತ್ತದೆ ಆದರೆ ಜಮೀನು ಮಾತ್ರ ಹಾಗೇ ಇರುತ್ತದೆ. ಸರಕಾರದ ಹುದ್ದೆಯಲ್ಲಿ ಅನುಕೂಲವಿದೆ. ಕೆಲಸ ಚೆನ್ನಾಗಿ ಮಾಡಿ ಮೇಲಧಿಕಾರಿಗಳ ಮೆಚ್ಚುಗೆಯನ್ನು ಸಂಪಾದಿಸಿ ಕೊಳ್ಳುವ ಯೋಗ್ಯತೆ ಇದೆ.....ಮುಂತಾದ ಅನೇಕ ವಿಷಯಗಳನ್ನು ಮೂವತ್ತು ಪುಟಗಳಲ್ಲಿ ಬರೆದಿದ್ದರು. ಕೊನೆಯಲ್ಲಿ ರಾಮಸ್ವಾಮಿ ನಲವತ್ತನಾಲ್ಕನೆಯ ವಯಸ್ಸಿನಲ್ಲಿ ದುರ್ಮರಣಕ್ಕೆ ತುತ್ತಾಗುವನೆಂದೂ ಹೇಳಿಬಿಟ್ಟಿದ್ದರು. ಅವರ ಹೇಳಿಕೆಯ ಪ್ರಕಾರ ಗೌರಿ ವಿಧವೆಯಾಗು ತ್ತಾಳೆ!

ಇದನ್ನೆಲ್ಲ ಗೌರಿ ನೋಡಬಾರದು. ನೋಡಿದರೆ ಅವಳ ಮನಸ್ಸು ಕೆಡುತ್ತದೆ. ಅವಳು ಈಗ ಮಾಡುತ್ತಿರುವ ಸೇವೆ ಪೂಜೆಗಳನ್ನೆಲ್ಲ ನಿಲ್ಲಿಸಿ ಬಿಡುತ್ತಾಳೆ. ಮುಂದೆ ಒಳ್ಳೆಯದಾದೀತೆಂಬ ಆಸೆಯ ಕಿರಣವನ್ನಿಟ್ಟು ಕೊಂಡಿರುವ ಅವಳ ಹೃದಯ ಕಗ್ಗತ್ತಲ ಕೂಪವಾಗುತ್ತದೆ. ಆಮೇಲೆ ಅವಳು ಹೇಗಾಗುತ್ತಾಳೊ! ಏನಾದರೂ ಅನಾಹುತ ಮಾಡಿಕೊಂಡು ಬಿಟ್ಟಾಳು! ಎಂದು ರಾಮಸ್ವಾಮಿ ಅವಳಿಗೆ ಆ ಗುಟ್ಟಿನ ಕಾಗದವನ್ನು ತೋರಿಸದೆ, ಐದು ವರುಷ ಮುಚ್ಚಿಟ್ಟಿದ್ದ.

ಆದರೆ ಅವನು ಸೋತ.

ಒಂದು ಭಾನುವಾರ ಸಂಜೆ ರಾಮಸ್ವಾಮಿ ನಾರಾಯಣಮೂರ್ತಿ ಯೊಡನೆ ಮನೆ ಬಿಟ್ಟು ಹೊರಟುಹೋದ ಮೇಲೆ ಸ್ವಲ್ಪ ಹೊತ್ತು ಬಿಟ್ಟು, ಗೌರಿ ಹೊರಗೆ ಬಂದಳು. ಬೀಗದಕ್ಕೆ ರಿಪೇರಿ ಮಾಡುವ ಒಬ್ಬ ಸಾಬಿ ಪಕ್ಕದ ಮನೆಯ ಹತ್ತಿರ ನಿಂತಿದ್ದ. ಅವರು "ಏನೂ ಇಲ್ಲ, ಹೋಗಪ್ಪ" ಎಂದು ಹೇಳಿ ಮುಂದೆ ಕಳಿಸಿದರು. ಸಾಬಿ ರಾಮಸ್ವಾಮಿಯ ಮನೆಯ

ಮುಂದೆ ಬಂದ. ನಿಂತಿದ್ದ ಗೌರಮ್ಮನನ್ನು ನೋಡಿ. "ಐತಾ ತಾಯಿ ಬೀಗ ರಿಪೇರಿಗಿಪೇರಿ, ಬೀಗದೆಸಲು ಮಾಡೋದುಗೀಡೋದು?" ಎಂದು ಕೇಳಿದ. ಗೌರಿಗೆ ತಕ್ಷಣವೆ ಹೊಳೆಯಿತು; "ಆ ಪೆಟ್ಟಿಗೆಗೆ ಏಕೆ ತಾನೇ ಒಂದು ಬೀಗದಕ್ಕೆ ಮಾಡಿಸಬಾರದು?" ಎನ್ನಿಸಿತು. "ಬಾಪ್ಪ," ಎಂದು ಅವನನ್ನು ಒಳಗೆ ಕರೆದಳು. ಸಾಬಿ ಪಡಸಾಲೆಗೆ ಬಂದ. ಗೌರಿ ಕೋಣೆ ಯಲ್ಲಿದ್ದ, ಗಂಡನ ಟ್ರಂಕನ್ನು ತಂದು ಅವನ ಮುಂದಿಟ್ಟಳು. "ನೋಡಪ್ಪ, ಇದರ ಬೀಗದ ಕೈ ಕಳೆದ್ಹೋಗಿದೆ. ಇದಕ್ಕೊಂದು ಬೀಗದ ಕೈ ಮಾಡಿಕೊಡು, ನೋಡೋಣ. ಆಗುತ್ತಾ?" ಎಂದು ಕೇಳಿದಳು. ಸಾಬಿ "ಓ ಆಗುತ್ತೆ ತಾಯಿ, ನಾಲ್ಕಾಣೆ" ಎಂದು ಒಂದು ಸಣ್ಣ ಬೀಗದಕ್ಕೆ ತೆಗೆದು ಕೊಂಡು, ಅದನ್ನು ಅರದಿಂದ ಉಜ್ಜಿ ಉಜ್ಜಿ, ಪೆಟ್ಟಿಗೆಯ ಬೀಗಕ್ಕೆ ಹಾಕಿ ತಿರುಗಿಸಿದ. ಬೀಗ ತೆಗೆದುಕೊಳ್ಳಲಿಲ್ಲ, ಮತ್ತೆ ಆತ ಅದನ್ನು ಉಜ್ಜಿ ಉಜ್ಜಿ ಪುನಃ ಬೀಗಕ್ಕೆ ಹಾಕಿ ನೋಡಿದ. ಬೀಗ ತೆಗೆದು ಕೊಂಡಿತು. "ಬಂತು ತಾಯಿ" ಎಂದು ಸಾಬಿ, ಮತ್ತೆ ಬೀಗ ಹಾಕಿದ. ಬೀಗ ಹಾಕಿಕೊಂಡಿತು. ತನ್ನ ಬಲಗೈಯಿಂದ ಚಿಲಕವನ್ನು ಬಲವಾಗಿ ಎಳೆದು ನೋಡಿದ. ಬೀಗ ಭದ್ರವಾಗಿ ಹಾಕಿಕೊಂಡಿತ್ತು. ಸಾಬಿ ಮತ್ತೊಮ್ಮೆ ಬೀಗ ತೆಗೆದ. ಮತ್ತೆ ಬೀಗ ಹಾಕಿ, ಬಲವಾಗಿ ಎಳೆದು ನೋಡಿದ; ಗೌರಿಯ ಮನಸ್ಸಿಗೆ ಸಮಾಧಾನವಾಯಿತು. ಸಾಬಿ "ಸರಿಯಾಗೈತೆ ತಾಯಿ" ಎಂದು ಎದ್ದ. ಗೌರಿ ಅಡಿಗೆ ಮನೆಗೆ ಹೋಗಿ, ನಾಲ್ಕಾಣೆ ತಂದು ಅವನ ಕೈಯಲ್ಲಿ ಹಾಕಿದಳು.

ಸಾಬಿ ಹೊರಟುಹೋದ ಮೇಲೆ ಗೌರಿ ಬೀದಿಯ ಬಾಗಿಲನ್ನು ಹಾಕಿಕೊಂಡು, ಟ್ರಂಕಿನೊಡನೆ ಕೋಣೆಗೆ ಬಂದಳು. ಪೆಟ್ಟಿಗೆಯನ್ನು ಅದು ಎಲ್ಲಿತ್ತೋ ಅಲ್ಲೇ ಇರಿಸಿದಳು. ಸಾಬಿ ಮಾಡಿಕೊಟ್ಟ ಬೀಗದಕ್ಕೆ ಕೈಯ ಲ್ಲಿಯೇ ಇತ್ತು; ಬೀಗ ತೆಗೆದು ನೋಡೋಣವೆಂದು ಬೀಗದಕ್ಕೆ ಹಾಕಿ ತಿರುಗಿಸಿದಳು. ಏಕೊ, ಬೀಗದಕ್ಕೆ ತಿರುಗಲೇ ಇಲ್ಲ. ಎಷ್ಟು ಬಲವಾಗಿ ತಿರುಗಿಸಿದರೂ ತಿರುಗಲಿಲ್ಲ. ಪೆಟ್ಟಿಗೆಯನ್ನು ಓರೆಯಾಗಿಟ್ಟುಕೊಂಡು ನೋಡಿದಳು; ಪಕ್ಕದಲ್ಲಿಯೇ ಇದ್ದ ರೂಲುದೊಣ್ಣೆಯಿಂದ ಬೀಗಕ್ಕೆ

ಒಂದೇಟು ಹಾಕಿದಳು; ಏನು ಮಾಡಿದರೂ ಬರಲಿಲ್ಲ. ಬೀಗದಕ್ಕೈ ಹೊರಗೆ ತೆಗೆದು ಮತ್ತೊಮ್ಮೆ ಹಾಕಿನೋಡೋಣ ಎನ್ನಿಸಿತು. ಹೊರಗೆ ತೆಗೆಯಲು ಎಡಗಡೆಗೆ ತಿರುಗಿಸಿದಳು. ಆದರೆ ಅದು ತಿರುಗಲೇ ಇಲ್ಲ. ಗೌರಿಗೆ ಹೆದರಿಕೆಯಾಯಿತು. ಏನು ಮಾಡೋದು, ಬೀಗದಕ್ಕೈ ಸಿಕ್ಕಿಹಾಕಿ ಕೊಂಡುಬಿಟ್ಟಿದೆ! ಬೀಗ ತೆಗೆಯುವುದಕ್ಕೆ ಬರದಿದ್ದರೂ ಚಿಂತೆಯಿಲ್ಲ, ಸದ್ಯ ಬೀಗದಕ್ಕೈ ಹೊರಗೆ ಬಂದರೆ ಸಾಕಪ್ಪ, ಎನ್ನಿಸಿಬಿಟ್ಟಿತು. ಏನೇನೋ ಮಾಡಿದಳು, ಆದರೆ ಬೀಗದಕ್ಕೈ ಅಲ್ಲಾಡಲಿಲ್ಲ. 'ಏನಪ್ಪಾ ಮಾಡೋದು' ಎಂದು ಯೋಚಿಸತೊಡಗಿದಳು. 'ಪಕ್ಕದ ಮನೆಯ ವಿಶಾಲಾಕ್ಷಮ್ಮನವರ ಮಗ ರಾಜುವನ್ನಾದರೂ ಕರೆದು ನೋಡೋಣ, ಅವನಿಗೆ ಬರಬಹುದು' ಎಂದುಕೊಂಡು ಅವನನ್ನು ಕರೆದುಕೊಂಡು ಬಂದಳು. ರಾಜು ಆಗ ತಾನೆ ಕಾಫಿ ಕುಡಿದು ಕ್ರಿಕೆಟ್ ಆಟಕ್ಕೆ ಹೊರಡುವುದರಲ್ಲಿದ್ದ. "ಬಾಪ್ಪ, ಸ್ವಲ್ಪ, ಬೀಗದಕ್ಕೈ ತೆಗೆದುಕೊಟ್ಟು ಹೋಗು" ಎಂದು ಅವರ ತಾಯಿಯ ಮೂಲಕ ಗೌರಿ ಅವನನ್ನು ಕೇಳಿಕೊಂಡಳು. ರಾಜು ಬಂದು ತನ್ನ ಕೈಲಾದ ಪ್ರಯತ್ನವನ್ನೆಲ್ಲ ಮಾಡಿದ. ಬೀಗದಕ್ಕೈಯನ್ನು ಹೊರಗೆ ತೆಗೆಯ ಲಾಗಲಿಲ್ಲ. "ರೂಲುದೊಣ್ಣೆ ಇದ್ದರೆ ತೊಗೊಂಡ್ಬನ್ನಿ" ಎಂದು ಕೇಳಿದ. ಗೌರಿ "ಅಲ್ಲೇ ಇದೆ" ಎಂದು ರೂಲುದೊಣ್ಣೆಯನ್ನು ತೆಗೆದುಕೊಟ್ಟಳು. ರಾಜು ಅದನ್ನು ತೆಗೆದುಕೊಂಡು ಬೀಗದಕ್ಕೈಗೆ ಆ ಕಡೆ ಈ ಕಡೆ ಎರಡು ಏಟು ಹಾಕಿದ. ಬೀಗದ ಮೇಲೂ ಒಂದು ಬಾರಿ ಕುಟ್ಟಿದ. ಚಿಲಕ ನೆಗ್ಗಿ ಹೋಯಿತು. ಬೀಗದ ಮೇಲೆ ಎರಡು ಮೂರು ಗುರುತಾಯಿತು; ಬೀಗದಕ್ಕೈ ಬಗ್ಗಿಹೋಯಿತು. ರಾಜು ಏನೇನೋ ಸಾಹಸ ಮಾಡಿದ. ಮೊಗಚೋಕ್ಕೈ, ಮೊಳೆ, ಸಣ್ಣ ಗುಂಡುಕಲ್ಲು ಎಲ್ಲ ಉಪಯೋಗಿಸಿ ಕೊನೆಗೂ ಗೆದ್ದ! ಬೀಗದಕ್ಕೈ ಹೊರಗೆ ಬಂತು. ಆದರೆ ಬೀಗ ತೆಗೆಯಲು ಮಾಡಿದ ಪ್ರಯತ್ನ ಪೆಟ್ಟಿಗೆ ನೋಡಿದ ಕೂಡಲೆ ಯಾರಿಗಾದರೂ ಗೊತ್ತಾ ಗುವಷ್ಟು ಗುರುತುಗಳು ಹಾಗೆಯೇ ಉಳಿದುವು.

ರಾತ್ರಿ ಒಂಬತ್ತು ಗಂಟೆಗೆ ರಾಮುಸ್ವಾಮಿ ಮನೆಗೆ ಬಂದ. ಜೇಬಿನ ಲ್ಲಿಟ್ಟಿದ್ದ ಪರ್ಸಿನಲ್ಲಿ ಚಿಲ್ಲರೆ ಹೆಚ್ಚಾಗಿದ್ದುದರಿಂದ ಬಹಳ ಭಾರವಾಗಿತ್ತು.

ಕೋಟು ಬಿಚ್ಚುವಾಗ ಆ ಭಾರ ಗೋಚರವಾಯಿತು. ಹೆಚ್ಚಾಗಿದ್ದ ಚಿಲ್ಲರೆಯನ್ನು ಪೆಟ್ಟಿಗೆಯಲ್ಲಿ ಹಾಕೋಣ, ಎಂದು ಪೆಟ್ಟಿಗೆ ತೆಗೆಯಲು ಹೋದ. ಪೆಟ್ಟಿಗೆಯ ಮೇಲೆ ಗೌರಿ ಒಂದು ಟವಲು ಹರಡಿದ್ದಳು. "ಇದ್ಯಾಕೆ, ಪೆಟ್ಟಿಗೆ ಮೇಲೆ ಟವಲು ಒಣಗಿಹಾಕಿದೀಯೆ, ಬೇರೆ ಜಾಗ ಇರಲಿಲ್ಲವೆ?" ಎಂದು ಕೇಳುತ್ತಾ ಟವಲನ್ನು ತೆಗೆದು ಅಲ್ಲಿಯೆ ನಿಲ್ಲಿಸಿದ್ದ ಬಟ್ಟೆಸ್ಟ್ಯಾಂಡಿನ ಮೇಲೆ ಹರಡಿದ. ಪಡಸಾಲೆಯಲ್ಲಿ ನಿಂತಿದ್ದ ಗೌರಿ ಒಳಗೆ ಹೊರಟುಹೋದಳು.

ಪೆಟ್ಟಿಗೆಯ ಮೇಲಿದ್ದ ಗುರುತುಗಳು ರಾಮುಸ್ವಾಮಿಗೆ ಕಾಣಿಸಿದುವು.

"ಗೌರಿ!" ಎಂದು ಕೂಗಿದ.

ಗೌರಿ ಬರಲಿಲ್ಲ.

"ಗೌರಿ?" ಎಂದು ಪುನಃ ಕೂಗಿದ.

ಗೌರಿ ಆಗಲೂ ಬರಲಿಲ್ಲ. ರಾಮುಸ್ವಾಮಿ ತಾನೇ ಪಡಸಾಲೆಗೆ ಬಂದು ಮತ್ತೊಮ್ಮೆ "ಗೌರಿ!" ಎಂದು ಗಟ್ಟಿಯಾಗಿ ಕೂಗಿ ಕರೆದ. ಆದರೂ ಉತ್ತರ ಬರಲಿಲ್ಲ. ಎಲ್ಲೋ ಹಿತ್ತಲಕಡೆಗೆ ಹೋಗಿರಬೇಕೆಂದು ಹಿತ್ತಲ ಬಾಗಿಲ ಕಡೆಗೆ ಹೋದ. ಆದರೆ ಹೋಗುವಾಗ, ಅಡಿಗೆಮನೆಯ ಬಾಗಿಲಲ್ಲಿ ಗೌರಿಯ ಸೆರಗು ಕಾಣಿಸಿತು. ಗೌರಿ ಗಂಡ ಆ ಕಡೆ ಬಂದುದನ್ನು ತಿಳಿದು ನಡುಮನೆಯಿಂದ ಅಡಿಗೆಮನೆಗೆ ಓಡಿಹೋದಳು. ರಾಮುಸ್ವಾಮಿ ಅಡಿಗೆಮನೆಗೇ ಬಂದ.

ಗೌರಿ ಅಡಿಗೆ ಒಲೆಯ ಮುಂದೆ ಕುಳಿತಿದ್ದಳು.

ರಾಮುಸ್ವಾಮಿ "ಗೌರಿ!" ಎಂದ.

"ಏನು?"—ಗೌರಿ ಕುಳಿತುಕೊಂಡೇ ಉತ್ತರಕೊಟ್ಟಳು.

"ನಾನು ಕೂಗಿದ್ದು ಕೇಳಿಸಲಿಲ್ಲವೆ?"

"ಇಲ್ಲ."

"ಇಲ್ಲೇ ಇದ್ದೆಯಲ್ಲ?"

"ಈಗ ಬಂದೆ."

"ಎಲ್ಲಿಗೆ ಹೋಗಿದ್ದೆ?"

"ಎಲ್ಲೂ ಇಲ್ಲ."

"ಹಾಗಾದರೆ ನಾನು ಕೂಗಿದ್ದು ಕೇಳಿಸಲಿಲ್ಲವೆ ?"

"ಇಲ್ಲ."

"ನನ್ನ ಪೆಟ್ಟಿಗೇನ ಯಾಕೆ ಮುಟ್ಟಿದಿ ನೀನು ?"

"ನಾನು ಮುಟ್ಟಲಿಲ್ಲ."

"ಸುಳ್ಳು ಹೇಳ್ತೀಯ ?"

"ಇಲ್ಲ. ನಾನು ಮುಟ್ಟಲಿಲ್ಲ."

"ಪೆಟ್ಟಿಗೆ ತೆಗೀಲಿಲ್ಲವೆ ?"

"ಇಲ್ಲ ತೆಗೀಲಿಲ್ಲ, ನನ್ನ ಹತ್ತಿರ ಬೀಗದಕ್ಕೆ ಇಲ್ಲ."

"ಬೀಗ ಮುರಿದು ತೆಗೀಲಿಲ್ಲವೆ ?"

"ಇಲ್ಲ. ನಾನಂಥ ಕೆಲಸ ಮಾಡಿಲ್ಲ."

"ಮತ್ತೆ ಸುಳ್ಳು ಹೇಳ್ತೀಯ. ನೋಡು ಬಾ ಇಲ್ಲಿ ಪೆಟ್ಟಿಗೇನ. ಹಾಳ್‌ಮಾಡಿಬಿಟ್ಟಿದೀಯೆ !"

ಎಂದು ಕೂಗುತ್ತಾ ಕೋಣೆಗೆ ಹೋದ. ಬೀಗದಕ್ಕೆ ತೆಗೆದುಕೊಂಡು ಪೆಟ್ಟಿಗೆಯ ಬೀಗ ತೆಗೆಯಲು ಹೋದ. ಹೇಗೆ ಹೇಗೆ ತಿರುಗಿಸಿದರೂ ಬೀಗ ಬರಲಿಲ್ಲ. ಚಿಲಕ, ಬೀಗ, ಪೆಟ್ಟಿಗೆಯ ಹಣೆ ಎಲ್ಲ ಜಜ್ಜಿಹೋಗಿದ್ದುವು. ರಾಮುಸ್ವಾಮಿಯ ಕೋಪ ಹೆಚ್ಚಾಯಿತು.

"ಗೌರಿ!" ಎಂದು ಅಲ್ಲೇ ಕುಳಿತು ಗರ್ಜಿಸಿದ.

ಹೆದರಿಕೊಂಡು ಗೌರಿ ಹೊರಗೆ ಬರಲಿಲ್ಲ.

ರಾಮುಸ್ವಾಮಿ "ಬರ್ತೀಯೋ ಇಲ್ಲವೋ!" ಎಂದು ಮತ್ತೊಂದು ಕೂಗು ಹಾಕಿದ.

ಗೌರಿ ಬರಲಿಲ್ಲ.

ಗಂಡನ ಕೋಪ ಮಿತಿ ಮೀರಿತು. ತಕ್ಷಣವೆ ಎದ್ದು ಅಡಿಗೆಮನೆಗೆ ಹೋದ. ಉರಿಯುತ್ತಿದ್ದ ಅಡಿಗೆ ಒಲೆಯನ್ನೇ ನೋಡುತ್ತ ಗೌರಿ ಕುಳಿತಿದ್ದಳು. ಉರಿಯ ಕೆಂಬೆಳಕು ಅವಳ ಮುಖದ ಮೇಲೆ ಆಡುತ್ತಿತ್ತು. ರಾಮುಸ್ವಾಮಿ ಓಡಿಬಂದು ಅವಳ ರಟ್ಟೆ ಹಿಡಿದುಕೊಂಡು, "ಬಾ ಇಲ್ಲಿ" ಎಂದು ಎಳೆದ.

ಗೌರಿ ಜಗ್ಗಿ ಕುಳಿತುಕೊಂಡಳು.

ರಾಮುಸ್ವಾಮಿಗೆ ತಡೆಯಲಾಗಲಿಲ್ಲ. ಬೆನ್ನಿನ ಮೇಲೆ 'ಧೊಪ, ಧೊಪ, ಧೊಪ' ನಾಲ್ಕು ಗುದ್ದು ಗುದ್ದಿದ. ಗೌರಿ "ಅಯ್ಯೋ" ಎಂದು ಕಿರಿಚಿದಳು. ತುಂಬ ನೋವಾಯಿತೊ ಏನೊ, ಅಳುತ್ತಾ ಹಾಗೆಯೇ ನೆಲದ ಮೇಲೆ ಬಿದ್ದುಕೊಂಡಳು. ರಾಮುಸ್ವಾಮಿ ಕೋಣೆಯ ಕಡೆಗೆ ಹೊರಟುಬಿಟ್ಟ.

ತಾನು ಹೊರಗೆ ಹೋಗಿದ್ದಾಗ ಗೌರಿ ಪೆಟ್ಟಿಗೆ ಒಡೆದು ಭವಿಷ್ಯ ನೋಡಿಬಿಟ್ಟಿದ್ದಾಳೆ, ಎನ್ನಿಸಿದಾಗ ಅವನ ಕೋಪ ಮಿತಿ ಮೀರಿತು. ತಕ್ಷಣವೆ ಅಡಿಗೆಮನೆಗೆ ಹೋಗಿ ಗೌರಿಯನ್ನು ಶಿಕ್ಷಿಸಿದ. ಆದರೆ ಅವಳು 'ಅಯ್ಯೋ' ಎಂದು ಅಳುತ್ತಾ ನೆಲದ ಮೇಲೆ ಉರುಳಿಕೊಂಡಾಗ ಅಲ್ಲಿ ನಿಲ್ಲಲಾಗಲಿಲ್ಲ, ಕೋಣೆಗೆ ಬಂದುಬಿಟ್ಟ.

'ನಾನು ಅದನ್ನು ಜೋಪಾನ ಮಾಡಿದ್ದುದು ಅವಳಿಗೋಸ್ಕರ. ನನಗೋಸ್ಕರ ಅಲ್ಲ. ಅದನ್ನು ಓದಿದರೆ, ಅದು ಅವಳ ಮನಸ್ಸಿನ ಮೇಲೆ ತುಂಬ ಕೆಟ್ಟ ಪರಿಣಾಮವನ್ನುಂಟುಮಾಡಬಹುದು ಎಂದು ತಿಳಿದು ನಾನು ಅದನ್ನು ಅವಳಿಗೆ ತೋರಿಸಿರಲಿಲ್ಲ. ಆದರೆ ಈಗ ಅವಳು ಪೆಟ್ಟಿಗೆ ಒಡೆದು ನೋಡಿಬಿಟ್ಟಿದಾಳೆ! ಅಯ್ಯೊ, ಮುಂದೆ ಏನು ಅನಾಹುತ ಸಂಭವಿಸ ಬಹುದೊ'–ಎನ್ನಿಸಿದಾಗ 'ಥೂ ಸುಡುಗಾಡು ಭವಿಷ್ಯ!' ಎಂದುಕೊಂಡ. ಬೀಗದಕೈ ತೆಗೆದುಕೊಂಡು ಪುನಃ ಬಾಗಿಲು ತೆಗೆಯಲು ಪ್ರಯತ್ನಿಸಿದ. ಬೀಗದಕೈ ತಿರುಗಲೇ ಇಲ್ಲ, ತಾಳ್ಮೆ ಹೋಯಿತು. ಒಳಗೆ ಓಡಿಹೋಗಿ ಪುಟ್ಟ ಗುಂಡುಕಲ್ಲು ತಂದು ಬೀಗದ ಮೇಲೆ ಬಲವಾಗಿ ಎರಡು ಬಾರಿ ಕುಟ್ಟಿದ. ಬೀಗ ಮುರಿದುಹೋಯಿತು.

ಬಾಗಿಲು ತೆಗೆದು ನೋಡಿದ, ಒಳಗಿದ್ದ ಬಟ್ಟೆಬರೆ ಎಲ್ಲ ಚೆಲ್ಲಾಪಿಲ್ಲಿ ಯಾಗಿತ್ತು. ಭವಿಷ್ಯಕ್ಕಾಗಿ ಹುಡುಕಿದ. ಎಲ್ಲ ಕಲಬೆರಕೆಯಾಗಿದ್ದುದ ರಿಂದ ಅದು ಬೇಗ ಸಿಕ್ಕಲಿಲ್ಲ, ಆಮೇಲೆ ಸಿಕ್ಕಿತು. ಪೆಟ್ಟಿಗೆಯ ಒಳಗಿನ ಅವಸ್ಥೆ ನೋಡಿದಾಗ "ನಿಜ, ಗೌರಿ ಪೆಟ್ಟಿಗೆ ತೆಗೆದು ಭವಿಷ್ಯ ನೋಡಿಬಿಟ್ಟಿದಾಳೆ! ಆದ್ದರಿಂದಲೇ; ಅವಳು ಬದಲಾಯಿಸಿಬಿಟ್ಟಿದಾಳೆ!" ಎನ್ನಿಸಿತು.

ಥೂ ಈ ಸುಡುಗಾಡು ಭವಿಷ್ಯ ಇರೋದರಿಂದ ತಾನೆ ಹೀಗೆಲ್ಲ ಆದದ್ದು, ಎಂದುಕೊಂಡು ಆ ಭವಿಷ್ಯವನ್ನು ಕೈಗೆ ತೆಗೆದುಕೊಂಡ.

ಅದನ್ನು ನೋಡಿದಾಗ,

'ಅಯ್ಯೊ ಗೌರಿ, ಎಲ್ಲ ಓದಿಕೊಂಡುಬಿಟ್ಟಿದಾಳೆ! ತಾನು ಬಂಜೆ, ತನಗೆ ಮಕ್ಕಳೇ ಆಗುವಂತಿಲ್ಲ, ತನ್ನ ಗಂಡ ನಲವತ್ತನಾಲ್ಕನೇ ವಯಸ್ಸಿನಲ್ಲಿಯೇ ಸತ್ತುಹೋಗುತ್ತಾನೆ. ಅದೂ ದುರ್ಮರಣ! ತಾನು ಅಷ್ಟು ಬೇಗ ವಿಧವೆ ಆಗುತ್ತೇನೆ. ಆಮೇಲೆ ತವರೇ ದಿಕ್ಕು!, ಇದೆಲ್ಲ ಅವಳಿಗೆ ತಿಳಿದುಬಿಟ್ಟಿದೆ. ಅಯ್ಯೋ, ಎಂಥ ಕೆಲಸ ಆಯ್ತು. ನಾನು ಈ ಭವಿಷ್ಯ ಬರಸಬಾರದಾಗಿತ್ತು, ಈ ಮನೆಯಲ್ಲಿ ಇದನ್ನು ಇಡಬಾರದಾಗಿತ್ತು' ಎಂದು ಅವನ ಹೃದಯ ತಳಮಳಿಸಿತು.

ತಕ್ಷಣವೆ ಆ ಭವಿಷ್ಯವನ್ನು ತೆಗೆದುಕೊಂಡು ಎದ್ದು ಅಡಿಗೆಮನೆಗೆ ಹೋದ. ಗೌರಿ ಒಲೆಯ ಮುಂದೆ ಇನ್ನೂ ಹಾಗೆಯೇ ಮಲಗಿದ್ದಳು.

ಏಕೊ, ಆಗ ಅವಳನ್ನು ಮಾತಾಡಿಸಲು ಮನಸ್ಸಾಗಲಿಲ್ಲ.

ಅಲ್ಲಿಯೇ ದೇವರ ಹತ್ತಿರ ಇಟ್ಟಿದ್ದ ದೀಪದ ಪೆಟ್ಟಿಗೆಯನ್ನು ತೆಗೆದುಕೊಂಡು ನೇರವಾಗಿ ಬಚ್ಚಲು ಮನೆಗೆ ಹೋದ. ನೀರೊಲೆಯ ಮುಂದೆ ಕುಳಿತು, ಅನಂತಪಂಡಿತರು ದಿನವೆಲ್ಲ ಲೆಕ್ಕಾಚಾರ ಹಾಕಿ ಬರೆದಿದ್ದ ಭವಿಷ್ಯವನ್ನು ಒಂದು ನಿಮಿಷದಲ್ಲಿ ಹರಿದು ಚೂರು ಚೂರುಮಾಡಿ ನೀರೊಲೆಗೆ ತುಂಬಿದ; ಬೆಂಕಿಕಡ್ಡಿ ಗೀರಿ ಹಚ್ಚಿದ. ಉರಿ ಭಗ್ಗನೆ ಹತ್ತಿಕೊಂಡಿತು. ಈ ಭವಿಷ್ಯಕ್ಕೇ ರಾಮಸ್ವಾಮಿಯಿಂದ ದುರ್ಮರಣ ಬರುತ್ತದೆ, ಎಂಬುದು ಪಂಡಿತರಿಗೆ ತಿಳಿದಿತ್ತೊ ಇಲ್ಲವೊ!

ರಾಮಸ್ವಾಮಿ ಒಂದು ಚೂರು ಕಾಗದವನ್ನೂ ಹಾಗೆಯೆ ಉಳಿಸದೆ ಎಲ್ಲ ಒಟ್ಟುಗೂಡಿಸಿ ಮತ್ತೊಂದು ಕಡ್ಡಿ ಗೀರಿ ಹಚ್ಚಿದ. ಭವಿಷ್ಯ ಸಂಪೂರ್ಣವಾಗಿ ಉರಿದುಹೋಯಿತು.

ಅನಂತರ, ಎದ್ದು ಅಡಿಗೆಮನೆಗೆ ಹೋದ. ಗೌರಿ ಇನ್ನೂ ಮಲಗೇ ಇದ್ದಳು. ಗಾಬರಿಯಾಯಿತು.

"ಗೌರಿ" ಎಂದ.

ಗೌರಿ ಮಾತಾಡಲಿಲ್ಲ.

ಅವಳ ಹತ್ತಿರಕ್ಕೆ ಬಂದು ಭುಜ ಮುಟ್ಟಿ ಮತ್ತೆ "ಗೌರಿ!" ಎಂದ. ಗೌರಿ ಮುಖಮುಚ್ಚಿಕೊಂಡು ಅಳುವುದಕ್ಕೆ ಮೊದಲುಮಾಡಿದಳು.

ರಾಮುಸ್ವಾಮಿ "ಏಳು, ಇನ್ನು ಪರವಾಯಿಲ್ಲ, ಅದಕ್ಕೆ ಬೆಂಕಿ ಹಚ್ಚಿಬಿಟ್ಟೆ" ಎಂದ.

ಗೌರಿ ಎದ್ದು ಕುಳಿತು ಗಾಬರಿಯಿಂದ "ಯಾವುದಕ್ಕೆ?" ಎಂದಳು.

"ಭವಿಷ್ಯಕ್ಕೆ"

"ಏನು ಭವಿಷ್ಯ!"

"ನೀನು ನೋಡಿದೆಯಲ್ಲ ಅದು"

"ಇಲ್ಲ, ನಾನು ನೋಡಿಲ್ಲ"

"ನಿಜ ಹೇಳು, ನಾನು ನಿನ್ನನ್ನ ಏನೂ ಮಾಡೊಲ್ಲ"

"ಇಲ್ಲ, ನಿಜವಾಗೂ ನಾನು ನೋಡಿಲ್ಲ"

"ನೀನು ಸುಳ್ಳು ಹೇಳ್ತಾ ಇದೀಯೆ"

"ಇಲ್ಲ, ನಾನು ಖಂಡಿತವಾಗೂ ನೋಡಿಲ್ಲ"

"ನಾನು ಏನಾದರೂ ತಿಳಿಕೊಳ್ತೀನೀಂತ ನೀನು ಹೀಗೆ ಸುಳ್ಳು ಹೇಳ್ತಾ ಇದೀಯೆ" ಎಂದು ರಾಮುಸ್ವಾಮಿ ಮೇಲೆದ್ದ.

"ಇಲ್ಲಾಂದ್ರೆ, ದೇವರಾಣೇಗೂ ನಾನು ನೋಡಿಲ್ಲ!" ಎಂದು ಗೌರಿ ಎದ್ದು ನಿಂತುಕೊಂಡಳು. ಉಡಿಯಲ್ಲಿದ್ದ ಬೀಗದಕೈ ಟಣ್ಣನೆ ನೆಗೆದು ಕೆಳಗೆ ಬಿತ್ತು. ರಾಮುಸ್ವಾಮಿ, ಆ ಕಡೆ ನೋಡಿದ. ಗೌರಿ ಬಾಗಿ ಬೀಗದಕೈಯನ್ನು ತೆಗೆದುಕೊಳ್ಳಲು ಹೋದಳು. ರಾಮುಸ್ವಾಮಿ ಅವಳಿಗಿಂತ ಮುಂಚೆ ಕೈ ಹಾಕಿ ಅದನ್ನು ತೆಗೆದುಕೊಂಡ.

"ಗೌರಿ, ನೀನು ಸುಳ್ಳು ಹೇಳ್ತಾ ಇದೀಯೆ! ಈ ಬೀಗದಕೈಯಿಂದ ನನ್ನ ಪೆಟ್ಟಿಗೆ ತೆಗೀಲಿಲ್ವೆ?"

"ಇಲ್ಲ, ದೇವರಾಣೇಗೂ ಇಲ್ಲ"

"ಸುಳ್ಳು ಸುಳ್ಳು, ದೇವರಾಣೆ ಬೇರೆ ಹಾಕ್ತೀಯ! ನೀನು ನೋಡಿದ್ದು ತಿಳಿದ್ಹೋಗಿಬಿಟ್ಟದೆ, ಅನ್ನೋದು ನನಗೆ ತಿಳೀಬಾರದೂಂತ ಹೀಗಾಡ್ತಿದೀಯೆ! ಪರವಾಯಿಲ್ಲ, ಹೇಳು; ನೀನು ಅದನ್ನ ನೋಡಲಿಲ್ಲವೆ?"

"ಯಾವುದನ್ನ?"

"ನನ್ನ ಭವಿಷ್ಯಾನ್ನ"

"ಇಲ್ಲ"

"ಹೇಳು ಗೌರಿ. ಅದನ್ನ ಸುಟ್ಟು ಬೂದಿಮಾಡಿಬಿಟ್ಟದೀನಿ. ಅದು ನಮ್ಮನೇಲಿಲ್ಲ. ಹೆದರ್ಕೊಬೇಡ. ಅದೆಲ್ಲ ಸುಳ್ಳು ಭವಿಷ್ಯ, ಯಾರೋ ನನ್ನ ಸ್ನೇಹಿತರು ಜ್ಯೋತಿಷ್ಯ ತಿಳೀದಿದ್ದೋರು ಬಿಟ್ಟಿ ಬರೆದುಕೊಟ್ಟ ಭವಿಷ್ಯ. ಹೇಳು, ನೀನು ನೋಡಿದ್ದರೂ ಪರವಾಯಿಲ್ಲ, ನಾನೇನೂ ಮಾಡೊಲ್ಲ, ಹೇಳು"

"ಇಲ್ಲಾಂದ್ರೆ ನಾನು ಖಂಡಿತ ನೋಡಿಲ್ಲ"

"ಅದು ಸುಳ್ಳು ಭವಿಷ್ಯ ಗೌರಿ! ಸುಳ್ಳು, ನೀನು ಒಂದು ಚೂರೂ ನಂಬಬೇಡ. ಎಲ್ಲ ಸುಳ್ಳು ಸುಳ್ಳು!"

* * * * *

ನಿಜ, ಆ ಭವಿಷ್ಯ ಸುಳ್ಳಾಯಿತು. ಅನಂತಪಂಡಿತರು ಸೋತರು. ಗೌರಿಗೆ ನಾಲ್ಕು ತಿಂಗಳಾಯಿತು. ಮೊದಮೊದಲು ಅವಳಿಗೆ ನಂಬಿಕೆಯೇ ಆಗಲಿಲ್ಲ. 'ಎಷ್ಟೋ ಜನ ಹೆಂಗಸರಿಗೆ ಹಾಗಾಗುತ್ತೆ. ಮೂರು ತಿಂಗಳು ನಾಲ್ಕು ತಿಂಗಳು ಮುಟ್ಟುಹೋಗಬಹುದು. ಆಮೇಲೆ ಎಂದೊ ಒಂದು ದಿನ ಕುಳಿತುಕೊಳ್ಳಬಹುದು' ಎಂದು ಪಕ್ಕದ ಮನೆಯ ವಿಶಾಲಾಕ್ಷಮ್ಮ ಯಾವುದೋ ಸಂದರ್ಭದಲ್ಲಿ ಹೇಳಿದ್ದರು. ಅದು ನೆನಪಾದಾಗ ಗೌರಿಗೆ ಎಲ್ಲಿ ಹಾಗಾಗುವುದೊ ಎಂದು ನಿರಾಸೆಯಾಗುತ್ತಿತ್ತು. ಆದರೆ ನಿರಾಸೆ ಯಾಗಲಿಲ್ಲ. ನಾಲ್ಕು ತಿಂಗಳೂ ಮುಗಿಯುತ್ತಾ ಬಂತು.

'ಲೇಡಿ ಡಾಕ್ಟರಿಗೆ ತೋರಿಸಿಕೊಂಡು ಬಾ' ಎಂದು ಮೂರನೆಯ ತಿಂಗಳಿಂದಲೂ ರಾಮುಸ್ವಾಮಿ ಅವಳನ್ನು ಪೀಡಿಸುತ್ತಿದ್ದ. ಆದರೆ ಗೌರಿ "ಆಗಲಿ ಆಗಲಿ" ಎಂದೇ ನಾಲ್ಕು ತಿಂಗಳು ಕಳೆದಿದ್ದಳು.

ಒಂದು ದಿನ ರಾಮುಸ್ವಾಮಿ "ಗೌರಿ, ಹೋಗಿ ಲೇಡಿ ಡಾಕ್ಟರಿಗೆ ತೋರಿಸಿಕೊಂಡು ಬಾರೆ. ಹೀಗೇ ಬಿಡಬಾರದು. ಆಮೇಲೆ ಏನಾದರೂ ಆದೀತು. ನಡೀ, ನಾನೂ ಬರ್ತೀನೆ ಜೊತೇಲಿ" ಎಂದು ಹೇಳಿದ. ಗೌರಿಗೂ, ಆಗ 'ಹೌದು, ಡಾಕ್ಟರಿಗೆ ತೋರಿಸಬೇಕು' ಎನ್ನಿಸಿತ್ತು.

ಬುಧವಾರ ಬೆಳಗ್ಗೆ ಒಂದು ಗಾಡಿಮಾಡಿಕೊಂಡು ಇಬ್ಬರೂ ಹೆಂಗಸರ ಆಸ್ಪತ್ರೆಗೆ ಹೋದರು. ರಾಮುಸ್ವಾಮಿ ಹೊರಗೆ ಬೆಂಚಿನ ಮೇಲೆ ಕುಳಿತಿದ್ದ. ಪರೀಕ್ಷೆ ಮುಗಿದನಂತರ ಕೈಯಲ್ಲೊಂದು ಕಾರ್ಡು ಹಿಡಿದು ಕೊಂಡು ಗೌರಿ ಹೊರಗೆ ಬಂದಳು. ರಾಮುಸ್ವಾಮಿ ಅವಳ ಮುಖ ನೋಡಿದ. ಆಗ ಅವಳಿಗೆ ತುಂಬ ನಾಚಿಕೆಯಾಯಿತು. ನಕ್ಕು ತಲೆ ತಗ್ಗಿಸಿದಳು.

ಮನೆಗೆ ಬಂದ ಮೇಲೆ ರಾಮುಸ್ವಾಮಿ "ಗೌರಿ, ಏನಂದರು ಡಾಕ್ಟರು ?" ಎಂದು ಕೇಳಿದ.

ಗೌರಿ ಡಾಕ್ಟರು ಕೊಟ್ಟಿದ್ದ ಕಾರ್ಡನ್ನು ದೇವರ ಪಟದ ಹಿಂದೆ ಇಡುತ್ತ "ಅಂದರು" ಎಂದು ಸುಮ್ಮನಾದಳು.

"ಏನಂದರು ?"

ಗೌರಿ ಮಾತಾಡದೆ, ಬಲಗೈಯ ನಾಲ್ಕು ಬೆರಳು ತೋರಿಸಿ ನಕ್ಕಳು. ರಾಮುಸ್ವಾಮಿಗೂ ನಗು ಬಂತು.

ಅಂದೇ ಹೊಳೆನರಸೀಪುರಕ್ಕೆ ಕಾಗದ ಹೋಯಿತು.

ಆ ಕಾಗದ ನೋಡಿ ನಂಜಮ್ಮನವರಿಗೆ, ಶಿರಸ್ತೆ ಶಾಮಣ್ಣನವರಿಗೆ ತುಂಬ ಸಂತೋಷವಾಯಿತು. ಇನ್ನೊಬ್ಬ ಮೊಮ್ಮಗ ಹುಟ್ಟಿದಷ್ಟೇ ಆನಂದವಾಯಿತು.

ಆ ದಿನವೇ ನಂಜಮ್ಮನವರು ಮಗಳಿಗೆ ಉತ್ತರ ಬರೆದರು : 'ಐದನೇ ತಿಂಗಳಲ್ಲಿ ಬಳೆ ತೊಟ್ಟುಕೊಳ್ಳೋ ಶಾಸ್ತ್ರ ಆಗಬೇಕು. ಅದು ನಿಮ್ಮನೇ ಶಾಸ್ತ್ರ. ಎಂಟನೇ ತಿಂಗಳಲ್ಲಿ ನಮ್ಮನೇ ಶಾಸ್ತ್ರ ಮಾಡೋದು. ಆದ್ದರಿಂದ; ಐದನೇ ತಿಂಗಳಲ್ಲಿ ಒಳ್ಳೇ ಬಳೆ ನೋಡಿ ತೊಡಿಸಿಕೊ. ಈಗ ಹೇಗಿದ್ದೀಯೆ? ಮನೆ ಕೆಲಸ ಮಾಡಿಕೊಂಡು ಹತ್ತು ಗಂಟೆ ಹೊತ್ತಿಗೆ ಅಡಿಗೆ ಮಾಡೋ ದಕ್ಕೆ ಆಗುತ್ತದೆಯೆ ? ಈಗ ಬಹಳ ಹುಷಾರಾಗಿರಬೇಕು. ಹೆಚ್ಚು ಆಯಾಸ ಮಾಡಿಕೊಳ್ಳಬಾರದು. ಭಾರಗೀರ ಎತ್ತಬೇಡ. ನೀರೂ ಅಷ್ಟೆ; ಬಾವಿ ನೀರು ಸೇದೋದಕ್ಕೆ ಹೋಗಬೇಡ. ನಲ್ಲೀಲಿ ಬರೋ ಅಷ್ಟೇ ಸಾಕು. ಏಳನೇ ತಿಂಗಳಲ್ಲಿ ಕರಸಿಕೊಳ್ಳೋ ಏರ್ಪಾಟು

ಮಾಡ್ತೀನಿ. ನಿನ್ನ ಗಂಡಂಗೆ ಈ ವಿಷಯ ತಿಳಿಸಿರು. ಲೇಡಿ ಡಾಕ್ಟರ್ ಇನ್ನೇನು ಹೇಳಿದರು? ಹದಿನೈದು ದಿನಕ್ಕೊಂದು ಸಲವಾದರೂ ಆಸ್ಪತ್ರೆಗೆ ಹೋಗಿ ಬಾ. ನಿನ್ನ ಕ್ಷೇಮ ಸಮಾಚಾರಕ್ಕೆ ವಾರಕ್ಕೊಂದು ಬಾರಿಯಾದರೂ ಕಾಗದ ಬರಿ. ಇನ್ನೊಂದು ವಿಷಯ. ಮರೀದೇ ಈಗಿನಿಂದಲೇ ಮಾಡಬೇಕಾದ ಕೆಲಸ. ಆದ್ದರಿಂದ ಈಗ ಬರೀತಿದೀನಿ. ಏನು ಗೊತ್ತೆ? ನಿನ್ನ ಗಂಡನ ಹಳೇ ಪಂಚೆಗಳು, ಹಳೇ ಅಂಗಿ, ನಿನ್ನ ಹಳೇ ಸೀರೆ, ಹಳೇ ಟವಲು ಎಲ್ಲ ಯಾರಿಗೂ ಕೊಡದೆ ಒಂದು ಗಂಟು ಕಟ್ಟಿಡು. ಊರಿಗೆ ಬರುವಾಗ ಮರೀದೆ ಆ ಗಂಟು ತೊಗೊಂಡ್ಬಾ, ನಿನ್ನ ಮರೀಗೆ ಬೇಕಾಗುತ್ತೆ!' ಎಂದು ಬರೆದಿದ್ದ ತಾಯಿಯ ಕಾಗದವನ್ನು ಗೌರಿ ರಾತ್ರಿ ಗಂಡನೆದುರಿಗೆ ಓದಿ ಹೇಳಿದಳು. ಗಂಡ ನಕ್ಕ.

ಗೌರಿ ಐದನೆಯ ತಿಂಗಳಲ್ಲಿ ಒಳ್ಳೆಯ ಬಳೆಯನ್ನೇ ತೊಟ್ಟು ಕೊಂಡಳು. ಮೊದಲೇ ಸ್ಥೂಲವಾದ ಮೈ. ಇನ್ನು ಈಗ ಕೇಳಬೇಕೆ! ಬಗ್ಗಿ ಕೆಲಸ ಮಾಡುವುದು ಬಹಳ ಕಷ್ಟವಾಗುತ್ತಿತ್ತು. ಅವಳು ಮಾಡಬೇಕಾದ ಎಷ್ಟೋ ಮನೆಗೆಲಸಗಳನ್ನು ರಾಮಸ್ವಾಮಿ ಬೆಳಗ್ಗೆ ಸಾಯಂಕಾಲ ಹಂಚಿಕೊಂಡು ಮಾಡುತ್ತಿದ್ದ. ಹಂಡೆಗೆ ನೀರು ಹಾಕುವುದು, ಒಲೆಗೆ ಉರಿಹಾಕುವುದು, ತನ್ನ ಬಟ್ಟೆಗಳನ್ನು ಒಗೆಯುವುದು ಎಲ್ಲ ಅವನೇ ಮಾಡುತ್ತಿದ್ದ. ಅವಳಿಗಾಗಿ ಪ್ರತಿ ದಿನವೂ ಸಂಜೆ ಆಫೀಸಿನಿಂದ ಬರುತ್ತ ಹೊಸ ಹೊಸ ತರಕಾರಿ, ಹುರಿಗಾಳು, ಹಾಲು ಕೋವ, ಬಿಸ್ಕತ್ತು, ಚಾಕೊಲೇಟ್, ಹೋಟಲ ತಿಂಡಿ, ಕಿತ್ತಲೆ ಹಣ್ಣು, ಸೇಬಿನ ಹಣ್ಣು....ಏನಾದರೊಂದು ತರುತ್ತಿದ್ದ. ಅವಳ ಎಲ್ಲ ಬಯಕೆಗಳೂ ತೀರಿದುವು. ಆದರೆ ಎಲೆಯ ಮೇಲೆ ಅನ್ನ ಹಾಕಿಕೊಂಡರೆ ಒಂದಗುಳೂ ಸೇರುತ್ತಿರಲಿಲ್ಲ. ಊಟಕ್ಕೆ ಕುಳಿತ ಸ್ವಲ್ಪ ಹೊತ್ತಿನಲ್ಲಿಯೇ ಒಂದು ತರಹ ಛಳುಕು ಬಂದು ಹೊಟ್ಟೆ ಹಿಡಿದುಬಿಡುತ್ತಿತ್ತು. ಎಲೆಯ ಮುಂದೆ ಹಾಗೆಯೇ ಮಲಗಿಬಿಡುತ್ತಿದ್ದಳು. ಸ್ವಲ್ಪ ಸುಧಾರಿಸಿಕೊಂಡು, ಆಮೇಲೆ ಊಟದ ಶಾಸ್ತ್ರ ಮಾಡಿ ಏಳುತ್ತಿದ್ದಳು. ಹೀಗೆಯೆ ಗೌರಿ ಆರು ತಿಂಗಳು ಕಳೆದಳು.

ಹೊಳೆನರಸೀಪುರದಿಂದ ಮಾವನವರು ಅಳಿಯನಿಗೆ ಕಾಗದ ಬರೆದರು. ಗೌರಿಗೆ ಆರು ತಿಂಗಳು ತುಂಬಿತು. ಏಳನೆಯ ತಿಂಗಳಲ್ಲಿಯೇ ಅವಳು ಇಲ್ಲಿಗೆ ಬರಬೇಕು. ಎಂದು ಕರೆದುಕೊಂಡು ಬರುತ್ತೀರಿ, ದಯವಿಟ್ಟು ತಿಳಿಸಿ. ಕಡೆಯಪಕ್ಷ ಒಂದು ವಾರವಾದರೂ ಹೆಚ್ಚಿಗೆ ರಜಾ ತೆಗೆದುಕೊಂಡು ಬನ್ನಿ, ನೀವು ಬರುವುದೇ ಅಪರೂಪ. ಒಂದು ವಾರ ವಾದರೂ ನಮ್ಮ ಮನೆಯಲ್ಲಿ ಇರಬೇಕೆಂದು ನಮ್ಮ ಇಷ್ಟ, ಎಂದು ಅವರು ತಿಳಿಸಿದ್ದರು. ಸಂಜೆ ಗೌರಿ ಕಾಗದವನ್ನು ಗಂಡನಿಗೆ ತೋರಿಸಿದಳು. ರಾಮಸ್ವಾಮಿ "ರಜಾ ಸಿಕ್ಕುತ್ತೊ ಇಲ್ಲವೊ, ನೋಡೋಣ, ಸಿಕ್ಕದೇ ಇದ್ದರೆ ನಿಮ್ಮಪ್ಪನಿಗೇ ಬಂದು ಕರೆದುಕೊಂಡುಹೋಗಿ ಎಂತ ಬರೀ ಬೇಕಾಗುತ್ತೆ" ಎಂದು ಹೇಳಿದ.

"ಗೌರಿ ರಜಾ ಕೊಡದೇ ಏನು! ನೀವು ರಜಾ ತೊಗೊಂಡಿರೋದೇ ಅಪರೂಪ. ಕೊಡ್ತಾರೆ," ಎಂದಳು.

ರಾಮಸ್ವಾಮಿಗೆ ರಜಾ ಸಿಕ್ಕಿತು. ಆದರೆ ಒಂದು ವಾರ ಸಿಕ್ಕಲಿಲ್ಲ.

ಗುರುವಾರ ಬೆಳಗ್ಗೆ ಒಂಬತ್ತು ಗಂಟೆಯ ರೈಲಿನಲ್ಲಿ ಗಂಡ ಹೆಂಡತಿ ಊರಿಗೆ ಹೊರಡುವುದು, ಎಂದು ನಿರ್ಧಾರವಾಯಿತು.

ಆ ಗುರುವಾರ ಬಂತು. ರಾಮಸ್ವಾಮಿ ನಾಲ್ಕು ಗಂಟೆಗೇ ಎದ್ದು ನೀರೊಲೆಗೆ ಉರಿಹಾಕಿದ. ಗೌರಿ ಅಷ್ಟು ಹೊತ್ತಿಗೇ ಎದ್ದು ಗಂಡನಿಗೆ ಕಾಫಿ ಮಾಡಿಕೊಟ್ಟು ಅಡಿಗೆಗಿಟ್ಟಳು. ರಾತ್ರಿ ತೀರ್ಮಾನಿಸಿದ್ದಂತೆ, ಊರಿಗೆ ತೆಗೆದುಕೊಂಡುಹೋಗಲು ಮೊಸರನ್ನ ಹುಳಿಯನ್ನ ಕಲಸಿದಳು. ರಾಮಸ್ವಾಮಿ ಸಾಮಾನು ಪ್ಯಾಕು ಮಾಡಿದ. ತಾನು ಮೂರು ತಿಂಗಳಿಂದ ಶೇಖರಿಸಿ ಗಂಟು ಕಟ್ಟಿಟ್ಟಿದ್ದ ಹಳೆಯ ಪಂಚೆ, ಹಳೆಯ ಷರಟು, ಸೀರೆಯ ತುಂಡು ಎಲ್ಲ ಮರೆಯದೆ ಗೌರಿ ಹಾಸಿಗೆಯಲ್ಲಿ ಹಾಕಿಸಿದಳು. ಇಬ್ಬರದೂ ಊಟ ಆಗುವ ಹೊತ್ತಿಗೆ, ಏಳೂ ಮುಕ್ಕಾಲಾಯಿತು. ರಾಮಸ್ವಾಮಿ ಬಟ್ಟೆ ಹಾಕಿಕೊಂಡು "ಇನ್ನು ಕಾಲು ಗಂಟೇನೇ ಇರೋದು. ಎಂಟು ಗಂಟೇಗಾದರೂ ನಾವು ಮನೆ ಬಿಡಬೇಕು. ರೈಲು ಒಂಬತ್ತು ಗಂಟೆಗೆ ಸರಿಯಾಗಿ ಹೊರಟುಬಿಡುತ್ತೆ" ಎಂದ. ಗೌರಿ ಎದ್ದು ದಡಬಡ ಎಲೆ

ಗೋಮ ಮಾಡಿ, ಪಾತ್ರೆ ತೊಳೆದು "ಆಯ್ತು ಆಯ್ತು, ನೀವು ಬಾಗಿಲೆಲ್ಲ ಹಾಕೋ ಹೊತ್ತಿಗೆ ನಾನು ಸೀರೆ ಉಟ್ಕೊಂಡುಬಿಡ್ತೀನಿ" ಎಂದು ಕೋಣೆಗೆ ಹೋದಳು. ರಾಮುಸ್ವಾಮಿ ಎಲ್ಲ ಬಾಗಿಲುಗಳನ್ನೂ ಹಾಕಿಕೊಂಡು ಪಡಸಾಲೆಗೆ ಬರುವ ಹೊತ್ತಿಗೆ ಎಂಟು ಗಂಟೆ ಆಗಿ ಐದು ನಿಮಿಷವೂ ಕಳೆದುಹೋಗಿತ್ತು. "ಅಯ್ಯೊ, ಎಂಟೂ ಹತ್ತಾಗ್ಹೋಯ್ತು, ನಾನು ಗಾಡಿ ತರ್ತೀನಿ ನೀನು ರೆಡಿ ಆಗು," ಎಂದು ಹೇಳಿ ರಾಮುಸ್ವಾಮಿ ಹೊರಗೆ ಹೊರಟ. ಅದೃಷ್ಟ! ಚೌಕದಲ್ಲಿ ಒಂದು ಖಾಲಿ ಗಾಡಿ ನಿಂತಿತ್ತು. ರಾಮುಸ್ವಾಮಿ ದೂರದಿಂದಲೇ ಚಪ್ಪಾಳೆ ಹೊಡೆದು ಕರೆದ. ಗಾಡಿ ಬಂತು. ಬಾಡಿಗೆ ಗೊತ್ತುಮಾಡಿ, ಗಾಡಿಗೆ ಸಾಮಾನು ಹಾಕಿದ್ದಾಯಿತು. "ಹೊರಡು ಹೊರಡು, ಹೊತ್ತಾಗ್ಹೋಯ್ತು" ಎಂದು ರಾಮುಸ್ವಾಮಿ ಅವಸರಿಸಿದ. ಗೌರಿ "ಸಾಮಾನೆಲ್ಲ ಹಾಕಿದೀರಾ?" ಎಂದು ಕೇಳಿದಳು. "ಆಗಿದೆ, ನಡಿ ನಡಿ ಕೂತ್ಕೊ" ಎಂದು ರಾಮುಸ್ವಾಮಿ ಗೌರಿಯನ್ನು ಹೊರಗೆ ಅಟ್ಟಿದ. ಗೌರಿ ಸರಸರ ಹೋಗಿ ಗಾಡಿಯಲ್ಲಿ ಕುಳಿತುಕೊಂಡಳು. ರಾಮುಸ್ವಾಮಿ ಬೀದಿಯ ಬಾಗಿಲಿಗೆ ಬೀಗ ಸಿಕ್ಕಿಸಿ ಬೇಗ ಬಂದು ಗಾಡಿ ಹತ್ತಿದ. ಅರಳೇಪೇಟೆ ದಾಟಿದ ಮೇಲೆ ಗೌರಿ "ಅಯ್ಯೊ, ಟಿಫಿನ್ ಕ್ಯಾರಿಯರ್ರು!" ಎಂದಳು. ರಾಮುಸ್ವಾಮಿ "ಇಲ್ಲ. ನಾನು ತರ್ಲಿಲ್ಲ." ಎಂದ.

"ಅಯ್ಯೊ ಹೋಗೀಂದ್ರೆ. ಅಡಿಗೇಮನೇಲಿ ಒರಳ ಹತ್ತಿರ ಇಟ್ಟಿದ್ದೆ!"

"ನಾನೇನು ಮಾಡಲಿ ಗಾಡಿಗೆ ಹಾಕೋ ಸಾಮಾನನ್ನೆಲ್ಲ ಒಂದು ಕಡೆ ಇರಲಿ, ಅಂತ ಪಡಸಾಲೇಲಿ ಇಟ್ಕೊಂಡಿದ್ದೆ, ಅಲ್ಲಿ ಅದಿರಲಿಲ್ಲ, ನಾ ಹಾಕಲಿಲ್ಲ."

"ಮುಸುರೇಂತ ನಾನು ಒಳಗೇ ಇಟ್ಟಿದ್ದೆ. ನೀವು ಅವಸರಿಸಿಬಿಟ್ಟಿರಿ. ನಂಗೆ ಮರೆತ್ಹೋಯ್ತು."

"ಹೋಗಲಿ ಬಿಡು!"

"ಮತ್ತೆ ದಾರೀಲಿ ತಿನ್ನೋಕೆ? ಎಷ್ಟೊತ್ತಿಗೆ ಹೊಳೆನರಸೀಪುರ ಸಿಕ್ಕೋದು?"

"ಸಂಜೆ ಆರೂವರೆ ಏಳು ಗಂಟೆ ಆಗಬಹುದು"

"ಅಯ್ಯೋ ಅಯ್ಯೋ! ಅಷ್ಟೊತ್ತಿನ ವರೆಗೂ ಹೇಗೇಂದ್ರೆ ಇರೋದು! ಈವಾಗ ನಂಗೇನೂ ಸೇರಲಿಲ್ಲ, ಮೊಸರನ್ನ ಚೆನ್ನಾಗಿತ್ತು. ಹುಳಿಯನ್ನಾನೂ ಅಷ್ಟೆ. ಆರಿದರೆ ಇನ್ನೂ ಚೆನ್ನಾಗಿರ್ತಿತ್ತು. ಅದೃಷ್ಟ ವಿಲ್ಲ. ಹೋಗಲಿ ಬಿಡಿ"

"ಆರಿದರೆ ಇನ್ನೂ ಚೆನ್ನಾಗಿರುತ್ತಾ?"

"ಹೌದು. ಮೊಸರನ್ನ ಹುಳಿಯನ್ನ ಆರಿದರೇ ಚೆನ್ನ"

"ಹಾಗಾದರೆ ನಾನು ರಾತ್ರಿ ರೈಲಿನಲ್ಲೇ ವಾಪಸು ಹೊರಟ್ಬಿಡ್ತೀನಿ"

"ಊ್ಞ. ಘಾಟಿಗಳು. ಅದು ಆರಿದಷ್ಟೂ ಚೆನ್ನ. ನಾಳೆಗಿಂತ ಇನ್ನೂ ನಾಲ್ಕು ದಿನ ಬಿಟ್ಟರೆ ಇನ್ನೂ ಚೆನ್ನ!" ಎಂದು ನಕ್ಕಳು.

ಗಾಡಿ ನಿಧಾನವಾಗಿ ಏರಿ ಹತ್ತುತ್ತಿತ್ತು.

ರಾಮುಸ್ವಾಮಿ "ಎಂಟೂ ಮುಕ್ಕಾಲಾಗ್ಹೋಯ್ತು ಕಣಯ್ಯಾ?" ಎಂದು ಎಚ್ಚರಿಸಿದ. ಗಾಡಿ ಎಡಗಡೆಗೆ ತಿರುಗಿ ಓಡಿತು. ರೈಲ್ವೆ ನಿಲ್ದಾಣ ಸಿಕ್ಕಿತು.

ಟಿಕೀಟು ತೆಗೆದುಕೊಂಡು, ಕೂಲಿ ಮಾಡಿ ಸಾಮಾನು ಹೊರಿಸಿ ಕೊಂಡು ಇಬ್ಬರೂ ಮೆಟ್ಟಲು ಹತ್ತಿ ನಿಲ್ದಾಣದೊಳಕ್ಕೆ ಹೋದರು.

ಆಗಲೆ ರೈಲು ಗಾಡಿ ಸಿದ್ಧವಾಗಿ ನಿಂತಿತ್ತು.

ಎಲ್ಲ ಗಾಡಿಗಳಲ್ಲಿಯೂ ಜನ ತುಂಬಿಕೊಂಡಿದ್ದರೂ ಗೌರಿಯ ಅದೃಷ್ಟ, ಒಂದು ಬೋಗಿಯಲ್ಲಿ ಇಬ್ಬರಿಗೂ ಅನುಕೂಲವಾದ ಜಾಗ ಸಿಕ್ಕಿತು.

ಗೌರಿ "ಗಂಟೆ ಎಷ್ಟು?" ಎಂದು ಗಂಡನನ್ನು ಕೇಳಿದಳು.

ರಾಮುಸ್ವಾಮಿ "ಎಂಟೂ ಐವತ್ತು" ಎಂದ.

"ನೋಡಿದಿರಾ. ಐದು ನಿಮಿಷ ನಿಧಾನಿಸಿದ್ದರೆ ಮೊಸರನ್ನ ಮರೀತಿರಲಿಲ್ಲ. ಅದನ್ನ ನೆನಸ್ಕೊಂಡರೆ ಬಾಯಲ್ಲಿ ನೀರು ಬರುತ್ತೇಂದ್ರೆ. ಮೊಸರು ಒಳ್ಳೆ ಹದವಾಗಿತ್ತು. ಹಸಿಕೊಬ್ಬರಿ ಹಸಿಶುಂಠಿ ಎಲ್ಲ ಹಾಕಿ ಚೆನ್ನಾಗಿ ಮಾಡಿದ್ದೆ. ಹೋಗಿ ನೀವು."

"ಹೋಗಲಿ ಬಿಡು"

"ದಾರೀಲಿ ಹಸಿವಾಗುತ್ತಲ್ಲ ನನಗೆ?"

"ಆಗಲಿ. ಅರಸೀಕೆರೇಲಿ ದೊಡ್ಡ ಹೋಟಲಿದೆ. ಅಲ್ಲೂ ಮೊಸರನ್ನ ಹುಳಿಯನ್ನ ಇರುತ್ತೆ. ಕೊಂಡುಕೊಂಡು ತಿನ್ನೋಣ."

"ಆದರೆ ಅದು ನಾನು ಮಾಡಿದಷ್ಟು ಚೆನ್ನಾಗಿರೊಲ್ಲ"

"ತಿಂದು ನೋಡು, ಆಮೇಲೆ ಹೇಳು. ಮೊದಲೇ ಯಾಕೆ ಹೇಳ್ತೀಯೆ."

* * * * *

ರೈಲು ಅರಸೀಕೆರೆ ತಲಪಿದಾಗ ಮಧ್ಯಾಹ್ನ ಎರಡು ಗಂಟೆ. ಸಾಮಾನಿನೊಡನೆ ಇಬ್ಬರೂ ಇಳಿದರು. ಗೌರಿಗೆ ತುಂಬ ಹಸಿವಾಗಿತ್ತು. ತುಮಕೂರಿನಲ್ಲಿ, ಕೊಂಡುಕೊಂಡ ಎರಡು ಕಿತ್ತಲೆ ಹಣ್ಣು ಬಿಟ್ಟರೆ ಆವಳು ಏನನ್ನೂ ತಿಂದಿರಲಿಲ್ಲ. "ಮೊಸರನ್ನ ಹುಳಿಯನ್ನ ತನ್ನಿ, ನೋಡೋಣ ಹೇಗಿರುತ್ತೊ" ಎಂದಳು.

ರಾಮುಸ್ವಾಮಿ ಹೋಟಲಿಗೆ ಹೋಗಿ ಎರಡು ದೊನ್ನೆ ಮೊಸರನ್ನ, ಎರಡು ದೊನ್ನೆ ಹುಳಿಯನ್ನ ತಂದ. ಬಹಳ ಹಸಿವಾಗಿದ್ದುದರಿಂದ ಗೌರಿ ಒಂದಗುಳನ್ನೂ ಬಿಡದೆ ತಿಂದಳು. ಆದರೆ "ಏನೋ ಅಷ್ಟರಲ್ಲೇ ಇದೇ ಅಂದ್ರೆ. ಮನೇಲಿ ಮಾಡಿಟ್ಟರೋ ಮೊಸರನ್ನ ನೆನಸ್ಕೊಂಡರೆ ಹೊಟ್ಟೆ ಉರಿಯುತ್ತೆ" ಎಂದಳು. ರಾಮುಸ್ವಾಮಿ ರೈಲುತಂಬಿಗೆಯಲ್ಲಿ ನೀರು ತಂದ. ಇಬ್ಬರೂ ನೀರು ಕುಡಿದು, ಕೈ ಬಾಯಿ ತೊಳೆದುಕೊಂಡರು.

ಮೈಸೂರು ಗಾಡಿ ಮೂರೂ ಮುಕ್ಕಾಲಿಗೆ ಹೊರಟಿತು.

ಅದು ಹೊಳೆನರಸೀಪುರ ತಲಪಿದಾಗ ಆರೂ ನಲವತ್ತು.

ಮೊದಲೇ ಕಾಗದ ಹೋಗಿದ್ದುದರಿಂದ ಶಾಮಣ್ಣನವರು ನಿಲ್ದಾಣಕ್ಕೆ ಬಂದು ಮಗಳು ಅಳಿಯನನ್ನು ಮನೆಗೆ ಕರೆದುಕೊಂಡುಹೋದರು.

ರಾಮುಸ್ವಾಮಿ ಮಾವನವರ ಮನೆಯಲ್ಲಿ ಮೂರು ದಿನ ಇದ್ದು ವಾಪಸು ಊರಿಗೆ ಹೋದ. ಅಡಿಗೆಮನೆಯ ಒರಳ ಹತ್ತಿರ ಹುಳಿಯನ್ನ ಮೊಸರನ್ನ ಹಳಸಿ ನಾರುತ್ತಿತ್ತು.

* * * * *

ಗೌರಿ ಊರಿಗೆ ಹೋಗಿ ಇನ್ನೂ ಹದಿನೈದು ದಿನ ಕಳೆದಿರಲಿಲ್ಲ. ಹೊಳೆನರಸೀಪುರದಿಂದ ಕೆಟ್ಟ ಸುದ್ದಿ ಬಂತು. ನಂಜಮ್ಮನವರು ಹೊಸ ವೊಮ್ಮಗುವನ್ನು ನೋಡುವುದಕ್ಕೆ ಮುಂಚೆಯೇ ತೀರಿಕೊಂಡರು.

ಕೆಲವು ತಿಂಗಳುಗಳಿಂದ ಅವರಿಗೆ ಹೊಟ್ಟೆನೋವು ಬರುತ್ತಿತ್ತಂತೆ. ಅವರು ಲೇಡಿ ಡಾಕ್ಟರಿಗೆ ತೋರಿಸಲಿಲ್ಲ. ಮನೆಯಲ್ಲೇ ಏನೇನೊ ಔಷಧ ಮಾಡಿದರು. ಯಾವುದಕ್ಕೂ ಕಡಮೆ ಆಗದಿರಲು ನರಸಿಂಹಪಂಡಿತರ ವೈದ್ಯಶಾಲೆಯಿಂದ ಔಷಧ ತಂದು ಕುಡಿದರು. ಏಕೊ, ನೋವು ಇನ್ನೂ ಜಾಸ್ತಿಯಾಯಿತು.

ಒಂದು ದಿನ, ನರ್ಸ್ ಪಾರ್ವತಮ್ಮ ಗೌರಿಯನ್ನು ನೋಡಲು ಬಂದಿದ್ದಳು. ಆಗ ನಂಜಮ್ಮನವರು ಅವಳೆದುರಿಗೆ ಎಲ್ಲ ಹೇಳಿಕೊಂಡರು. ಅವಳು ಅವರನ್ನು ಪರೀಕ್ಷಿಸಿ, "ಹೊಟ್ಟೇಲಿ ಏನೋ ಇದೆ. ನೀವು ಹೀಗೇ ಬಿಟ್ಟರಾಗೋದಿಲ್ಲ. ಮೊದಲು ಲೇಡಿ ಡಾಕ್ಟರಿಗೆ ತೋರಿಸಿ" ಎಂದಳು.

ನಂಜಮ್ಮನವರು ಇನ್ನೂ ಸ್ವಲ್ಪ ಉದಾಸೀನದಿಂದಲೇ ಇದ್ದರು. ಗೌರಿಯ ಬಲವಂತದಿಂದ "ಆಗಲಿ, ಹೋಗೋಣ ಸೋಮವಾರ" ಎಂದು ಕೊಂಡರು. ಆದರೆ ಅವರು ಆ ಸೋಮವಾರವನ್ನು ನೋಡಲೇ ಇಲ್ಲ.

ಶನಿವಾರ ರಾತ್ರಿ ಏಕೊ ಇದ್ದಕ್ಕಿದ್ದಂತೆ ಹೊಟ್ಟೆನೋವು ತುಂಬ ಹೆಚ್ಚಾಯಿತು. ತಡೆಯಲಾಗಲಿಲ್ಲ. ಹೊಟ್ಟೆನೋವು ಬಂದಾಗ ಅವರು ಏನನ್ನೂ ತೆಗೆದುಕೊಳ್ಳುತ್ತಿರಲಿಲ್ಲ; ಕೋಣೆಗೆ ಹೋಗಿ ಬಿದ್ದುಕೊಂಡು ಬಿಡುತ್ತಿದ್ದರು.

ಶನಿವಾರ ರಾತ್ರಿ ಸುಮಾರು ಏಳು ಗಂಟೆಯ ಸಮಯದಲ್ಲಿ ನೋವು ಇನ್ನೂ ಹೆಚ್ಚಾಯಿತು. ಹೆಂಡತಿ ಕೆಟ್ಟ ಹೊಟ್ಟೆನೋವಿನಿಂದ ನರಳುತ್ತಿದ್ದಾಳೆ, ಎಂಬುದು ಶಾಮಣ್ಣನವರಿಗೆ ಮನಗಂಡುದು ಅಂದು ರಾತ್ರಿ. ನಂಜಮ್ಮನವರು ನೋವು ತಡೆಯಲಾರದೆ ತುಂಬ ಸಂಕಟಪಡುತ್ತಿದ್ದರು. ಹೇಮಾವತಿ ಗಂಡನ ಮನೆಗೆ ಹೋಗಿದ್ದಳು. ಗೌರಿ ಒಬ್ಬಳೇ ಮನೆಯಲ್ಲಿದ್ದುದು; ದಿನ ತುಂಬಿದ್ದರೂ, ಕೆಲಸ ಮಾಡಲು ಕೈಲಾಗದಿದ್ದರೂ ತನಗೆ ತೋಚಿದ ಮತ್ತು ಅಕ್ಕಪಕ್ಕದವರು ಹೇಳಿದ ಎಲ್ಲ ಔಷಧಗಳನ್ನೂ

ಗೌರಿ ಮಾಡಿದಳು. ಆದರೆ ಆ ಹೊಟ್ಟೆನೋವು ಯಾವುದಕ್ಕೂ ಜಗ್ಗಲಿಲ್ಲ. ಹತ್ತು ಗಂಟೆಯ ಹೊತ್ತಿಗೆ ನೋವು ಇನ್ನೂ ಹೆಚ್ಚಾಗಿ, ತಡೆಯಲಾರದೆ ನಂಜಮ್ಮನವರು ಎರಡು ಮೂರು ಬಾರಿ ಕಿರಿಚಿಕೊಂಡರು. ಮಂಚ ಬಿಟ್ಟು, ಕೆಳಗೆ ಹಾಸಿದ್ದ ಚಾಪೆಯ ಮೇಲೆ ಉರುಳಿಕೊಂಡು ಹೊರಳಾಡಿದರು. ಆಗ ಗೌರಿಗೆ ತುಂಬ ಗಾಬರಿಯಾಯಿತು. ಶಾಮಣ್ಣನವರಿಗೂ ಹೆಂಡತಿಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕು, ಎನ್ನಿಸಿತು. ಪಕ್ಕದ ಮನೆಯ ಮೇಸ್ಟರು "ಈಗ ಬೇಡಿ. ಅಲ್ಲಿ ಯಾರೂ ಅಷ್ಟು ನಿಗ ಕೊಡಲ್ಲ. ಸುಮ್ಮನೆ ನರಳ್ತಾ ಇರಬೇಕಾಗುತ್ತೆ. ಬೆಳಗ್ಗೆ ಅಷ್ಟು ಹೊತ್ತಿಗೇ ಕರೆದುಕೊಂಡು ಹೋಗಿ" ಎಂದು ಸಲಹೆಮಾಡಿದರು.

"ನಿಜ, ಈಗ ಎಷ್ಟು ಕರೆದರೂ ಡಾಕ್ಟರು ಬರೋದಿಲ್ಲ. ಆದ್ದರಿಂದ ಬೇಡಿ. ಬೆಳಗ್ಗೇನೇ ಕರಕೊಂಡ್ಹೋಗಿ" ಎಂದು ಪಕ್ಕದ ಮನೆಯ ಶಂಕರಮ್ಮನವರೂ ಹೇಳಿದರು.

ನರ್ಸ್ ಪಾರ್ವತಮ್ಮನನ್ನು ಕರೆತರಲು ಶಾಮಣ್ಣನವರು ಆಕೆಯ ಮನೆಗೆ ನಾಲ್ಕು ಬಾರಿ ಹೋಗಿ ಬಂದರು. ಯಾವುದೋ ಹೆರಿಗೆ ಕೇಸಿಗೆ ಹೋಗಿದ್ದ ಆಕೆ ಎಷ್ಟು ಹೊತ್ತಾದರೂ ಮನೆಗೆ ಬರಲಿಲ್ಲ.

ನಂಜಮ್ಮನವರು ರಾತ್ರಿಯೆಲ್ಲ ಹಾಗೆಯೇ ಕಳೆಯಬೇಕಾಯಿತು. ಶಾಮಣ್ಣನವರು ಊಟವನ್ನೇ ಮಾಡಲಿಲ್ಲ. ಗೌರಿ ತಂದೆಯ ಬಲವಂತದಿಂದ ಊಟದ ಶಾಸ್ತ್ರ ಮಾಡಿದಳು.

ರಾತ್ರಿ ಕಳೆಯುವುದು ಬಹಳ ಕಷ್ಟವಾಯಿತು. "ಗೌರಿ, ನೀನು ಮಲಕ್ಕೋಮ್ಮ. ನಾನು ಎದ್ದಿರ್ತೀನಿ" ಎಂದು ತಂದೆ ಹೇಳಿದರು. ಆದರೆ ಗೌರಿ ಆಗಾಗ ಎದ್ದು ಬಂದು ತಾಯಿಯನ್ನು ವಿಚಾರಿಸಿಕೊಳ್ಳುತ್ತಿದ್ದಳು. ಆವಳಿಗೆ ನಿದ್ದೆ ಬರುವಂತಿರಲಿಲ್ಲ. ತುಂಬ ಗಾಬರಿಯಾಗಿತ್ತು.

ಬೆಳಗ್ಗೆ ಎಂಟು ಗಂಟೆಯ ಹೊತ್ತಿಗೆ ಒಂದು ಗಾಡಿ ಮಾಡಿ ನಂಜಮ್ಮನವರನ್ನು ಆಸ್ಪತ್ರೆಗೆ ಸಾಗಿಸಿದ್ದಾಯಿತು.

ಲೇಡಿ ಡಾಕ್ಟರ್ ಎಷ್ಟು ಹೊತ್ತಾದರೂ ಬರಲಿಲ್ಲ. ನಂಜಮ್ಮನವರು ಆಸ್ಪತ್ರೆಯ ವೆರಾಂಡಾದಲ್ಲಿಯೇ ಬಿದ್ದುಕೊಂಡು ಹೊರಳಾಡುತ್ತಿದ್ದರು.

ಶಾಮಣ್ಣನವರು ಮೂರು ನಾಲ್ಕು ಬಾರಿ ಲೇಡಿ ಡಾಕ್ಟರ ಮನೆಗೆ ಹೋಗಿ ಕರೆದು ಬಂದರು.

ಲೇಡಿ ಡಾಕ್ಟರ್ ಪತ್ರಿಕೆ ಓದುತ್ತಾ ಆರಾಮುಕುರ್ಚಿಯ ಮೇಲೆ ಕುಳಿತಿದ್ದರು. ಶಾಮಣ್ಣನವರು ಎಲ್ಲ ಹೇಳಿಕೊಂಡು "ದಯವಿಟ್ಟು ಈಗಲೇ ಬಂದು ನೋಡಿ, ತುಂಬ ಸಂಕಟಪಡ್ತಾ ಇದಾಳೆ" ಎಂದರು. ಅದಕ್ಕೆ ಆಕೆ "ಹೋಗಿ, ಒಂಬತ್ತು ಗಂಟೆಗೆ ಬರ್ತೀನಿ, ಬಂದ ಕೂಡಲೆ ನೋಡ್ತೀನಿ" ಎಂದು ಮತ್ತೆ ಪತ್ರಿಕೆ ಓದುತ್ತಲೇ ಕುಳಿತುಕೊಂಡರು. ಶಾಮಣ್ಣನವರು "ತುಂಬ ಸೀರಿಯಸ್ಸಾಗಿದೆ, ಆದ್ರಿಂದ" ಎಂದರು. ಅದಕ್ಕೆ ಆಕೆ "ಆಗಲಿ, ಬರ್ತೀನಿ ಹೋಗಿ" ಎಂದು ಹೇಳಿ ಕಳಿಸಿಬಿಟ್ಟರು.

ಸುಮಾರು ಒಂಬತ್ತೂವರೆ ಗಂಟೆಗೆ ಆಕೆ ಆಸ್ಪತ್ರೆಗೆ ಬಂದರು. ವೆರಾಂಡಾದಲ್ಲಿಯೇ ನರಳುತ್ತಿದ್ದ ನಂಜಮ್ಮನವರನ್ನು ಸುಮ್ಮನೆ ನೋಡಿದರೇ ಹೊರತು ಮಾತಾಡಿಸಲಿಲ್ಲ, ಮುಟ್ಟಲಿಲ್ಲ. ನೇರವಾಗಿ ಒಳಗೆ ಹೋಗಿ ತಮ್ಮ ಕೋಣೆ ಸೇರಿಬಿಟ್ಟರು. ಹತ್ತು ಗಂಟೆಯಾದರೂ ಹೊರಗೆ ಬರಲಿಲ್ಲ. ಹತ್ತೂಕಾಲು ಗಂಟೆಯ ಹೊತ್ತಿಗೆ ಒಬ್ಬ ನರ್ಸ್ ಬಂದು ಶಾಮಣ್ಣನವರಿಗೆ "ಒಳಗೆ ಕರೆದುಕೊಂಡು ಹೋಗಿ" ಎಂದು ಹೇಳಿದಳು. ನಂಜಮ್ಮನವರನ್ನು ಒಳಗೆ ಕರೆದುಕೊಂಡು ಹೋದದ್ದಾಯಿತು.

ಚೆನ್ನಾಗಿ ಪರೀಕ್ಷೆ ಮಾಡಿದನಂತರ ಲೇಡಿ ಡಾಕ್ಟರ್ ಹೊರಗೆ ಬಂದು "ಈಗಲೇ ಆಪರೇಷನ್ ಆಗಬೇಕು. ಒಳಗಡೆ ಟ್ಯೂಮರ್ ಇರೋ ಹಾಗಿದೆ" ಎಂದು ಶಾಮಣ್ಣನವರಿಗೆ ಹೇಳಿ ಪುನಃ ಒಳಗೆ ಹೊರಟು ಹೋದಳು.

ಆಪರೇಷನ್ ಅಂದ ಕೂಡಲೆ ಗೌರಿಗೆ ಗಾಬರಿಯಾಯಿತು. ಶಾಮಣ್ಣನವರೂ ಸ್ವಲ್ಪ ಯೋಚಿಸಿದರು. ಆದರೆ ಆಪರೇಷನ್ ಆಗದೆ ಒಳಗಿರುವುದು ಹೊರಗೆ ಬರುವ ಹಾಗಿರಲಿಲ್ಲ. 'ಆಗಲಿ' ಎಂದು ಗಟ್ಟಿ ಮನಸ್ಸು ಮಾಡಿಕೊಂಡರು. ಅಷ್ಟು ಹೊತ್ತಿಗೆ ಒಬ್ಬ ನರ್ಸ್ ಬಂದು "ನೀವು ಅವರ ಯಜಮಾನರೋ?" ಎಂದು ಶಾಮಣ್ಣನವರನ್ನು ಕೇಳಿದಳು.

ಶಾಮಣ್ಣನವರು "ಹೌದು" ಎಂದರು.

"ಹಾಗಾದರೆ ಆಪರೇಷನ್ನಿಗೆ ಎಲ್ಲ ಸಿದ್ಧ ಮಾಡಿಕೊಳ್ತಿದಾರೆ. ಈ ರಿಜಿಸ್ಟರಿನಲ್ಲಿ ಸೈನ್ ಮಾಡಿ, ಬನ್ನಿ" ಎಂದು ಕರೆದಳು. ಶಾಮಣ್ಣನವರು ಅವಳ ಹಿಂದೆ ಆಫೀಸು ರೂಮಿಗೆ ಹೋಗಿ ರಿಜಿಸ್ಟರಿಗೆ ಸಹಿ ಹಾಕಿ, ಶಸ್ತ್ರ ಚಿಕಿತ್ಸೆಗೆ ತಮ್ಮ ಒಪ್ಪಿಗೆ ಕೊಟ್ಟರು.

ಶಸ್ತ್ರಚಿಕಿತ್ಸೆ ಆಯಿತು. ನೀರು ತುಂಬಿದ ದಪ್ಪ ತೆಂಗಿನಕಾಯಿ ಯಷ್ಟು ಗಾತ್ರದ ಒಂದು ಚೆಂಡು ಹೊರಗೆ ಬಂತು. ಶಾಮಣ್ಣನವರೂ ಆಮೇಲೆ ಹೋಗಿ ಅದನ್ನು ನೋಡಿಕೊಂಡು ಬಂದರು. ಗೌರಿ 'ನಾನು ನೋಡಲ್ಲಪ್ಪ' ಎಂದುಬಿಟ್ಟಳು ಶಾಮಣ್ಣನವರಿಗೆ, ಹೆಂಡತಿ ಹೇಗಿದ್ದಾಳೋ ಎನ್ನಿಸಿತು.

"ಪೇಷಂಟ್ ಹೇಗಿದ್ದಾರೆ ?" ಎಂದು ಕೇಳಿದರು.

"ಹುಷಾರಾಗಿದಾರೆ. ಆದರೆ ಜ್ಞಾನ ಬಂದಿಲ್ಲ. ಇನ್ನೂ ಒಂದು ಗಂಟೆ ಆಗಬಹುದು" ಎಂದು ಹೆಡ್‌ನರ್ಸ್ ಹೇಳಿದಳು. ಆದರೆ ಎರಡು ಗಂಟೆಯಾದರೂ ಆ ಜ್ಞಾನ ಬರಲಿಲ್ಲ ? ನಂಜಮ್ಮ ಹೊರಟುಹೋಗಿದ್ದಳು.

ಆಮೇಲೆ ನಡೆಯಬೇಕಾದುದೆಲ್ಲ ನಡೆಯಿತು.

ಆ ಕಾಗದ ನೋಡಿ ರಾಮಸ್ವಾಮಿಗೆ ತುಂಬ ದುಃಖವಾಯಿತು. ಅಲ್ಲದೆ, 'ಗೌರಿ ಎಷ್ಟು ಗಾಬರಿಮಾಡಿಕೊಂಡಿದಾಳೊ ಇದೆಲ್ಲ ನೋಡಿ!' ಎನ್ನಿಸಿತು.

ಮಾರನೆಯ ದಿನವೇ ಮಾವನವರಿಗೆ ಕಾಗದ ಬರೆದ : "ಛೆ ತುಂಬ ಅನ್ಯಾಯವಾಯಿತು. ಈಗ ಗೌರಿ ಅಲ್ಲಿದ್ದರೆ ಹೇಗೆ? ಆದ್ದರಿಂದ ಅವಳನ್ನು ಕರೆದುಕೊಂಡು ನೀವೂ ಈ ಊರಿಗೆ ಬಂದುಬಿಡಿ. ಇಲ್ಲೇ ಬಾಣಂತನ ನಡೆಯುತ್ತದೆ" ಎಂದು ಅದರಲ್ಲಿ ತಿಳಿಸಿದ್ದ.

ಆದರೆ ಶಾಮಣ್ಣನವರು ಅದಕ್ಕೆ ಒಪ್ಪಲಿಲ್ಲ. ಬಾಣಂತನಕ್ಕಾಗಿ ತವರು ಮನೆಗೆ ಬಂದ ಹೆಣ್ಣುಮಗಳನ್ನು ವಾಪಸು ಗಂಡನ ಮನೆಗೆ ಕಳಿಸಲು ಮನಸ್ಸಾಗಲಿಲ್ಲ. "ಮೂಡಲಹಳ್ಳಿಯಿಂದ ನನ್ನ ತಮ್ಮ ಕಾಗದ ಬರೆದಿದಾನೆ. ಅಲ್ಲಿ ಎಲ್ಲ ಅನುಕೂಲವಾಗಿದೆಯಂತೆ. ನೋಡಿ

ಕೊಳ್ಳೋದಕ್ಕೆ ಅವನ ಹೆಂಡತಿ, ಅವನ ಅತ್ತೆ ಎಲ್ಲ ಇದಾರೆ. ಈಗ ಅಲ್ಲಿರೋ ಮಿಡ್‌ವೈಫ್ ಕೂಡ ತುಂಬ ಬುದ್ಧಿವಂತಳಂತೆ. ಆದ್ದರಿಂದ ಗೌರಿಯನ್ನು ಮುಂದಿನ ವಾರ ಅಲ್ಲಿಗೆ ಕಳಿಸೋಣವೆಂದಿದ್ದೇನೆ" ಎಂದು ಅವರು ಅಳಿಯನಿಗೆ ಕಾಗದ ಬರೆದರು.

ಗೌರಿಯೂ ಹಾಗೆಯೇ ಬರೆದಿದ್ದಳು.

ರಾಮುಸ್ವಾಮಿ ಸುಮ್ಮನಾದ.

* * * * *

ಆದರೆ ಶಾಮಣ್ಣನವರು ಊಹಿಸಿದ್ದೇ ಒಂದು, ಅದು ಆದದ್ದೇ ಒಂದು. 'ಗೌರಿಯನ್ನು ನಾನು ಮೂಡಲಹಳ್ಳಿಗೆ ಕಳಿಸಬಾರದಾಗಿತ್ತು' ಎಂದುಕೊಂಡರು. ಆ ವಿಷಯವಾಗಿ ಅಳಿಯನಿಂದಲೂ ನಿಷ್ಠುರದ ಮಾತು ಕೇಳಬೇಕಾಯಿತು.

ಎಂಟು ತಿಂಗಳು ತುಂಬುವುದರೊಳಗಾಗಿ ಗೌರಿ ಮೂಡಲಹಳ್ಳಿಗೆ ಹೋದಳು. ಅದಕ್ಕೆ ಮುಂಚೆ ಅವಳು ಅಲ್ಲಿಗೆ ಹೋಗುವ ಹಾಗಿರಲಿಲ್ಲ. ತಾಯಿಯ ದಿನ ಕರ್ಮ ಎಲ್ಲ ಆಗಬೇಕಾಗಿತ್ತು. ಆ ಕಾರ್ಯಕ್ಕೆ ಬರಬೇಕೆಂದು ಮಾವನವರು ಅಳಿಯನಿಗೆ ಕಾಗದ ಹಾಕಿದ್ದರು. ಆದರೆ ರಾಮುಸ್ವಾಮಿಗೆ ರಜಾ ಸಿಕ್ಕುವಹಾಗಿರಲಿಲ್ಲ. ಅವನು ಉತ್ತರ ಬರೆದುಬಿಟ್ಟ. 'ಈಗ ಆಗುವುದಿಲ್ಲ, ನಾಳೆ ಗೌರಿ ಹೆತ್ತರೆ ಬರಬೇಕಾಗುತ್ತದೆ. ಆದ್ದರಿಂದ ಈಗ ರಜಾ ತೆಗೆದುಕೊಳ್ಳುವಹಾಗಿಲ್ಲ, ಮೇಲೆ ಮೇಲೆ ರಜಾ ತೆಗೆದುಕೊಂಡರೆ ನಮ್ಮ ಸಾಹೇಬರು ಮನಸ್ಸಿಗೆ ಬೇಸರಮಾಡಿಕೊಳ್ಳುತ್ತಾರೆ. ಆಗಲಿ, ನಡೆಯಬೇಕಾದ್ದೆಲ್ಲ ಸಾಂಗವಾಗಿ ನಡೆಯಲಿ; ದಯವಿಟ್ಟು ನನ್ನನ್ನು ಕ್ಷಮಿಸಿ' ಎಂದು ಮಾವನವರನ್ನು ಕೇಳಿಕೊಂಡಿದ್ದ. ಗೌರಿ ಕಾಗದ ಓದಿಕೊಂಡು "ನೋಡಿದ್ಯಾ ಅಣ್ಣಾ, ನನಗೆ ಗೊತ್ತಿತ್ತು ಅವರು ಬರೊಲ್ಲಾಂತ" ಎಂದಳು.

ಮೂಡಲಹಳ್ಳಿಗೆ ಹೋದ ಮಾರನೆಯ ದಿನ ರಾತ್ರಿಯೇ ಗೌರಿಗೆ ನೋವು ಕಾಣಿಸಿಕೊಂಡಿತು. ಚಿಕ್ಕಪ್ಪನವರ ಅತ್ತೆ ಅಚ್ಚಮ್ಮ "ಬಸ್ಸಿನಲ್ಲಿ ಬಂದ ಆಯಾಸದಿಂದ ಹಾಗಾಗಿರಬೇಕು. ಏಳು ತಿಂಗಳು

ತುಂಬಿದ ಮೇಲೆ ಇಷ್ಟು ಆಯಾಸಮಾಡಿಕೊಳ್ಳಬಾರದು. ಅದೂ ಅಲ್ಲದೆ, ಇದೇ ಮೊದಲನೇದು; ಆದ್ದರಿಂದ ಈಗಲೇ ಯಾಕೆ ಸೂಲಗಿತ್ತಿಗೆ ಹೇಳಿ ಕಳಿಸ್ತಿ, ನೋಡೋಣ ಇನ್ನೂ ಸ್ವಲ್ಪ ಹೊತ್ತು" ಎಂದು ಅಳಿಯನನ್ನು ತಡೆದರು. ಹೆಂಡತಿಯೂ ಹಾಗೆಯೇ ಹೇಳಿದುದರಿಂದ ಚಿಕ್ಕಪ್ಪ ಸೋಮಣ್ಣನವರು ಸೂಲಗಿತ್ತಿ ಸರೋಜಮ್ಮನಿಗೆ ಸುದ್ದಿ ಕಳಿಸಲಿಲ್ಲ.

ಬೆಳಗಿನ ಜಾವ ನಾಲ್ಕು ಗಂಟೆಗೆ ನೋವು ಹೆಚ್ಚಾಯಿತು. ಗೌರಿ ತುಂಬ ಸಂಕಟಪಡುತ್ತಿದ್ದಳು. ಶಾರದಮ್ಮ ಬಂದು ಮಹಡಿಯ ಮೇಲೆ ಮಲಗಿದ್ದ ಗಂಡನನ್ನು ಎಬ್ಬಿಸಿದಳು. ಸೋಮಣ್ಣನವರು ಎದ್ದು ಶಾಲು ಹೊದ್ದುಕೊಂಡು ಎಕ್ಕಡ ಕಾಲಿಗೆ ಸಿಕ್ಕಿಸಿ, ಲಾಂದ್ರ ಹಿಡಿದು ಪಂಚಾಯಿತಿ ಮನೆಯ ಕಡೆಗೆ ಹೊರಟರು. ಪಂಚಾಯಿತಿ ಕಟ್ಟಡದ ಹಿಂಭಾಗದಲ್ಲಿದ್ದ ಚಿಕ್ಕ ರೂಮಿನಲ್ಲಿ ಸೂಲಗಿತ್ತಿ ಸರೋಜಮ್ಮ ವಾಸವಾಗಿದ್ದಳು. ಅವಳಿಗೆ ತುಂಬ ನಿದ್ದೆ ಬಂದಿತ್ತು. ಸೋಮಣ್ಣನವರು ಎಷ್ಟು ಕೂಗಿದರೂ ಒಳಗಿನಿಂದ ಉತ್ತರವೇ ಬರಲಿಲ್ಲ. ಅವರು ಸುಮಾರು ಕಾಲು ಗಂಟೆ ಬಾಗಿಲ ಮುಂದೆ ನಿಂತು ಕಿರಿಚಿದರು. ಆಮೇಲೆ ತಡೆಯಲಾಗಲಿಲ್ಲ. ಬಲವಾಗಿ ಬಾಗಿಲು ಬಡಿದರು. ಅದಕ್ಕೂ ಉತ್ತರ ಬರಲಿಲ್ಲ.

ಸೋಮಣ್ಣನವರು ಪಂಚಾಯಿತಿಯ ಮೆಂಬರು, ಪಂಚಾಯಿತಿ ಸಂಬಳ ಕೊಟ್ಟು ಸರೋಜಮ್ಮನನ್ನು ಊರಿನ ಸೂಲಗಿತ್ತಿಯಾಗಿ ನೇಮಿಸಿಕೊಂಡಿತ್ತು. ಅವಳನ್ನು ಎಬ್ಬಿಸಬೇಕಾದರೇ ಇಷ್ಟು ಶ್ರಮವಾಗುತ್ತದೆ, ಎಂಬುದು ಅನುಭವವಾದ ಮೇಲೆ ಸೋಮಣ್ಣನವರ ತಾಳ್ಮೆ ಹೋಯಿತು. "ಹೀಗಾದರೆ ಹೇಗೆ, ಈಕೆ ಇದ್ದು ಏನು ಪ್ರಯೋಜನ!" ಎನ್ನಿಸಿತು. ಸಿಟ್ಟು ಬಂದು ಜಾಡಿಸಿ ಬಾಗಿಲು ಒದ್ದರು. ಬಲಗೈಯಲ್ಲಿದ್ದ ಲಾಂದ್ರ ಅಲ್ಲಾಡಿ ದೀಪ ಆರಿಹೋಯಿತು. ಎಲ್ಲೆಲ್ಲೂ ಕಗ್ಗತ್ತಲು ಕವಿಯಿತು.

ಸರೋಜಮ್ಮನಿಗೆ ಆಗ ಎಚ್ಚರವಾಯಿತು.

"ಯಾರು? ಯಾರದು ಹಾಗೊದೀತಾ ಇರೋದು?" ಎಂದು ಗರ್ಜಿಸಿದಳು.

ಸೋಮಣ್ಣನವರು "ನಾನು, ಸ್ವಲ್ಪ ಬಾಗಿಲು ತೆಗೀರಮ್ಮ" ಎಂದು ಹೊರಗಿನಿಂದಲೇ ಕೂಗಿದರು.

ಸರೋಜಮ್ಮ "ನಾನು ಅಂದರೆ?" ಎಂದು ಒಳಗಿನಿಂದಲೇ ಕೂಗಿ ಕೇಳಿದಳು. ಬಾಗಿಲ ಸಂದಿಯಲ್ಲಿ ದೀಪ ಕಾಣಿಸದೇ ಇದ್ದುದರಿಂದ ಯಾರೊ, ಏನೊ, ಎಂದು ಅವಳಿಗೆ ಹೆದರಿಕೆಯಾಯಿತು; ತಕ್ಷಣವೆ ಹೋಗಿ ಬಾಗಿಲು ತೆಗೆಯುವ ಧೈರ್‍ಯ ಇರಲಿಲ್ಲ.

ಸೋಮಣ್ಣನವರು "ನಾನು ಸೋಮಣ್ಣ, ಸ್ವಲ್ಪ ಬಾಗಿಲು ತೆಗೀರಮ್ಮ" ಎಂದು ಮತ್ತೊಮ್ಮೆ ಕೂಗಿದ ಮೇಲೆ ಸರೋಜಮ್ಮ ಓಡಿ ಬಂದು ಬಾಗಿಲು ತೆರೆದಳು. ಸೋಮಣ್ಣನವರು "ಸ್ವಲ್ಪ ಕಡ್ಡಿಪೆಟ್ಟಿಗೆ ತನ್ನೀಮ್ಮ" ಎಂದ ಮೇಲೆ ಆಕೆ ಕಡ್ಡಿಪೆಟ್ಟಿಗೆ ತಂದು, ಒಂದು ಕಡ್ಡಿ ಗೀರಿ ಹಚ್ಚಿದಳು. ಲಾಂದ್ರ ಹಚ್ಚಿಕೊಂಡ ಮೇಲೆ ಸೋಮಣ್ಣನವರು ಮನೆಯ ಒಳಗೆ ಹೋಗಿ, ಎಲ್ಲ ಹೇಳಿದರು. ಸರೋಜಮ್ಮ ಬೇಗ ತನ್ನ ಕೈಪೆಟ್ಟಿಗೆ ತೆಗೆದುಕೊಂಡು ಬಾಗಿಲಿಗೆ ಬೀಗ ಹಾಕಿ, ಸೋಮಣ್ಣನವರ ಹಿಂದೆ ಹೊರಟಳು.

ಆಕೆ ಸೋಮಣ್ಣನವರ ಮನೆ ತಲಪಿದಾಗ ಐದು ಗಂಟೆಯ ಸಮಯ. ಗೌರಿ ತುಂಬ ಸಂಕಟಪಡುತ್ತಿದ್ದಳು. ಸರೋಜಮ್ಮ ಅವಳನ್ನು ಪರೀಕ್ಷಿಸಿ, "ನಾಳೆ ಸಾಯಂಕಾಲ ಐದು ಗಂಟೇ ಮೇಲೆ ಆಗಬಹುದು" ಎಂದು ಹೇಳಿಬಿಟ್ಟಳು. ಅವಳ ಸಂಕಟ ನೋಡಿದರೆ ಅಚ್ಚಮ್ಮನವರಿಗೆ, ಶಾರದಮ್ಮನವರಿಗೆ ಸರೋಜಮ್ಮನ ಮಾತಿನಲ್ಲಿ ನಂಬಿಕೆಯುಂಟಾಗಲಿಲ್ಲ. ಆದರೆ ಅವರು ಬಾಯಿಬಿಟ್ಟು ಹೇಳಲಿಲ್ಲ. ಸರೋಜಮ್ಮ "ಸರಿ. ಇನ್ನು ನಾನ್ಯಾಕೆ ಸುಮ್ಮನೆ ನಿದ್ದೆ ಕೆಡಬೇಕು, ನಾಳೆ ಮಧ್ಯಾಹ್ನ ಒಂದು ಸಲ ಬರ್ತೀನಿ. ಅದಕ್ಕೆ ಮುಂಚೆ ಬರಬೇಕಾದರೆ ಹೇಳಿಕಳಿಸಿದರೆ ಬಂದ್ಬಿಡ್ತೀನಿ" ಎಂದು ಹೊರಡಲು ಸಿದ್ಧವಾದಳು. ಶಾರದಮ್ಮನವರು "ಸರೋಜಮ್ಮ, ನೀವು ಮನೇಗೆ ಹೋಗಬೇಡಿ. ಹಾಸಿಗೆ ಕೊಡ್ತೀನಿ, ಇಲ್ಲೇ ಮಲಕ್ಕೊಳ್ಳಿ" ಎಂದು ಬಲವಂತ ಮಾಡಿದ ಮೇಲೆ ಸರೋಜಮ್ಮ ಗೌರಿ ಮಲಗಿದ್ದ ಕೋಣೆಯಲ್ಲಿಯೇ ಒಂದು ಚಾಪೆ ಹಾಸಿಕೊಂಡು ಮಲಗಿಕೊಂಡಳು. ಗೌರಿ ನರಳುತ್ತಿದ್ದರೂ ಸರೋಜಮ್ಮನಿಗೆ ಚೆನ್ನಾಗಿ ನಿದ್ದೆ ಬಂತು. ಶಾರದಮ್ಮ ಮಾತ್ರ ಎಚ್ಚರವಾಗೇ ಕುಳಿತಿದ್ದರು. ಗೌರಿ ನೋವು ತಡೆಯ

ಲಾರದೆ ಗಟ್ಟಿಯಾಗಿ ಕಿರಿಚಿದಾಗ, ಶಾರದಮ್ಮ ಸರೋಜಮ್ಮನನ್ನು ಎಬ್ಬಿಸುತ್ತಿದ್ದಳು. ಆದರೆ ಸರೋಜಮ್ಮ ಆರು ಗಂಟೆಯ ವರೆಗೂ ಏಳಲಿಲ್ಲ.

ಎದ್ದು ಮುಖ ತೊಳೆದುಕೊಂಡು ಒಂದು ಲೋಟ ಕಾಫಿ ಕುಡಿದು "ಇನ್ನೂ ಈಗಲೇ ಏನೂ ಇಲ್ಲ, ಸಾಯಂಕಾಲವೇ. ನಾನು ಮನೇಗೆ ಹೋಗಿ ಅಡಿಗೆ ಕೆಲಸ ಮಾಡ್ಕೊಳ್ತೀನಿ. ಮಧ್ಯೆ ಬೇಕಾದರೆ ಹೇಳಿಕಳಿಸಿ, ಬರ್ತೀನಿ" ಎಂದು ಪೆಟ್ಟಿಗೆ ತೆಗೆದುಕೊಂಡು ಹೊರಟಳು. ಶಾರದಮ್ಮ "ಇಲ್ಲೇ ಊಟ ಮಾಡಿ, ಯಾಕೆ ಹೋಗ್ತೀರ, ಇಲ್ಲೇ ಇದ್ದುಬಿಡಿ" ಎಂದು ಬಹಳ ಹೇಳಿದಳು. ಆದರೆ ಸರೋಜಮ್ಮ ಕೇಳಲಿಲ್ಲ. "ನೀವು ಗಾಬರಿ ಪಡಬೇಡಿ. ನಂಗೊತ್ತಿದೆ. ನಾನು ಟೈಮಿಗೆ ಸರಿಯಾಗಿ ಬರ್ತೀನಿ. ನೀವೇನೂ ಯೋಚನೆ ಮಾಡಬೇಡಿ. ಗೌರಮ್ಮನಿಗೆ ಧೈರ್ಯ ಹೇಳಿ" ಎಂದು ಹೇಳಿ ಹೊರಟೇಬಿಟ್ಟಳು.

ಹತ್ತು ಗಂಟೆಯ ಹೊತ್ತಿಗೆ ಒನ್ಮೆ ಸೋಮಣ್ಣನವರು ಹೋಗಿ ಅವಳನ್ನು ಕರೆದು ಬಂದರು. ಅವಳು "ಈಗ ಬಂದೆ" ಎಂದು ಹೇಳಿದರೂ ಆಗ ಬರಲೇ ಇಲ್ಲ. ಹನ್ನೆರಡೂವರೆ ಹೊತ್ತಿಗೆ ಬಂದಳು. ಅಷ್ಟು ಹೊತ್ತಿಗಾಗಲೆ, ಕೆಲವು ನಿಮಿಷಗಳಲ್ಲಿಯೇ ಗೌರಿ ತಾಯಿಯಾಗುವ ಸೂಚನೆಗಳು ಕಂಡುಬಂದಿದ್ದುವು. ಆದರೆ ಸ್ವಲ್ಪ ಹೊತ್ತಿಗೆ ಮುಂಚೆ ಬರುತ್ತಿದ್ದಂತೆ ಮೇಲೆ ಮೇಲೆ ನೋವು ಬರುವುದು ಏಕೊ ನಿಂತು ಹೋಗಿತ್ತು. ಸರೋಜಮ್ಮ ಏನೇನೋ ಪ್ರಯತ್ನ ಮಾಡಿದಳು. ಇದ್ದಕ್ಕಿದ್ದಂತೆ ಗೌರಿಗೆ ಪ್ರಜ್ಞೆ ತಪ್ಪಿತು. ಸೂಲಗಿತ್ತಿಯ ಕೈ ನಡುಗಿತು. ಏನು ಮಾಡಬೇಕೊ ತೋಚಲಿಲ್ಲ. ದೇವರ ಮೇಲೆ ಭಾರ ಹಾಕಿ ಬಲವಂತದಿಂದ ಹೆರಿಗೆ ಮಾಡಿಸಿದಳು.

ಗೌರಿ ತಾಯಿಯಾದಳು.

ಆದರೆ ಸತ್ತ ಮಗುವಿನ ತಾಯಿ!

ಗಂಡು ಮಗು. ತಕ್ಕಮಟ್ಟಿಗೆ ಚೆನ್ನಾಗಿಯೆ ಬೆಳೆದಿತ್ತು. ಆದರೇನು, ಆ ಮಗುವಿಗೆ ಹುಟ್ಟು ಸಾವು ಎರಡೂ ಒಟ್ಟಿಗೆ ಆಗಿತ್ತು

ಹೆರಿಗೆ ಆದ ಕಾಲು ಗಂಟೆಯ ಮೇಲೆ ಗೌರಿಗೆ ಜ್ಞಾನ ಬಂತು.

ಆಗತಾನೆ ಹೆತ್ತ ಹಸಿಹೊಟ್ಟೆ ತನ್ನ ಮಗುವಿನ ಮುಖ ನೋಡಿ ಬೆಂದುಹೋಯಿತು.

ಇದಕ್ಕೆ ಯಾರು ಹೊಣೆ! ಯಾರ ತಪ್ಪು ?

ರಾಮುಸ್ವಾಮಿ "ಸೂಲಗಿತ್ತಿಯದೇ. ಅವಳಿಗೆ ಏನೂ ತಿಳಿಯದು. ಅನ್ಯಾಯವಾಯಿತು. ನೀವು ಗೌರಿಯನ್ನು ಮೂಡಲಹಳ್ಳಿಗೆ ಕಳಿಸ ಬಾರದಾಗಿತ್ತು. ಅದಕ್ಕೇ ನಾನು ಆಗ ಹಾಗೆ ಬರೆದಿದ್ದು. ಹೊಳೆನರಸೀ ಪುರದಲ್ಲೇ ನೋಡಿಕೊಳ್ಳೋರು ಇಲ್ಲ. ನಮ್ಮ ಅತ್ತೆಯವರ ಗತಿ ಹಾಗಾಯಿತು. ಇನ್ನು ಆ ಕೊಂಪೆಯಲ್ಲಿ ಕೇಳಬೇಕೆ. ಸದ್ಯ, ಹೋಗಲಿ ದೊಡ್ಡ ಜೀವಕ್ಕೆ ಅಪಾಯವಾಗಲಿಲ್ಲವಲ್ಲ. ನಮ್ಮ ಪುಣ್ಯ" ಎಂದು ಮಾವನವರಿಗೆ ಬರೆದ.

ಶಾಮಣ್ಣನವರಿಗೂ "ಅಯ್ಯೋ, ಹೀಗಾಯಿತಲ್ಲ" ಎಂದು ದುಃಖ ವಾಯಿತು. ಅಳಿಯನ ಕಾಗದ ನೋಡಿದ ಮೇಲಂತೂ ತುಂಬ ಸಂಕಟ ವಾಯಿತು. ಅಳಿಯನ ಬಾಯಿಂದ ಈ ಮಾತು ಕೇಳಬೇಕಾಯಿತಲ್ಲ, ಎನ್ನಿಸಿತು. ಏನು ಮಾಡುವುದು, ಬೆಂದ ಹೊಟ್ಟೆ, ನಾನಾದರೂ ಹಾಗೆಯೇ ಬರೆಯುತ್ತಿದ್ದೆ, ಎಂದುಕೊಂಡು ಸುಮ್ಮನಾದರು.

ಕೆಲವು ದಿನಗಳಲ್ಲಿಯೇ ಗೌರಿ ದುಃಖದಿಂದ ಕೊರಗಿ ಇಳಿದು ಹೋದಳು. ಅತ್ತು ಅತ್ತು ಕಣ್ಣುಗಳೆರಡೂ ಊದಿಕೊಂಡಿದ್ದುವು. ಶಾರದಮ್ಮನವರು, ಅಚ್ಚಮ್ಮನವರು, ಸೋಮಣ್ಣನವರು ಎಷ್ಟು ಹೇಳಿದರೂ ಕೇಳಲಿಲ್ಲ. ಅವಳ ಮನಸ್ಸಿಗೂ ಸೂಲಗಿತ್ತಿಯದೇ ತಪ್ಪು, ಎನ್ನಿಸಿ ಬಿಟ್ಟಿತ್ತು. ಅದನ್ನು ನೆನಸಿಕೊಂಡಾಗಲೆಲ್ಲ ಗುಲಾಬಿ ಬಣ್ಣದ ಆ ಗುಂಡು ಮುಖದ ಮಗುವಿನ ಚಿತ್ರ ಕಣ್ಣು ಮುಂದೆ ಬಂದು ನಿಲ್ಲುತ್ತಿತ್ತು. ಊಟ ನಿದ್ದೆ ಇಲ್ಲದೆ ಸುಮ್ಮನೆ ಅಳುತ್ತಿದ್ದಳು. ಔಷಧೋಪಚಾರಗಳನ್ನೂ ಸಹ ಸರಿಯಾಗಿ ಮಾಡಿಸಿಕೊಳ್ಳುತ್ತಿರಲಿಲ್ಲ. ಎಲ್ಲಕ್ಕೂ "ಥೂ ನನಗ್ಯಾಕೆ ಈಗ!" ಎನ್ನುತ್ತಿದ್ದಳು. ಶಾರದಮ್ಮನವರಿಗೆ ಅವಳನ್ನು ಸಮಾಧಾನ ಮಾಡುವುದು ಬಹಳ ಕಷ್ಟವಾಗುತ್ತಿತ್ತು. ಮೂರು ತಿಂಗಳು ಕಳೆಯುವುದು ಮೂರು ವರುಷ ಕಳೆದಂತಾಯಿತು.

ರಾಮುಸ್ವಾಮಿಯ ಬಲವಂತ ತಡೆಯಲಾರದೆ "ಮೂರು ತಿಂಗಳೊಳಗೇ ಕಳಿಸಿಬಿಡಿ. ನಾನು ಬೆಂಗಳೂರಿಗೆ ಕರೆದುಕೊಂಡುಹೋಗಿಬಿಡುತ್ತೇನೆ" ಎಂದು ಶಾಮಣ್ಣನವರು ಕಾಗದ ಬರೆದಿದ್ದರು. ಅದಕ್ಕೆ ಸೋಮಣ್ಣ "ಬೇಡ. ಇದೇ ಮೊದಲನೇ ಬಾಣಂತನ. ಮೂರು ತಿಂಗಳಾದರೂ ಸರಿಯಾಗಿ ಆರೈಕೆ ನಡೀಬೇಡವೆ? ಇರಲಿ ಬಿಡು. ನಾನು ಬೆಂಗಳೂರಿಗೆ ಕಾಗದ ಬರೀತೀನಿ" ಎಂದು ಅಣ್ಣನಿಗೆ ಉತ್ತರ ಬರೆದರು.

ಹೋಟಲ ಊಟ ಮಾಡಿ ಬೇಸರಗೊಂಡಿದ್ದ ರಾಮುಸ್ವಾಮಿ ಮೂರು ತಿಂಗಳು ಕಳೆಯುತ್ತಲೇ ಹೊಳೆನರಸೀಪುರಕ್ಕೆ ಹೋದ. ಮಾವನವರೊಡನೆ ಮೂಡಲಹಳ್ಳಿಗೆ ಹೋಗಿ ಗೌರಿಯನ್ನು ಹೊಳೆನರಸೀಪುರಕ್ಕೆ ಕರೆದುಕೊಂಡು ಬಂದ. ಅಲ್ಲಿ ಮೂರು ದಿನ ಇದ್ದು ಶಾಸ್ತ್ರ ಮಾಡಿ, ಹೆಂಡತಿಯೊಡನೆ ಬೆಂಗಳೂರಿಗೆ ಹೊರಟ.

ಪಂಡಿತರ ಭವಿಷ್ಯ ಸುಳ್ಳಾಯಿತು. ಗೌರಿ ತಾಯಿಯಾಗಿ ಮನೆಗೆ ಬಂದಿದ್ದಳು. ಆದರೆ ಅವಳೊಡನೆ ತೊಟ್ಟಿಲು ಬರಲಿಲ್ಲ.

೬

ಊರಿಗೆ ಬಂದು ಮೂರು ತಿಂಗಳಾದರೂ ಗೌರಿ ಮೊದಲಿನ ಗೌರಿ ಆಗಲಿಲ್ಲ. ಕೆಲಸ, ಊಟ, ನಿದ್ದೆ ಯಾವುದರಲ್ಲಿಯೂ ಅವಳಿಗೆ ಉತ್ಸಾಹವಿರಲಿಲ್ಲ. ಕೆಲಸ ಮಾಡುವಾಗಲಂತೂ ಗಳಿಗೆಗೊಮ್ಮೆ 'ಉಷ್' ಎನ್ನುತ್ತಿದ್ದಳು. ರಾಮುಸ್ವಾಮಿ ಒಂದು ದಿನ "ಗೌರಿ, ಹಾಗೆ ಉಷ್ ಅನ್ನಬಾರದು. ಅದು ಬಹಳ ಕೆಟ್ಟದ್ದು" ಎಂದ. ಅದಕ್ಕೆ ಗೌರಿ "ನಾನೇನ್ಮಾಡಲಿ, ನನ್ನ ಕೈಯಲ್ಲಾಗೊಲ್ಲ. ಯಾಕೊ, ಕಾಲೆಲ್ಲ ಸೋತು ಹೋಗುತ್ತೆ" ಎಂದು ಅಳುವುದಕ್ಕೆ ಮೊದಲುಮಾಡಿದಳು.

ರಾಮುಸ್ವಾಮಿ "ನೀನು ಮನಸ್ಸಿಗೆ ತುಂಬ ಹಚ್ಚಿಕೊಂಡ್ಬಿಟ್ಟಿದೀಯೆ. ಆದ್ದರಿಂದ ನಿನಗೆ ಇಷ್ಟು ಸುಸ್ತು. ಅದನ್ನ ಬಿಟ್ಟುಬಿಟ್ಟರೆ ಇಷ್ಟು ಆಯಾಸವಾಗೊಲ್ಲ. ಡಾಕ್ಟರ್ ಟಾನಿಕ್ ಬರೆದ್ಕೊಟ್ಟಿದಾರೆ; ಫಸ್ಟಾದ ಕೂಡಲೆ ಅದನ್ನ ತರ್‍ತೀನಿ, ತೊಗೊ....ಆದರೆ ಮೊದಲು ಆ ಯೋಚನೆ

ಬಿಟ್ಟೆಡು, ಅದನ್ನೇ ಹಚ್ಕೊಂಡು ಕೊರಗಬೇಡ" ಎಂದು ಸಮಾಧಾನ ಮಾಡಿದ.

ಗೌರಿ, ಮನಸ್ಸಿನಲ್ಲಿ ಅದೇ ಯೋಚನೆ ಇದ್ದರೂ "ಏನಿಲ್ಲ, ನನಗೇನೂ ಯೋಚನೆ ಇಲ್ಲ. ಯಾಕೊ ಕೈಲಾಗೊಲ್ಲ ಅಷ್ಟೆ" ಎಂದಳು.

ಒಂದು ದಿನ ಬೆಳಗ್ಗೆ ಹತ್ತು ಗಂಟೆ ಆಗಿದ್ದರೂ ಅನ್ನ ಆಗಿರಲಿಲ್ಲ. ರಾತ್ರಿಯೆಲ್ಲ ತಲೆ ನೋಯುತ್ತಿದ್ದುದರಿಂದ ಗೌರಿ ಬೆಳಗ್ಗೆ ಏಳು ಗಂಟೆ ಆದರೂ ಏಳಲಿಲ್ಲ. ರಾಮುಸ್ವಾಮಿಯೇ ನೀರೊಲೆಗೆ ಉರಿಹಾಕಿ ಕಾಫಿ ಮಾಡಿದ. ಎರಡು ಮೂರು ಬಾರಿ ಹೆಂಡತಿಯನ್ನು ಎಬ್ಬಿಸಿದ. ಅವಳು ಏಳಲಿಲ್ಲ. "ಹೋಗಲಿ, ನಾನೇ ಒಂದನ್ನ ಸಾರು ಮಾಡ್ತೀನಿ. ನೀನು ರೆಸ್ಟ್ ತೊಗೊ" ಎಂದು ಅಡಿಗೆ ಮನೆಗೆ ಹೊರಟ. ಗೌರಿ "ಅಯ್ಯೊ ಬೇಡಿ. ನಾನು ಈಗ ಏಳ್ತೀನಿ. ನಾನೇ ಮಾಡ್ತೀನಿ. ಎಷ್ಟೊತ್ತು!" ಎಂದು ಎದ್ದು ಕುಳಿತಳು. ತಲೆನೋವು ಸ್ವಲ್ಪ ಕಡಮೆಯಾಗಿತ್ತು; ಗಂಡನೇ ಅಡಿಗೆ ಮಾಡಿ ಊಟಮಾಡಿಕೊಂಡು ಆಫೀಸಿಗೆ ಹೋಗುವುದು ಅವಳಿಗೆ ಸರಿಬೀಳಲಿಲ್ಲ. ಹಾಸಿಗೆಯಿಂದ ಎದ್ದು ಹೊರಟಳು.

ಬೇಗಬೇಗ ಎಲ್ಲ ಕೆಲಸಮಾಡಿಕೊಳ್ಳಲು ಪ್ರಯತ್ನಿಸಿದಳು. ಆದರೆ ಎಲ್ಲ ನಿಧಾನವೇ ಆಯಿತು; ತುಂಬ ಸುಸ್ತಾಗಿತ್ತು, ಕೈಕಾಲೇ ಓಡುತ್ತಿರಲಿಲ್ಲ.

"ಗೌರಿ, ಹತ್ತುಗಂಟೆ ಆಗ್ಹೋಯ್ತು" ಎಂದು ರಾಮುಸ್ವಾಮಿ ಕೂಗಿದ ಕೂಡಲೆ ಅಡಿಗೆಮನೆಯಲ್ಲಿ ಏನೋ ಬಿದ್ದ ಸದ್ದಾಯಿತು. ರಾಮುಸ್ವಾಮಿ ಕೋಣೆಯಿಂದಲೇ "ಏನದು ಗೌರಿ?" ಎಂದ. ಉತ್ತರ ಬರಲಿಲ್ಲ; ಆದರೆ ಹೆಂಡತಿ "ಅಯ್ಯೋ!" ಎಂದಹಾಗಾಯಿತು.

ರಾಮುಸ್ವಾಮಿ ತಕ್ಷಣವೆ ಅಡಿಗೆಮನೆಗೆ ಓಡಿಹೋದ.

ಗೌರಿಯನ್ನು ನೋಡಿ ಗಾಬರಿಯಾಯಿತು.

ಅವಳು ಅಡಿಗೆ ಒಲೆಯ ಮುಂದೆ ಮುದುರಿ ಬಿದ್ದುಕೊಂಡಿದ್ದಳು. ಎರಡು ಕೈಗಳಿಂದ ಬಲಗಾಲನ್ನು ಅದುಮಿ ಹಿಡಿದುಕೊಂಡು ಅಳುತ್ತಿದ್ದಳು. ಅನ್ನದ ತಪ್ಪಲೆ ಕೆಳಗೆ ಬಿದ್ದು ದೂರ ಉರುಳಿಹೋಗಿತ್ತು; ಕುದಿಯುವ

ನೀರು ಆರಿಬಿಂದ ಅನ್ನದೊಡನೆ ಗೌರಿಯ ಬಲಗಾಲ ಮೇಲೆ ಸುರಿದು ಕಾಲೆಲ್ಲ ಬೊಬ್ಬೆಬಂದಿತ್ತು.

ರಾಮಸ್ವಾಮಿ "ಯಾಕೆ ಗೌರಿ ?" ಎಂದು ಅವಳ ಹತ್ತಿರಕ್ಕೆ ಹೋದ.

ಗೌರಿ ಅಳುತ್ತಲೇ "ಕೆಂಡ ಸರಿಮಾಡೋಣ ಅಂತ ತಪ್ಪಲೆ ಇಳಿಸೋದಕ್ಕೆ ಹೋದೆ, ಕೈತಪ್ಪಿ ತಪ್ಪಲೆ ಬಿದ್ಹೋಯ್ತು" ಎಂದು ಬಲಗಾಲನ್ನು ಅದುಮಿಕೊಂಡು ಅತ್ತಳು.

ರಾಮಸ್ವಾಮಿ ಅವಳನ್ನು ಎಬ್ಬಿಸಿಕೂಡಿಸಿದ. "ಎಲ್ಲಿ, ನೋಡೋಣ"? ಎಂದು ಕೈತೆಗಸಿ ಹೆಂಡತಿಯ ಬಲಗಾಲು ನೋಡಿದ. ಬೆಳ್ಳಗಿದ್ದ ಕಾಲು ಕೆಂಪಗಾಗಿಬಿಟ್ಟಿತ್ತು; ಸ್ವಲ್ಪ ಹೊತ್ತಿನಲ್ಲಿಯೇ ಆ ಭಾಗ ತುಂಬ ಊದಿ ಕೊಂಡಿತು.

"ಜೇನು ತುಪ್ಪ ತರ್ತೀನಿ, ತಾಳು" ಎಂದು ಎದ್ದು ಹೋಗಿ ಕೋಣೆಯ ಗೂಡಿನಲ್ಲಿದ್ದ ಸೀಸೆ ತಂದು, ತಾನೇ ಹೆಂಡತಿಯ ಕಾಲಿಗೆ ಜೇನುತುಪ್ಪವನ್ನು ಚೆನ್ನಾಗಿ ಸವರಿದ. ಗೌರಿ ಅಳು ನಿಲ್ಲಿಸಲಿಲ್ಲ.

"ಯಾಕೆ, ಗೌರಿ? ಅಳಬೇಡ ಎಳೇಮಗು ಹಾಗೆ, ಸುಮ್ನಿರು" ಎಂದ.

ಅಳುವುದು ಇನ್ನೂ ಹೆಚ್ಚಾಯಿತು.

ರಾಮಸ್ವಾಮಿಗೆ ಅರ್ಥವಾಗಲಿಲ್ಲ. ಆಮೇಲೆ ತಿಳಿಯಿತು, ತಾನು 'ಎಳೇಮಗು ಹಾಗೆ' ಅನ್ನಬಾರದಾಗಿತ್ತು, ಆ ಮಾತು ಅವಳಿಗೆ ಆ ದಿನದ ನೆನಪುಮಾಡಿಕೊಡುತ್ತದೆ; ಛೆ, ನಾನು ಹಾಗನ್ನಬಾರದಾಗಿತ್ತು, ಅವಳಿಗೆ ಆದರ ನೆನಪೇ ಆಗಬಾರದು, ಎಂದುಕೊಂಡ.

"ಯಾಕೆ ಗೌರಿ, ಇನ್ನೂ ಉರಿಯುತ್ತ?" ಎಂದು ಕೇಳಿದ.

ಗೌರಿ "ಇಲ್ಲ" ಎಂದು, ಬಿಕ್ಕಿಬಿಕ್ಕಿ ಅಳತೊಡಗಿದಳು.

"ಮತ್ತೆ ಯಾಕೆ ನೀನು ಅಳ್ತಾ ಇರೋದು ?"

"ನನ್ನಿಂದ ನಿಮಗೇನು ಪ್ರಯೋಜನ ?"

ಆ ಮಾತು ಕೇಳಿ ರಾಮಸ್ವಾಮಿಗೆ ಆಶ್ಚರ್ಯವಾಯಿತು.

"ಇದೇನು ಗೌರಿ ಹೀಗಂತೀ ?" ಎಂದು ಭುಜ ಮುಟ್ಟಿ ಕೇಳಿದ,

"ಹೊತ್ತಿಗೆ ಸರಿಯಾಗಿ ಒಂದನ್ನ ಮಾಡೋಕೂ ಆಗಲಿಲ್ಲ ನನ್ನ ಕೈಯಲ್ಲಿ !"

"ಕೈಲಾಗದಿದ್ದರೆ ನೀನೇನ್ಮಾಡ್ತೀಯೆ ; ಹೋಗಲಿ ಬಿಡು, ಇವತ್ತು ಹೋಟಲಿಂದ ಒಂದೂಟ ತಂದ್ಬಿಡ್ತೀನಿ, ಆ ಟಿಫಿನ್‌ಕ್ಯಾರಿಯರ್ ತೊಳೆದು ಕೊಡು"

ಎಂದು ಎದ್ದು, ನಾಗಂದಿಗೆಯ ಮೇಲೆ ಇಟ್ಟಿದ್ದ ಟಿಫಿನ್‌ಕ್ಯಾರಿ ಯರನ್ನು ತೆಗೆದು ಕೆಳಗೆ ಇಟ್ಟ.

ಗೌರಿ ಇನ್ನೂ ಅಳುತ್ತಲೇ ಕುಳಿತಿದ್ದಳು.

"ಏಳು ಗೌರಿ, ಆಗಲೆ ಹತ್ತೂಕಾಲಾಯ್ತು, ನಾನು ಹೊರಡ್ಬೇಕು. ಆಫೀಸು ಹತ್ತಿರ ಇದೇಂತ ತಡವಾಗಿ ಹೊರಟರೆ ಆಗೊಲ್ಲ. ಈಗ ದಿನಾ ಲೇಟಾಗ್ತಿದೆ. ಹನ್ನೊಂದೂ ಕಾಲಿಗಾದರೂ ಆಫೀಸಿನಲ್ಲಿರಬೇಕು" ಎಂದ ರಾಮಸ್ವಾಮಿ.

ಆದರೂ ಗೌರಿ ಸುಮ್ಮನೆ ಕುಳಿತಿದ್ದಳು.

"ಹೋಗಲಿ ಬಿಡು, ನಾನೇ ತೊಳೆದುಕೊಂಡು ಹೋಗ್ತೀನಿ"ಎಂದು ಟಿಫಿನ್‌ಕ್ಯಾರಿಯರ್ ತೆಗೆದುಕೊಂಡು ಹೊರಟ.

ಹೋಟಲಿಂದ ಅನ್ನ ತಂದು, ಇಬ್ಬರೂ ತಿಂದು ಮುಗಿಸುವ ಹೊತ್ತಿಗೆ ಹನ್ನೊಂದು ಗಂಟೆ ಹೊಡೆದುಹೋಯಿತು. ರಾಮಸ್ವಾಮಿ ಅವಸರವಸರ ವಾಗಿ ಬಟ್ಟೆ ಹಾಕಿಕೊಂಡು ಆಫೀಸಿಗೆ ಹೊರಟ. ಆದಷ್ಟು ಜಾಗ್ರತೆ ಹೊರಡಬೇಕೆಂದು ಬೇಗಬೇಗ ಹೆಜ್ಜೆ ಹಾಕಿದ.

ದೇಹ ಆಫೀಸಿಗೆ ಹೊರಟಿದ್ದರೂ ಮನಸ್ಸು ಮನೆಯಲ್ಲೇ ಇತ್ತು.

ಪಾಪ, ಗೌರಿ ಈಚೆಗೆ ತುಂಬ ಬಡವಾಗಿದ್ದಾಳೆ. ಅವಳ ಕೈಯಲ್ಲಿ ಏನೂ ಸಾಗುವುದಿಲ್ಲ. ರಾತ್ರಿಯೂ ಹೋಟಲಿನಿಂದ ಊಟ ತರಬೇಕಾ ಗುತ್ತೊ, ಏನೊ! ಏನು ಮಾಡೋದು, ಎಂದುಕೊಂಡ.

ಆಗ ಮೊದಲು ತಾಯಿ ಸೀತಮ್ಮನ ನೆನಪಾಯಿತು. ಆಕೆ ಈಗ ಇದ್ದಿದ್ದರೆ ಎಷ್ಟು ಸಹಾಯವಾಗುತ್ತಿತ್ತು, ಎನ್ನಿಸಿತು. ಅದೃಷ್ಟವಿಲ್ಲ, ಮದುವೆಯಾದ ಕೆಲವು ದಿನಗಳಲ್ಲಿಯೇ ಅವಳನ್ನು ತಾನು ಕಳೆದು ಕೊಂಡ.

ಹೋಗಲಿ, ಗೌರಿಯ ತಾಯಿ ನಂಜಮ್ಮನವರಾದರೂ ಇದ್ದಿದ್ದರೆ ಅವರನ್ನು ಈಗ ಕರಸಬಹುದಾಗಿತ್ತು, ಎನ್ನಿಸಿದಾಗ 'ಛೆ, ಅವರಿದ್ದರೆ ಗೌರಿಯ ಪಾಡು ಹೀಗೇಕಾಗುತ್ತಿತ್ತು! ಅವಳು ಮೂಡಲಹಳ್ಳಿಗೆ ಹೋಗುತ್ತಲೂ ಇರಲಿಲ್ಲ, ಮುತ್ತಿನಂಥ ಮಗುವನ್ನು ಕಳೆದುಕೊಳ್ಳುತ್ತಲೂ ಇರಲಿಲ್ಲ.

ಈಗ ಅವಳಿಗೆ ಯಾರೂ ದಿಕ್ಕಿಲ್ಲ.

ಸಂಬಳ ಕೊಟ್ಟು ಅಡಿಗೆಕೆಲಸಕ್ಕೆ ಒಬ್ಬ ಹೆಂಗಸನ್ನು ನೇಮಿಸಿ ಕೊಳ್ಳುವುದೊಂದೇ ಮಾರ್ಗ, ಎನ್ನಿಸಿತು.

'ಹೌದು, ನಿಜ. ನಾನೇಕೆ ಹಾಗೆ ಮಾಡಬಾರದು?

ಈ ವಿಷಯವಾಗಿ ಗೌರಿಯೊಡನೆ ಮಾತಾಡೋಣ' ಎಂದುಕೊಂಡ.

ಅಷ್ಟು ಹೊತ್ತಿಗೆ, ಅವನು ಕನ್ನಡಸಾಹಿತ್ಯ ಪರಿಷತ್ತಿನ ಕಟ್ಟಡವನ್ನು ದಾಟಿ ಮುಂದೆ ನಡೆದಿದ್ದ; ಸ್ವಲ್ಪ ಹೊತ್ತಿನಲ್ಲಿಯೇ ಆಫೀಸು ಸಿಕ್ಕಿತು.

* * * * *

ಆಫೀಸು ಮುಗಿಸಿಕೊಂಡು ಸಂಜೆ ಐದೂ ಮುಕ್ಕಾಲು ಗಂಟೆಗೆ ಮನೆಗೆ ಬಂದ. ಗೌರಿ ಹುಷಾರಾಗಿದ್ದಳು. ಮಧ್ಯಾಹ್ನ ಸ್ವಲ್ಪ ಹೊತ್ತು ಮಲಗಿ ಎದ್ದು, ಮನೆಗೆಲಸಮಾಡಿಕೊಂಡು ಕಾಫಿ ಒಲೆಹೊತ್ತಿಸಿದ್ದಳು. ರಾಮಸ್ವಾಮಿ ಕೋಟು ಷರಾಯಿ ಅಂಗಿ ಬಿಚ್ಚಿ, ಪಂಚೆ ಸುತ್ತಿಕೊಂಡು ಕೈಕಾಲು ತೊಳೆದುಕೊಳ್ಳಲು ಬಚ್ಚಲು ಮನೆಗೆ ಹೋದ. ಗೌರಿ ಈಗ ಹುಷಾರಾಗಿದಾಳೆ, ಎಂದು ಅವಳ ಕೆಲಸವೇ ಹೇಳುತ್ತಿತ್ತು, ಆದರೆ ನಡೆಯುವಾಗ ಮಾತ್ರ ಕುಂಟುತ್ತಿದ್ದಳು. ಕಾಲು ಇನ್ನೂ ಕೆಂಪಾಗಿಯೇ ಇತ್ತು.

ರಾಮಸ್ವಾಮಿ ಕೈಕಾಲು ತೊಳೆದುಕೊಂಡು ಕೋಣೆಗೆ ಬಂದ. ಗೌರಿ ಬಿಸಿಬಿಸಿ ಕಾಫಿ ತುಂಬಿದ ಲೋಟ ಹಿಡಿದು, ಕುಂಟುತ್ತಾ ಬಂದಳು.

ಅವಳು ಬರುತ್ತಿರುವುದನ್ನು ನೋಡಿದ ಕೂಡಲೆ ರಾಮಸ್ವಾಮಿಗೆ ಸ್ವಲ್ಪ ನಗು ಬಂತು, ನಕ್ಕ. ಆ ನಗು ಗೌರಿಗೆ ಕಾಣಿಸಿತು.

"ಯಾಕೆ?" ಎಂದು ಕೇಳಿದಳು.

ರಾಮಸ್ವಾಮಿ ನಗುವನ್ನು ಮರೆಮಾಚಿ "ಈಗ ಹುಷಾರಾಗಿದೀಯ

ಗೌರಿ ? ಕಾಲು ಹೇಗಿದೆ?" ಎಂದು ಕೇಳುತ್ತ ಕಾಫಿಯ ಬಟ್ಟಲನ್ನು ಕೈಗೆ ತೆಗೆದುಕೊಂಡ. 'ಕಾಲು ಹೇಗಿದೆ' ಎಂದು ಕೇಳುವಾಗಲೂ ಅವನ ತುಟಿ ಸ್ವಲ್ಪ ನಕ್ಕಿತು.

ಗೌರಿ "ಯಾಕೆ ನಕ್ಕಿದ್ದು?" ಎಂದು ಮತ್ತೆ ಕೇಳಿದಳು.

ರಾಮಸ್ವಾಮಿ "ಯಾಕೂ ಇಲ್ಲ ನೀನು ಬರ್‍ತಾ ಇದ್ದದ್ದು ನೋಡಿ ನಗು ಬಂತು" ಎಂದ.

"ಹ್ಞೂ, ನಗು ಬರದೇ ಏನು! ಬೆಕ್ಕಿಗೆ ಚೆಲ್ಲಾಟ ಇಲೀಗೆ ಪ್ರಾಣ ಸಂಕಟ ಎಂದ್ಹಾಗೆ"

"ಇಲ್ಲ, ಇನ್ನು ಮೇಲೆ ಈ ಇಲೀಗೆ ಸಂಕಟ ಇರೊಲ್ಲ!"

"ಅದೇನು ?"

"ಯಾರಾದರೂ ಒಬ್ಬರು ಅಡಿಗೆಯೋರನ್ನ ನೇಮಿಸ್ಕೊಳ್ಳೋಣಾಂತಿದೀನಿ."

"ಅಯ್ಯೋ ಯಾಕೆ, ಸುಮ್ನೆ ಖರ್ಚು, ಬೇಡಾಂದ್ರೆ"

"ಇಲ್ಲ ಒಂದ್ಮೂರ್‍ನಾಲ್ಕು ತಿಂಗಳಾದರೂ ನೀನು ರೆಸ್ಟ್ ತೊಗೋ ಬೇಕು. ಡಾಕ್ಟರ್ ಹೇಳಿದ್ದು ಸರಿ. ನಾಳೆ ಫಸ್ಟಿಂದ ಇಂಜಕ್ಷನ್ನೂ ತೊಗೊಂಡ್ಬಿಡು, ಟಾನಿಕ್ಕೂ ತರ್ತೀನಿ. ಈಗ ಸ್ವಲ್ಪ ಆರೈಕೆ ಮಾಡಿ ಕೊಂಡರೇ ಸರಿ. ಇಲ್ದಿದ್ದರೆ ಮುಂದೆ ತುಂಬ ಕಷ್ಟ ಆಗುತ್ತೆ"

ಹೌದು, ಗೌರಿಗೂ ಹಾಗೆಯೇ ಅನ್ನಿಸಿತು. ಮುಂದೆ ತುಂಬ ಕಷ್ಟವಾಗುತ್ತದೆ. ಈಗಲೇ ಸರಿಯಾದ ಔಷಧ ಮಾಡಬೇಕು, ಎಂದು ಕೊಂಡಿದ್ದಳು. ಹೊಳೆನರಸೀಪುರದಿಂದ ಬಂದ ಮಾರನೆಯ ದಿನದಿಂದ ಔಷಧ ಕುಡಿಯುತ್ತಲೇ ಇದ್ದಳು. ಡಾಕ್ಟರ್ ನರಸಿಂಹಮೂರ್ತಿಗೆ ರಾಮಸ್ವಾಮಿ ಆಗಲೆ ಮೂವತ್ತು ರೂಪಾಯಿ ಸುರಿದಿದ್ದ. ಇನ್ನೂ ಇಂಜೆಕ್ಷನ್ನು ಟಾನಿಕ್ಕು ಬಾಕಿಯಾಗೇ ಇದ್ದುವು. ಔಷಧ ತೆಗೆದುಕೊಂಡರೆ ಆಗಲಿಲ್ಲ; ಸಾಕಷ್ಟು ವಿಶ್ರಾಂತಿ, ಆರೈಕೆ ಔಷಧದಷ್ಟೇ ಅಗತ್ಯ, ಎಂದು ಡಾಕ್ಟರು ಪದೇ ಪದೇ ಹೇಳುತ್ತಿದ್ದರು. ಅದುವರೆಗೆ ಅಷ್ಟು ಔಷಧ ಕುಡಿದಿದ್ದರೂ ತನ್ನ ಆರೋಗ್ಯ ಸ್ವಲ್ಪವೂ ಉತ್ತಮವಾಗಿಲ್ಲವೆಂಬುದು

ಅವಳಿಗೆ ಗೊತ್ತಿತ್ತು; ಆದ್ದರಿಂದ, ನೋಡೋಣ; ಒಂದೆರಡು ತಿಂಗಳು ಖರ್ಚಾದರೂ ಪರವಾಯಿಲ್ಲ, ಆರೋಗ್ಯ ಉತ್ತಮಗೊಂಡರೆ ಸಾಕು, ಎನ್ನಿಸಿತು.

"ಹಾಗಾದರೆ ಸರಿಯಾದೋರು ಯಾರನ್ನಾದರೂ ನೋಡಿ"

"ನೋಡಬೇಕು. ನಾರಾಯಣಮೂರ್ತಿಗೆ ಹೇಳ್ತೀನಿ. ಅವನಿಗೆ ಗೊತ್ತಿರುತ್ತೆ, ನೀನೂ ಪಕ್ಕದ ಮನೆ ಸುಬ್ಬಮ್ಮನೋರನ್ನ ಕೇಳು. ಅವರಿಗೆ ಗೊತ್ತಿರುತ್ತೆ. ಮೆಣಸಿನ ಪುಡಿ ಮಾಡೋದಕ್ಕೆ ಬರ್ತಿದ್ದ ಕಮಲಮ್ಮ ಈವಾಗ ಈ ಊರಲ್ಲಿಲ್ವೆ?"

"ಇಲ್ಲ, ಅವರು ಅವರ ಮಗಳೂರಿಗೆ ಹೊರಟ್ಹೋದರು. ಅವರಿದ್ದಿದ್ದರೆ ಅವರನ್ನ ನೇಮಿಸಿಕೊಳ್ಳಬಹುದಾಗಿತ್ತು; ಹೋಗಲಿ ಸುಬ್ಬಮ್ಮನೋರಿಗೆ, ಎದುರುಮನೆ ರತ್ನಮ್ಮನೋರಿಗೆ ಹೇಳಿನೋಡ್ತೀನಿ. ಅವರು ಯಾರನ್ನಾದರೂ ಗೊತ್ತುಮಾಡಿಕೊಡಬಹುದು"

"ಸಂಬಳ ಮಾತ್ರ ಆಸಾಮೀನ ನೋಡಿ ಮಾತಾಡೋಣ. ಸೂಕ್ಷ್ಮವಾಗಿ ಹೇಳಿರು, ಇಷ್ಟರ ಮೇಲೆ ಕೊಡೋಕಾಗೋಲ್ಲಾಂತ."

"ಎಷ್ಟೂಂತ?"

"ಹತ್ತು ರೂಪಾಯಿ."

"ಸಾಕು ಸಾಕು. ಹತ್ತು ರೂಪಾಯಿಗಿಂತ ಹೆಚ್ಚು ಯಾರು ಕೊಡ್ತಾರೆ! ಊಟ ತಿಂಡಿ ಎಲ್ಲ ಇಲ್ಲೇ ಕಳೆಯುತ್ತೆ."

"ಸರಿ. ವಿಚಾರಿಸಿ ನೋಡು, ಯಾರಾದರೂ ಇದಾರೇನೊ!"

* * * * *

ಮಾರನೆಯ ದಿನವೇ ಭಾನುವಾರ. ಭಾನುವಾರ ಎಂದು ಗೌರಿ ಸ್ವಲ್ಪ ನಿಧಾನವಾಗಿಯೇ ಕಸಮುಸುರೆ ಮಾಡಿಕೊಂಡು ಅಡಿಗೆಗಿಟ್ಟಳು. ಇಬ್ಬರದೂ ಊಟ ಆದಾಗ ಮಧ್ಯಾಹ್ನ ಒಂದು ಗಂಟೆ.

ಗೌರಿ ಅಡಿಗೆಮನೆಯ ಕೆಲಸ ಮಾಡುತ್ತಿದ್ದಳು. ರಾಮಸ್ವಾಮಿ ಕೋಣೆಯಲ್ಲಿ ಹಾಸಿಗೆ ಉರುಳಿಸಿಕೊಂಡು ಮಲಗಲು ಹವಣಿಸುತ್ತಿದ್ದ. ಹೊರಗಡೆ ಸೈಕಲ್ ಬೆಲ್ ಸದ್ದಾಯಿತು.

ರಾಮಸ್ವಾಮಿ ಕೋಣೆಯ ಕಿಟಕಿಯ ಬಾಗಿಲಲ್ಲಿ ತಲೆ ಹಾಕಿ "ಯಾರು?" ಎಂದ.

ಗೇಟಿನ ಹತ್ತಿರ ನಿಂತಿದ್ದ ನಾರಾಯಣಮೂರ್ತಿ "ಇದೀ ಏನಯ್ಯ?" ಎಂದು ಕೇಳಿದ.

ರಾಮುಸ್ವಾಮಿ "ಬಾ ಬಾ" ಎಂದು ಪಡಸಾಲೆಗೆ ಬಂದು ಬೀದಿಯ ಬಾಗಿಲು ತೆರೆದ. ನಾರಾಯಣಮೂರ್ತಿ ಸೈಕಲ್ ತಂದು ವೆರಾಂಡಾದಲ್ಲಿಟ್ಟು, ಪಡಸಾಲೆಯನ್ನು ಪ್ರವೇಶಿಸಿದ.

ರಾಮುಸ್ವಾಮಿ ಪಡಸಾಲೆಯಲ್ಲಿದ್ದ ಕುರ್ಚಿ ತೋರಿಸಿ "ಕೂತುಕೊ, ಇದೇನಿದು ಇವತ್ತು ಇಷ್ಟ್ಹೊತ್ತಿಗೆ ಸವಾರಿ? ಊಟ ಆಯ್ತ?"

"ಆಯ್ತು. ಇಲ್ಲೇ ಇವತ್ತು ಊಟ."

"ಇಲ್ಲೇ ಅಂದರೆ?"

"ಇಲ್ಲೇ ಎರಡನೇ ಬೀದೀಲಿ ನನ್ನ ಹೆಂಡತಿ ಸೋದರಮಾವ ಹೊಸದಾಗಿ ಮನೆ ಕಟ್ಟಿಸಿದಾರೆ. ಇವತ್ತು ಗೃಹಪ್ರವೇಶ. ಆದ್ದರಿಂದ ನಾನು ನನ್ನ ಹೆಂಡತಿ ಇಬ್ಬರೂ ಇಲ್ಲೀಗೇ ಊಟಕ್ಕೆ ಬಂದಿದ್ದೆವು.

"ಹಾಗಾದರೆ ಸೈಕಲ್ ತಂದ್ಬಿಟ್ಟದೀಯೆ?"

"ಇಲ್ಲ. ಅದು ನಂದಲ್ಲ. ನೀನು ಸರಿಯಾಗಿ ನೋಡಲಿಲ್ಲವೆ ಅದನ್ನ? ಅದಕ್ಕೋಸ್ಕರವೇ ನಿನ್ನ ಹತ್ತಿರ ಬಂದದ್ದು."

"ಇಲ್ಲ"

"ಆ ಸೈಕಲ್ ಖರೀದಿಗಿದೆ. ನೀ ಹೇಳದ್ಯಲ್ಲ, ತೋರಿಸೋಣಾಂತ ತೊಗೊಂಡ್ಬಂದೆ."

"ಎಲ್ಲಿ ನೋಡೋಣ?"

ಇಬ್ಬರೂ ವೆರಾಂಡಕ್ಕೆ ಹೋಗಿ ಸೈಕಲ್ ಪರೀಕ್ಷೆ ನಡಸಿ ಪುನಃ ಪಡಸಾಲೆಗೆ ಬಂದರು.

ರಾಮುಸ್ವಾಮಿ "ಎಷ್ಟು ಹೇಳ್ತಾರೆ?" ಎಂದು ಕೇಳಿದ.

"ಎಪ್ಪತ್ತೈದು"

"ನೀನೆಷ್ಟು ಕಟ್ತೀಯೆ?"

"ಎಪ್ಪತ್ತೈದು ಕೊಡಬಹುದು ರಾಮುಸ್ವಾಮಿ. ಬಿ. ಎಸ್. ಎ. ಗಾಡಿ, ಚೆನ್ನಾಗಿದೆ. ತೊಂಬತ್ತು ಹೇಳಿದರೂ ತಡೆಯುತ್ತೆ. ಅವನಿಗೇನೋ ದರದು. ಕೊಟ್ಬಿಡ್ತಾನೆ."

"ಯಾರು ಕೊಡೋರು ?"

"ನನ್ನ ಪಕ್ಕನ ತಮ್ಮ. ಅವನು ಯಾವುದೋ ಪರೀಕ್ಷೆಗೆ ಕೂತ್ಕೊಬೇಕಂತೆ. ಕೈಯಲ್ಲಿ ದುಡ್ಡಿಲ್ಲ. ಮನೇಲಿ ಹ್ಯಾಗಿದ್ದರೂ ಎರಡು ಬೈಸಿಕಲ್ಲಿವೆ. ಒಂದನ್ನ ಮಾರಿಬಿಡೋಣಾಂತ ನಿರ್ಧರಿಸಿದ್ದಾನೆ. ಒಳ್ಳೆ ಛಾನ್ಸು ನೋಡಪ್ಪ"

"ಸರಿ. ಆದರೆ ಎಪ್ಪತ್ತೈದು ರೂಪಾಯಿ ಎಲ್ಲಿಂದಾಪ್ಪ ತರೋದು?"

"ನಾ ಬೇಕಾದರೆ ಕೊಡಿಸಿರ್‍ತೀನಿ. ನನ್ನ ಇಷ್ಟ ಏನೆಂದರೆ ನಿನಗೆ ಸೈಕಲ್ ಆಗಬೇಕು, ಅವನಿಗೆ ದುಡ್ಡು ಒದಗಬೇಕು."

"ಯಾರ್ಹತ್ತರ ಕೊಡಿಸ್ತೀಯೆ ?"

"ನಮ್ಮ ಪಂಡಿತರ ಹತ್ತಿರ"

"ಬೇಡಪ್ಪ, ಪಾಪ, ಅವರಿಗೆ ಯಾಕೆ ಸುಮ್ನೆ ತೊಂದರೆ ಕೊಡ್ಬೇಕು!"

"ತೊಂದರೆ ಏನು, ಕೊಡ್ತಾರೆ. ಎರಡು ಮೂರು ತಿಂಗಳಲ್ಲಿ ತೀರಿಸಿದರಾಯ್ತು."

"ಸರಿ. ಆದರೆ ಅವರ ಹತ್ತಿರ ಹೋಗೋಕೇ ನಾಚ್ಕೇಪ್ಪ ನಂಗೆ"

"ಯಾಕೆ ?"

"ಗೊತ್ತೇ ಇದೆಯಲ್ಲ. ಎಷ್ಟು ದಿನ ಆಯ್ತು ಗೊತ್ತೆ, ಅವರ ಮನೆಗೆ ಹೋಗಿ. ಆರು ತಿಂಗಳ ಮೇಲಾಯ್ತು."

"ಏನೀಗ ಹೋದರೆ ?"

"ಏನು ಅಂದರೆ ಹೋದಕೂಡಲೆ ಅವರು, ನಾನು ಬರೆದುಕೊಟ್ಟಿರೋ ಪುಸ್ತಕ ತೊಗೊಂಡ್ಬಾ. ನೋಡೋಣ ಇನ್ನೊಂದ್ಸಲ, ಅಂತಾರೆ"

"ಯಾಕಂತೆ ?"

"ಯಾಕೇಂದ್ರೆ ನಿಂಗೆ ಗೊತ್ತಿಲ್ಲವೆ? ಆಮೇಲೆ ಹೇಳ್ತೀನಿ. ತಡಿ ಬಂದೆ" ಎಂದು ರಾಮುಸ್ವಾಮಿ ಅಡಿಗೆಮನೆಗೆ ಹೋದ. ಗೌರಿ ಅಲ್ಲಿರಲಿಲ್ಲ. ಬಚ್ಚಲು ಮನೆಯಲ್ಲಿ ತಟ್ಟೆ ತೊಳೆಯುತ್ತಿದ್ದಳು. ಅಲ್ಲಿಗೆ ಹೋಗಿ "ಗೌರಿ, ಒಂದು ಲೋಟ ಕಾಫಿ ಮಾಡ್ತೀಯ ?" ಎಂದ. ಗೌರಿ "ಒಲೆ ಆರಿಸ್ಬಿಟ್ಟೆ. ಹೊತ್ತಿಸ್ಬೇಕು. ತಡೀರಿ ಬಂದೆ, ಮಾಡ್ಕೊಡ್ತೀನಿ" ಎಂದಳು. ನಾರಾಯಣ ಮೂರ್ತಿಗೆ ಈ ಸುಳುವು ಗೊತ್ತಾಯಿತು.

"ಬೇಡ ಕಣಯ್ಯ ರಾಮಸ್ವಾಮಿ. ಕಾಫಿಗೀಫಿ ಏನೂ ಬೇಡ. ಈಗತಾನೆ ಊಟ ಆಗಿದೆ" ಎಂದು ಕೂಗಿ ಹೇಳಿದ. ರಾಮಸ್ವಾಮಿ "ಪರವಾಯಿಲ್ಲ, ಕಾಫೀಗೇನು ಎಷ್ಟು ಸಲ ಆದರೂ ಬಾಧಕವಿಲ್ಲ" ಎನ್ನುತ್ತಾ ಬಂದು ಕುರ್ಚಿಯ ಮೇಲೆ ಕುಳಿತ.

ನಾರಾಯಣಮೂರ್ತಿ "ಕಾಫಿ ಬೇಡ ಕಣಯ್ಯ. ಹೋಗೋಣ ನಡಿ. ನಾನು ಸೈಕಲ್ ವಾಪಸು ಕೊಡಬೇಕು. ಅವನು ಕಾಯ್ತಾ ಇದಾನೆ. ಅವನಿಗೆ ಏನು ಹೇಳೋಣ?" ಎಂದು ಕೇಳಿದ.

"ಏನು ಹೇಳೋದು. ದುಡ್ಡಿಲ್ಲದೆ ಬರೀ ಕೈಲಿ ಮೊಳ ಹಾಕಿದ ಹಾಗಾಗುತ್ತೆ"

"ಯಾಕೆ. ಪಂಡಿತರ ಮನೆಗೆ ಹೋಗೋಣ ನಡಿ. ನಾನು ಹೇಳ್ತೀನಿ. ಕೊಡ್ತಾರೆ. ಬೆಂಗಳೂರಿನಲ್ಲಿದ್ದ ಮೇಲೆ ಕೈಗಾವಲಿಗೆ ಒಂದು ಸೈಕಲ್ಲಿದ್ದೇ ತೀರಬೇಕು. ಗಾಡಿ ಚೆನ್ನಾಗಿದೆ. ಆಮೇಲೆ ಇನ್ಯಾರಾದರೂ ಹೊಡೆದ್ಬಿಟ್ಟಾರಲ್ಲಾಂತ. ಆದ್ದರಿಂದ ನಾನು ಈಗಲೇ ಬಂದಿದ್ದು."

"ಸರಿ. ನಡಿ ನೋಡೋಣ. ಬಂದೆ ತಡಿ" ಎಂದು ಒಳಗೆ ಹೋದ.

ಆದರೆ ಇನ್ನೂ ಕಾಫಿಯ ನೀರು ಮರಳಿರಲಿಲ್ಲ. ಗೌರಿ ಒಲೆಯ ಮುಂದೆ ಕುಳಿತು ಗಾಳಿ ಬೀಸುತ್ತಿದ್ದಳು.

"ಆಯ್ತೆ?" ಎಂದು ಗಂಡ ಕೇಳಿದ.

"ಆಯ್ತು. ಇನ್ನೊಂದ್ನಿಮಿಷ" ಎಂದು ಗೌರಿ ತಕ್ಷಣವೆ ಒಲೆಯ ಮೇಲಿದ್ದ ನೀರು ಇಳಿಸಿ, ಅದಕ್ಕೆ ಮೂರು ಚಮಚ ಕಾಫಿಪುಡಿ ಸುರಿದಳು. ರಾಮಸ್ವಾಮಿ ಬಟ್ಟೆ ಹಾಕಿಕೊಳ್ಳಲು ಕೋಣೆಗೆ ಹೋದ.

ಗೌರಿ ದಡಬಡ ಕಾಫಿ ಶೋಧಿಸಿ ಹಾಲು ಸಕ್ಕರೆ ಬೆರಸಿದಳು.

ರಾಮಸ್ವಾಮಿ "ಹೊತ್ತಾಯ್ತು" ಎಂದು ಅಡಿಗೆಮನೆಗೆ ಬಂದ. ಗೌರಿ ಎರಡು ಲೋಟಕ್ಕೆ ಕಾಫಿ ಹಾಕಿ ಗಂಡನ ಮುಂದಿಟ್ಟಳು.

ಸ್ನೇಹಿತರಿಬ್ಬರೂ ಕುಡಿದರು. ಕಾಫಿ ಸ್ವಲ್ಪವೂ ಚೆನ್ನಾಗಿರಲಿಲ್ಲ.

ಎರಡನೆಯ ಬೀದಿಗೆ ಹೋಗಿ, ಸೈಕಲ್ ಕೊಟ್ಟು ಇಬ್ಬರೂ ಬಸ್ಸಿಗಾಗಿ ಬಸ್ ಸ್ಟಾಪ್ ಕಡೆಗೆ ನಡೆದರು.

ನಾರಾಯಣಮೂರ್ತಿ "ಯಾಕೆ ಪಂಡಿತರ ಹತ್ತಿರ ಹೋಗೋಕೆ ನಾಚಿಕೆ; ಅದೇನೋ ಆಮೇಲೆ ಹೇಳ್ತೀನಿ ಅಂದೆಯಲ್ಲ?" ಎಂದು ಕೇಳಿದ.

"ಅದೇ, ಗೊತ್ತೇ ಇದೆಯಲ್ಲ."

"ಇಲ್ಲಪ್ಪ ನಂಗೊತ್ತಿಲ್ಲ"

"ಏ, ಅವರು ಬರೆದುಕೊಟ್ಟ ಭವಿಷ್ಯಾನ ನಾನು ಹರಿದು ಹಾಕಿದ್ದು ನಿನಗೆ ಗೊತ್ತಿಲ್ಲವೆ?"

"ಹೌದು, ಗೊತ್ತಿದೆ"

"ಅದು ಅವರಿಗೆ ಗೊತ್ತಿಲ್ಲವಲ್ಲ! ನಾ ಹೋದಾಗಲೆಲ್ಲ ಎಲ್ಲೋ ಲೆಕ್ಕ ತಪ್ಪಾಗಿರಬೇಕು. ಇನ್ನೊಂದ್ಸಲ ನೋಡೋಣ ತೊಗೊಂಡ್ಬಾ ಅಂತಾರೆ."

"ಯಾಕೆ?"

"ನಾನು ಒಂದಿನ ಹೋಗಿದ್ದಾಗ ನಿಮ್ಮ ಭವಿಷ್ಯ ಸುಳ್ಳಾಯ್ತು ಅಂದೆ"

"ಹೇಗೆ?"

"ನನಗೆ ಮಕ್ಕಳೇ ಆಗೊಲ್ಲ ಅಂತ ಬರೆದ್ಬಿಟ್ಟಿದ್ದರಲ್ಲಪ್ಪ ಅದರಲ್ಲಿ! ನನ್ನ ಹೆಂಡತೀನ ಊರಿಗೆ ಕಳಿಸೋಕೆ ಮುಂಚೆ ನಾನು ಅವರ ಮನೆಗೆ ಹೋಗಿದ್ದೆ. ಆಗ ಮಾತಿಗೆ ಮಾತು ಬಂದು, ನಿಮ್ಮ ಭವಿಷ್ಯ ಸುಳ್ಳಾಯ್ತು ಅಂದೆ. ಅದಕ್ಕೆ ಅವರು ಇಲ್ಲ, ಸುಳ್ಳಾಗೋಕೆ ಅವಕಾಶ ಇಲ್ಲ. ಎಲ್ಲೋ ಕಾಪಿ ಮಾಡೋವಾಗ, ನಮ್ಮ ಸೂರಿ ತಪ್ಪು ಮಾಡಿರ್ಬೇಕು. ಇಲ್ದಿದ್ದರೆ ಲೆಕ್ಕಾಚಾರ ಮಾಡೋವಾಗ ಎಲ್ಲೋ ತಪ್ಪಾಗಿರಬಹುದು. ಪಂಚಾಂಗ ಹೋದರೆ ನಕ್ಷತ್ರ ಹೋಗುತ್ಯೆ! ನೀನು ಅದನ್ನ ತೊಗೊಂಡ್ಬಾ, ನಾ ನೋಡ್ತೀನಿ ಇನ್ನೊಂದ್ಸಲ, ಅಂದರು. ನನ್ನ ಹತ್ತಿರ ಎಲ್ಲಿ ಬರ್ಬೇಕು ಅದು! ಇವತ್ತು ನಾಳೆ ಅಂತ ತಳ್ತಾ ಬಂದೆ. ಈಗ ಆರೇಳು ತಿಂಗಳಿಂದ ಆ ಕಡೆ ಹೋಗೇ ಇಲ್ಲ."

"ಪರವಾಯಿಲ್ಲ, ನಡಿ, ನಾನಿದೀನಿ" ಎಂದು ನಾರಾಯಣಮೂರ್ತಿ ರಾಮಸ್ವಾಮಿಯ ಬೆನ್ನು ಚಪ್ಪರಿಸಿದ.

"ಅದೇಕೆ, ಪಂಡಿತರಲ್ಲದೆ ಬೇರೆ ಯಾರ ಹತ್ತಿರವೂ ಸಿಕ್ಕೋದಿಲ್ಲವೆ?"

"ಸಿಕ್ಕುತ್ತೆ. ಆದರೆ ಇವರ ಹತ್ತಿರ ಸುಲಭವಾಗಿ ಸಿಕ್ಕುತ್ತೆ. ಇದಕ್ಕೇಂದರೆ ಇನ್ನೂ ಸುಲಭ ಅವರ ಹತ್ತಿರ ವಸೂಲು ಮಾಡೋದು."

"ಅದ್ಯಾಹ್ಗೆ ?"

"ನಮ್ಮ ನಾರಾಯಣಸ್ವಾಮಿ ಗೊತ್ತ ?"

"ಗೊತ್ತು"

"ಅವನು ಪಂಡಿತರಿಗೇನಾಗಬೇಕು ಗೊತ್ತೆ ?"

"ಇಲ್ಲ."

"ಅವರಕ್ಕನ ಮಗ ಅವನು."

"ಓ, ಸರಿ. ಆದರೆ ?"

"ಅವನು ಪಂಡಿತರಿಗೆ ನಲವತ್ತು ರೂಪಾಯಿ ಕೊಡಬೇಕು. ತೊಗೊಂಡು ಈಗಾಗಲೆ ಮೂರು ವರುಷ ಆಗ್ಹೋಯ್ತು. ಪಂಡಿತರು ಕೊಡು ಕೊಡೂಂತ ಪೀಡಿಸ್ತಾ ಇದಾರೆ. ಮೊನ್ನೆ ಹೇಳಿದ್ನಂತೆ: 'ಎರಡು ಸೈಕಲ್ ಪೈಕಿ ಒಂದು ಸೈಕಲ್ ಮಾರ್ಬೇಕೂಂತಿದೀನಿ. ದುಡ್ಡು ಬರುತ್ತೆ ಕೊಡ್ತೀನಿ' ಅಂತ. ಹಿಂದೊಂದ್ಸಲ ಹಾಗೇ ಹೇಳಿದ್ನಂತೆ. ಆದರೆ ಆಗ ಸೈಕಲ್ ಮಾರಲೇ ಇಲ್ಲ. ಮನೇಲಿ ದೊಡ್ಡ ಗಡಿಯಾರ ಇತ್ತು, ಅದನ್ನ ಯಾರಿಗೋ ಮೂವತ್ತು ರೂಪಾಯಿಗ ಕೊಟ್ಟನಂತೆ. ದುಡ್ಡು ಬಂತು. ಅಷ್ಟನ್ನಾದರೂ ಕೊಡಬೇಡವೆ? ಕೊಡಲಿಲ್ಲ. ಆ ದುಡ್ಡಿಗೆ ಒಂದು ಉಲ್ಲನ್ ಕೋಟು ಹೊಲಿಸಿಕೊಂಡಿದಾನೆ. ಈಗ ಸೈಕಲ್ ಮಾರೋ ವಿಷಯ ಪಂಡಿತರಿಗೆ ಗೊತ್ತಾಗಿದೆ. ಅದನ್ನೂ ಇನ್ಯಾರಿಗಾದರೂ ಮಾರಿ ಹಿಂದೆ ಮಾಡಿದ ಹಾಗೇನೇ ದುಡ್ಡು ತೊಗೊಂಡು ಖರ್ಚು ಮಾಡ್ಕೊಂಡು ಬಿಡಬಹುದೂಂತಲೂ ಗೊತ್ತಾಗಿದೆ. ಅವರ ಕಣ್ಣೆದುರಿಗೇ ಸೈಕಲ್ ಮಾರಾಟ ಆದರೆ ಆ ನಲವತ್ತು ರೂಪಾಯಿ ತಮಗೆ ಬರೋದು ಗ್ಯಾರಂಟಿ. ಆದ್ದರಿಂದ ನೀನೇನಾದರೂ ಆ ಸೈಕಲ್ ತೊಗೋಬೇಕೂಂತಿದೀಯೆ ಅನ್ನೋದು ತಿಳಿದರೆ, ನಿನಗೆ ಸಾಲ ಕೊಡೋಕೆ ಅವರೇನು ಕಷ್ಟ ಪಡಬೇಕು ಹೇಳು. ಸಂತೋಷದಿಂದ ಒಪ್ಕೊಳ್ತಾರೆ. ನಾರಾಯಣಸ್ವಾಮಿ ಪರೀಕ್ಷೆಗೆ ಬೇಕಾಗಿರೋದು ಇಪ್ಪತ್ತೈದೊ ಮೂವತ್ತೊ ಅಂತೆ. ಅಷ್ಟನ್ನ

ಬೇಕಾದರೆ ನಾನೇ ಅವನಿಗೆ ಕೊಟ್ಟಿಡಬಹುದು. ಪಂಡಿತರಿಗೆ ಕೊಡ ಬೇಕಾದ ನಲವತ್ತು ರೂಪಾಯೀನ ಆಮೇಲೆ ಎರಡು ಮೂರು ಕಂತಿನಲ್ಲಿ ತೀರಿಸಿಕೊಂಡರಾಯ್ತು. ಆದಾಗೊಲ್ಲವೆ?"

"ನನ್ನ ಹತ್ತಿರ ಎಲ್ಲಿ ದುಡ್ಡಿದೆ ನಾರಾಯಣಮೂರ್ತಿ?"

"ಇಪ್ಪತ್ತೈದೂ ಇಲ್ಲವೆ ?"

"ಇಲ್ಲ. ಇದ್ದಿದ್ದರೆ ನನ್ನ ಹೆಂಡತೀಗೆ ಈ ತಿಂಗಳೇ ಇಂಜೆಕ್ಷನ್ ಕೊಡಿಸ್ತಿದ್ದೆ. ಅವಳು ದಿನದಿನಕ್ಕೂ ತುಂಬ ಸುಸ್ತಾಗ್ತಾ ಇದಾಳೆ."

"ಸರಿ. ಹಾಗಾದರೆ ಎಪ್ಪತ್ತೈದನ್ನೂ ಅವರ ಹತ್ತಿರಾನೇ ತೊಗೊಳ್ಳೋದೂಂತೀಯ ?"

"ಹೌದು, ಮತ್ತೆ"

"ಸರಿ."

ಬಸ್ ಸ್ಟಾಪ್ ಸಿಕ್ಕಿತು. ಇಬ್ಬರೂ ಅಲ್ಲಿ ನಿಂತುಕೊಂಡರು. ಬಸ್ಸು ಬರಲು ಇನ್ನೂ ಸುಮಾರು ಹತ್ತು ನಿಮಿಷಗಳಿದ್ದುವು.

ನಾರಾಯಣಮೂರ್ತಿ "ಹಾಗಾದರೆ, ನಿನ್ನ ಹೆಂಡತೀಗೆ ಇನ್ನೂ ಔಷಧ ಕೊಡಿಸ್ತಿದೀಯೆ ?"

"ಹೌದು. ಫಸ್ಟ್ ವರೆಗೂ ತೊಗೊಳ್ಳಲಿ. ಆಮೇಲೆ ಟಾನಿಕ್ ಕೊಡಿ, ಅಂದಿದಾರೆ ಡಾಕ್ಟರು"

"ಏನೂಂತ ?"

"ಸುಸ್ತು. ಕೆಲಸ ಮಾಡೋಕಾಗೊಲ್ಲ. ನಿನ್ನೆ ಏನಾಯ್ತು ಗೊತ್ತೆ, ಹತ್ತು ಗಂಟೆ ಆದರೂ ಒಂದು ಅನ್ನ ಮಾಡೋಕಾಗಿರಲಿಲ್ಲ, ಆಮೇಲೆ ದಡಬಡ ಏನೋ ಮಾಡೋದಕ್ಕೆ ಹೋದಳು. ಅನ್ನದ ತಪ್ಪಲೇನ ಕಾಲ ಮೇಲೆ ಕೆಡವಿಕೊಂಡುಬಿಟ್ಟಳು. ಮರಳಿರೋ ನೀರು ಅರ್ಧ ಬೆಂದಿದ್ದ ಅಕ್ಕಿ ಎಲ್ಲ ಕಾಲು ಮೇಲೆ ಬಿದ್ದು ಬೊಬ್ಬೆ ಬಂದ್ಹೋಯ್ತು"

"ಅಯ್ಯೋ, ಯಾವ ಕಾಲು ?"

"ಬಲಗಾಲು. ಆವಾಗ ನಾನು ಓಡ್ಹೋಗಿ, ಜೇನುತುಪ್ಪ ತಂದು ಕಾಲಿಗೆ ಸವರಿದೆ. ಸರಿ, ಒಂದು ಟಿಫಿನ್ ಕ್ಯಾರಿಯರ್ ತೊಗೊಂಡು

ಹೋಗಿ ಅಯ್ಯರ್ ಹೋಟಲಿಂದ ಒಂದೂಟ ತಂದು, ಅವಳಿಗೂ ಬಡಿಸಿ ನಾನೂ ಊಟ ಮಾಡಿ ಆಫೀಸಿಗೆ ಹೊರಟೆ. ಸಾಯಂಕಾಲದ್ಹೊತ್ತಿಗೆ ಸ್ವಲ್ಪ ಹುಷಾರಾಗಿದ್ದಳು; ರಾತ್ರಿ ಒಂದನ್ನ ಸಾರು ಮಾಡಿದಳೂಂತಿಟ್ಟುಕೊ. ಈಗ ಅವಳ ಕೈಯಲ್ಲಿ ಕೆಲಸ ಸಾಗೊಲ್ಲ ಅದಕ್ಕೇ ನಿನ್ನೆ ರಾತ್ರಿ ಒಂದು ಯೋಚನೆ ಮಾಡಿದೆ, ಯಾರಾದರೂ ಸರಿಯಾದ ಒಬ್ಬ ಹೆಂಗಸನ್ನ ಅಡಿಗೆಗೆ ಗೊತ್ತುಮಾಡ್ಕೊಳ್ಳೋಣಾಂತ. ಇವತ್ತು ನಿಂಗೆ ಹೇಳೋಣಾಂತಿದ್ದೆ. ನೋಡು, ನಿನ್ನ ದೃಷ್ಟೀಲಿ ಯಾರಾದರೂ ಇದ್ದರೆ ಹೇಳು"

"ನೋಡೋಣ ಅದಕ್ಕೇನು? ಸಂಬಳ ಎಷ್ಟು ಕೊಡಬೇಕೂಂತಿದೀಯೆ?"

"ಹತ್ತೊ ಹನ್ನೆರಡೊ, ಸಾಲದೆ?"

"ಸಾಕು ಸಾಕು"

"ಸಾಲದೆ ಏನು, ಊಟ ತಿಂಡಿ ಎಲ್ಲ ಕಳೆದು ಹತ್ತುರೂಪಾಯಿ ಬಂದರೆ ಸಾಲದೆ?"

"ನೋಡೋಣ"

ಅಷ್ಟು ಹೊತ್ತಿಗೆ ಬಸ್ಸು ಬಂತು. ಇಬ್ಬರೂ ಹತ್ತಿ ಕುಳಿತುಕೊಂಡರು. ಮಾರ್ಕೆಟ್ ತಲಪಿದ ಮೇಲೆ ಇಳಿದರು. ಮಲ್ಲೇಶ್ವರಕ್ಕೆ ಹೊರಡುವ ಬಸ್ಸು ಇನ್ನೂ ಬಂದಿರಲಿಲ್ಲ.

ರಾಮಸ್ವಾಮಿ "ನೀನು ಶ್ರೀರಾಂಪುರಕ್ಕೆ ಹೋಗೋದು ಯಾವಾಗ?" ಎಂದು ಕೇಳಿದ.

"ರಾತ್ರಿ."

"ಹಾಗಾದರೆ ಮತ್ತೆ ನನ್ನ ಜೊತೆ ಚಾಮರಾಜಪೇಟೆಗೆ ವಾಪಸು ಬರ್ತೀಯ?"

"ಇಲ್ಲ, ನಾನು ಹಾಗೇ ನಮ್ಮನೇಗೆ ಹೋಗ್ತೀನಿ"

"ನಿನ್ನ ಹೆಂಡತಿ ಇಲ್ಲೇ ಇದ್ದಾರೇನೊ?"

"ಇದ್ದಾಳೆ, ಅವಳು ಇನ್ನೂ ಎರಡು ದಿನ ಇರ್ತಾಳೆ; ಬುಧವಾರ ಕರಕೊಂಡು ಹೋಗ್ತೀನಿ" ಒಂದೆರಡು ದಿನ ಇದ್ದು ಹೋಗು ಅಂತ ಅವಳ ಸೋದರತ್ತೆ ಬಲವಂತಮಾಡಿದಾರೆ. ಇರಲಿ"

"ಸರಿ, ರಾತ್ರಿ ಊಟ?"

"ಮನೇಲೆ ಮಾಡ್ತೀನಿ, ನಾವಿಬ್ಬರೇ ತಾನೆ ಅವರ ಮನೆಗೆ ಹೋಗಿದ್ದದ್ದು, ಉಳಿದೋರೆಲ್ಲ ಮನೇಲೇ ಇದಾರೆ."

"ಸರಿ."

ಅಷ್ಟು ಹೊತ್ತಿಗೆ ಮಲ್ಲೇಶ್ವರದ ಬಸ್ಸು ಬಂತು, ಅದರಲ್ಲಿ ಇಬ್ಬರೂ ಕುಳಿತುಕೊಂಡರು.

ಬಸ್ಸು ಮಲ್ಲೇಶ್ವರ ತಲಪಿದಾಗ ನಾಲ್ಕು ಗಂಟೆ.

ಪಂಡಿತರು ಮನೆಯಲ್ಲಿದ್ದರು. ರಾಮಸ್ವಾಮಿಯನ್ನು ನೋಡಿದ ಕೂಡಲೆ ಅವರು "ಇದೇನು ಇಷ್ಟು ಅಪರೂಪ, ರಾಮಸ್ವಾಮಿ" ಎಂದು ಕೋಣೆಯ ಕಡೆಗೆ ಹೊರಟರು. ಇಬ್ಬರೂ ಕೋಣೆಗೆ ಹೋಗಿ ಅಲ್ಲಿ ಹಾಕಿದ್ದ ಚಾಪೆಯ ಮೇಲೆ ಕುಳಿತುಕೊಂಡರು.

ಪಂಡಿತರು ಮತ್ತೆ "ಇದೇನು ಅಪರೂಪ?" ಎಂದು ರಾಮಸ್ವಾಮಿಯ ಮುಖ ನೋಡಿ ತಮ್ಮ ಸ್ಥಾನದಲ್ಲಿ ಕುಳಿತುಕೊಂಡರು.

ರಾಮಸ್ವಾಮಿ "ನಾರಾಯಣಮೂರ್ತಿ ಜೊತೆ ಬಂದೆ?" ಎಂದು ಸುಮ್ಮನಾದ. ನಾರಾಯಣಮೂರ್ತಿ ಎಲ್ಲ ಹೇಳಿದ; ಅವನು ಊಹಿಸಿದ್ದಂತೆಯೇ ಪಂಡಿತರು ರಾಮಸ್ವಾಮಿಗೆ ಎಪ್ಪತ್ತೈದು ರೂಪಾಯಿ ಸಾಲ ಕೊಡಲು ಸಂತೋಷದಿಂದ ಒಪ್ಪಿದರು. ನಾರಾಯಣಸ್ವಾಮಿಯಿಂದ ನಲವತ್ತು ರೂಪಾಯಿ ವಸೂಲು ಮಾಡುವುದಕ್ಕಿಂತ ರಾಮಸ್ವಾಮಿಯಿಂದ ಎಪ್ಪತ್ತೈದು ರೂಪಾಯಿ ವಸೂಲು ಮಾಡುವುದು ಅವರಿಗೆ ಸುಲಭವಾಗಿತ್ತು.

"ಹಾಗಾದರೆ ಯಾವತ್ತು ಬೇಕು ದುಡ್ಡು?" ಎಂದು ಕೇಳಿದರು.

"ಯಾವತ್ತೂಂದರೆ? ನಾರಾಯಣಸ್ವಾಮಿಗೆ ನಾಡಿದ್ದೇ ಬೇಕಂತಲ್ಲ ದುಡ್ಡು?" ಎಂದು ನಾರಾಯಣಮೂರ್ತಿ ಹೇಳಿದ.

"ಯಾಕಂತೆ?"

"ಯಾವುದೋ ಪರೀಕ್ಷೆಗೆ ಕಟ್ತಾನಂತೆ"

"ಯಾವ ಪರೀಕ್ಷೇನಪ್ಪ!?"

"ನನಗೆ ಸರಿಯಾಗಿ ಗೊತ್ತಿಲ್ಲ, ಕೇಳಿದೆ. ಯಾಕೊ ಹೇಳಲಿಲ್ಲ."

"ಅವನು ಪರೀಕ್ಷೆಗೆ ಕಟ್ಟೋದು ಗೊತ್ತೇ ಇದೆ. ಎಲ್ಲ ಸುಳ್ಳು, ಏನೋ ಖರ್ಚಿಗೆ ಬೇಕಾಗಿದೇಂತ ಕಾಣುತ್ತೆ. ಗೊತ್ತಾದರೆ ಮನೇಲಿ ಬಯ್ತಾರೇಂತ ಹಾಗೆ ಹೇಳ್ತಿದಾನೆ, ಅಷ್ಟೆ"

"ಅದೇನೊ ಗೊತ್ತಿಲ್ಲ"

"ಹೋಗಲಿ ಬಿಡು, ನನ್ನ ನಲವತ್ತು ರೂಪಾಯಿ ನನಗೆ ಬಂದರೆ ಸಾಕು, ಅವನ ಹತ್ತಿರ ಹೆಣಗಾಡಿ ಸಾಕಾಗ್ಹೋಯ್ತು, ಹಾಗಾದರೆ ನಾಡಿದ್ದು ಸಾಯಂಕಾಲ ಅವನನ್ನ ಕರಕೊಂಡು ಬಾ, ರಾಮುಸ್ವಾಮೀನೂ ಎದುರಿಗಿರಲಿ, ಅವನಿಗೆ ಮೂವತ್ತೈದು ರೂಪಾಯಿ ಕೊಟ್ಬಿಡ್ತೀನಿ, ನನ್ನ ಲೆಕ್ಕಕ್ಕೆ ನಲವತ್ತು ರೂಪಾಯಿ ವಜಾ ಹಾಕ್ಕೊಂಡ್ಬಿಡ್ತೀನಿ"

"ಸರಿ, ಹಾಗೇ ಮಾಡಿ" ಎಂದು ನಾರಾಯಣಮೂರ್ತಿ, ರಾಮುಸ್ವಾಮಿ ಇಬ್ಬರೂ ಹೇಳಿದರು.

ಆಮೇಲೆ ಪಂಡಿತರು "ಇನ್ನೇನು ರಾಮುಸ್ವಾಮಿ, ವಿಶೇಷ ?" ಎಂದು ರಾಮುಸ್ವಾಮಿಯ ಕಡೆ ತಿರುಗಿ ಕೇಳಿದರು.

ರಾಮುಸ್ವಾಮಿ "ಏನೂ ಇಲ್ಲ" ಎಂದ.

"ನೀನು ಕೊನೆಗೂ ಆ ಪುಸ್ತಕಾನ್ನ ತಂದುಕೊಡಲೇ ಇಲ್ಲ?"

ರಾಮುಸ್ವಾಮಿ ತಲೆತಗ್ಗಿಸಿದ.

"ಯಾಕೆ, ಅದನ್ನ ಕಳೆದುಗಿಳದ್ಬಿಟ್ಯೊ ?"

"ಇಲ್ಲ, ಎಲ್ಲೋ ಇಟ್ಟುಬಿಟ್ಟಿದೀನಿ, ಇನ್ನೂ ಸಿಕ್ಕಿಲ್ಲ"

"ಹೋಗಲಿಬಿಡು, ಅದರ ಮೂಲ ಸಿಕ್ಕಿಬಿಡ್ತು; ಸೂರಿಗೆ ಕಾಫಿ ಮಾಡೋಕೆ ಕೊಟ್ಟಿದ್ನಲ್ಲ, ಅದು ಅವತ್ತೇ ಸಿಕ್ಕಿತು. ನಿನಗೆ ಹೇಳಿಕಳಿಸೋಣಾಂತಿದ್ದೆ; ಈ ನಾರಾಯಣಮೂರ್ತೀನೂ ಬರ್ಲಿಲ್ಲ, ಯಾರೂ ಬರ್ಲಿಲ್ಲ, ಸುಮ್ಮನಿದ್ದೆ. ನೀನು ಬಂದಿದ್ದು ಒಳ್ಳೇದಾಯ್ತು"

"ಯಾಕೆ ?"

"ನಾನು ಆವಾಗ ಬರೆದ್ನಲ್ಲ ಅದರಲ್ಲಿ ಸ್ವಲ್ಪ ತಪ್ಪಾಗಿದೆ"

ತಕ್ಷಣವೆ ರಾಮುಸ್ವಾಮಿ ನೆಟ್ಟಗೆ ಕುಳಿತ; ಮುಖದ ಮೇಲೆ ಕುತೂಹಲ ಮೂಡಿತು.

"ಏನು ?" ಎಂದು ಕೇಳಿದ.

ಪಂಡಿತರು "ನೀನು ಅವತ್ತು ಹೇಳಿದ್ಯಲ್ಲ—ನನಗೆ ಅದೇ ಯೋಚನೆ ಆಗಿತ್ತು, ಒರಿಜಿನಲ್ ಸಿಕ್ಕಿದ ಮೇಲೆ ಕೂತ್ಕೊಂಡು ಮತ್ತೆ ಲೆಕ್ಕಾಚಾರ ಹಾಕಿದೆ. ಆಗ ಗೊತ್ತಾಯ್ತು, ಅದರಲ್ಲಿ ಮುಖ್ಯವಾದ ಪಾಯಿಂಟೇ ತಪ್ಪಾಗಿದೆ" ಎಂದು ಹೇಳಿದರು.

"ಏನದು ?"

"ಮುಂದಿನ ಭಾನುವಾರ ಬಾ, ಎಲ್ಲ ಸರಿಯಾಗಿ ಬರೆದ್ಕೊಡ್ತೀನಿ."

"ಯಾಕೆ ಇವತ್ತು ಆಗೊಲ್ಲವೆ ?"

"ಇವತ್ತು ಆಗೊಲ್ಲ"

"ನನಗೆ ಬರೆದ್ಕೊಡಬೇಡಿ, ಹೇಳಿಬಿಡಿ ಸಾಕು"

"ಹಾಗೊ, ಹಾಗಾದರೆ ಹೇಳ್ತೀನಿ, ಆದರೆ ಇನ್ನೂ ವಿವರವಾಗಿ ಹೇಳಬೇಕಾದರೆ ನಿಧಾನವಾಗಿ ನೋಡಿ, ಇನ್ನೊಂದ್ಸಲ ಲೆಕ್ಕ ಹಾಕಬೇಕಾಗುತ್ತೇಂತ"

"ಪರವಾಯಿಲ್ಲ ಸೂಕ್ಷ್ಮವಾಗೇ ಹೇಳಿ"

"ಏನಿಲ್ಲ, ಮಕ್ಕಳಾಗೊಲ್ಲಾಂತ ಹೇಳಿದ್ನಲ್ಲ—ಅದು ಸುಳ್ಳು. ಮಕ್ಕಳಾಗುತ್ತೆ, ಆದರೆ ಕೈಹತ್ತೊಲ್ಲ.''

"ಸರಿ, ನನಗೆ ಅದರ ಯೋಚನೆಯೇ ಇಲ್ಲ"

"ಯಾಕೆ, ಅಷ್ಟು ಬೇಜಾರಾಗಿದೆಯೇನು ?"

"ಇಲ್ಲ, ಸುಮ್ಮನೆ ಅದನ್ನ ತಲೇಲಿ ಹಾಕ್ಕೊಂಡು ಯಾಕೆ ಒದ್ದಾಡಬೇಕೂಂತ"

"ಸರಿಯಪ್ಪ, ಎಲ್ಲಿ ಕೈ ಕೊಡು ಸ್ವಲ್ಪ ನೋಡೋಣ ?"

"ಬೇಡ ಪಂಡಿತರೆ"

"ಇರಲಿ, ಕೊಡಪ್ಪ, ನೋಡೋಣ ?"

ನಾರಾಯಣಮೂರ್ತಿ "ರಾಮುಸ್ವಾಮಿ, ವರ್ಗವರ್ಗಾಂತ ಹೇಳ್ತಿರ್ತೀಯಲ್ಲ, ಅದೂ ಗೊತ್ತಾಗುತ್ತೆ ತೋರಿಸು ನೋಡೋಣ" ಎಂದು ಸ್ನೇಹಿತನ ಕೈ ಹಿಡಿದೆಳೆದ.

ಮೂರು ತಿಂಗಳಿಂದ ವರ್ಗದ ಸುದ್ದಿ ಗಾಳಿಯ ವರ್ತಮಾನವಾಗಿ ಉಳಿದಿತ್ತು; ಅದರ ಬಗ್ಗೆ ಪಂಡಿತರ ಭವಿಷ್ಯವನ್ನು ಕೇಳಬೇಕೆಂದು ರಾಮಸ್ವಾಮಿಗೂ ಆಸೆಯಾಯಿತು. ಅವರ ಮುಂದೆ ಅಂಗೈ ನೀಡಿದ.

ಪಂಡಿತರು ರಾಮಸ್ವಾಮಿಯ ಬಲ ಅಂಗೈ ತೆಗೆದುಕೊಂಡು ಚೆನ್ನಾಗಿ ಪರೀಕ್ಷಿಸಿದರು.

''ನಿಜ, ರಾಮಸ್ವಾಮಿ. ನಿನಗೆ ವರ್ಗ ಆಗುತ್ತೆ, ಆದರೆ ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ ಇನ್ನೂ ನಾಲ್ಕು ತಿಂಗಳ ವರೆಗೂ ನಿನ್ನನ್ನ ಅಲ್ಲಾಡಿಸೋಹಾಗಿಲ್ಲ. ಶ್ರಾವಣ ಕಳೆದ ಮೇಲೆ ವರ್ಗ ಆಗೋದು ಖಂಡಿತ" ಎಂದು ಅವನ ಕೈ ಬಿಟ್ಟರು.

"ಆಗಲಿ, ಏನು ಮಾಡೋದಕ್ಕಾಗುತ್ತೆ. ಇನ್ನೆಷ್ಟು ದಿನ ಇಟ್ಟಿರ್‍ತಾರೆ ಒಂದೇ ಕಡೆ," ಎಂದು ರಾಮಸ್ವಾಮಿ ತನ್ನ ಬಲಗೈಯನ್ನು ಹಿಂದಕ್ಕೆ ತೆಗೆದುಕೊಂಡ.

ನಾರಾಯಣಮೂರ್ತಿ ಎದ್ದು ನಿಂತು "ಹಾಗಾದರೆ ನಾವು ನಾಡಿದ್ದು ಬರೋಣವೆ ಮಾವ?" ಎಂದು ಕೇಳಿದ. ರಾಮಸ್ವಾಮಿಯೂ ಎದ್ದು ನಿಂತುಕೊಂಡ.

ಪಂಡಿತರು "ಆಗಲಿ, ನಾರಾಯಣಸ್ವಾಮೀನ ಕರಕೊಂಡು ಬನ್ನಿ, —ಬೈಸ್ಕಲ್ಲು ಚೆನ್ನಾಗಿದೆಯೊ?" ಎಂದು ಕೇಳಿದರು.

ನಾರಾಯಣಮೂರ್ತಿ "ಚೆನ್ನಾಗಿದೆ" ಎಂದ.

ಪಂಡಿತರು "ಸರಿ ಮತ್ತೆ, ನಾಡಿದ್ದು ಬನ್ನಿ," ಎಂದು ಮೇಲೆದ್ದರು.

ನಾರಾಯಣಮೂರ್ತಿ ರಾಮಸ್ವಾಮಿ ಇಬ್ಬರೂ ಪಂಡಿತರಿಗೆ ನಮಸ್ಕಾರ ಮಾಡಿ ಹೊರಗೆ ಹೊರಟರು.

ನಾರಾಯಣಮೂರ್ತಿ ಶ್ರೀರಾಮಪುರದ ಕಡೆಗೆ ತಿರುಗಿದಾಗ, ರಾಮಸ್ವಾಮಿ ಮತ್ತೊಮ್ಮೆ ಜ್ಞಾಪಿಸಿದ; "ನಾ ಹೇಳಿದ್ದು ಸ್ವಲ್ಪ ನಿಗ ಇರಲಿ. ಯಾರಾದರೂ ಒಬ್ಬ ಸರಿಯಾದ ಹೆಂಗಸು ಇದ್ದರೆ ನೋಡು" ಎಂದ.

ನಾರಾಯಣಮೂರ್ತಿ "ಆಗಲಿ. ನೋಡ್ತೀನಿ. ನಾಡಿದ್ದು ಸಂಜೆ ಸೇರ್‍ತೀವಲ್ಲ!'' ಎಂದು ಆ ಕಡೆ ಹೊರಟ.

ಆ ನಾಡಿದ್ದು ಬಂತು. ಅಂದು ಸಂಜೆಯೇ ರಾಮಸ್ವಾಮಿಯ ಮನೆಗೆ ಸೈಕಲ್ಲೂ ಬಂತು.

ಗೌರಿ ನಗುತ್ತಾ "ನನ್ನ ಇಂಜೆಕ್ಷನ್ನಿಗೆ ಮಾತ್ರ ದುಡ್ಡಿಲ್ಲ, ಸೈಕಲ್ಲಿಗೆ ಇತ್ತು ಅಲ್ಲವೆ?" ಎಂದು ಕೇಳಿದಳು.

ಗಂಡ "ಸಾಲ" ಎಂದ.

"ಇಂಜೆಕ್ಷನ್ನಿಗೆ ಸಾಲ ಮಾಡಬಾರದೊ?"

"ಮಾಡಬಾರದು. ಯಾವುದಕ್ಕೂ ಸಾಲ ಮಾಡಬಾರದು. ಯಾರದೋ ಬಲವಂತಕ್ಕೆ ಇದು ಗಂಟು ಬಿತ್ತು, ಅಷ್ಟೆ"

"ಹಾಗೇ ನನ್ನ ಬಲವಂತಕ್ಕೆ ಇಂಜೆಕ್ಷನ್ನಿಗೂ ಸಾಲ ಮಾಡಿದ್ದರೆ?"

"ಇಂಜೆಕ್ಷನ್ ತೊಗೋಬೇಡ ಅಂದೆನಾ? ನಾನೇ ಹೇಳಿದೆ, ಫಸ್ಟಾದ ಕೂಡಲೆ ಇಂಜೆಕ್ಷನ್ನು ಟಾನಿಕ್ಕು ತೊಗೊ, ಅಡಿಗೆ ಕೆಲಸಕ್ಕೆ ಒಬ್ಬ ಹೆಂಗಸನ್ನೂ ನೇಮಿಸಿಕೊಳ್ಳೋಣ ಅಂತ? ಹಾಗಾದರೆ ಸಾಲ ಮಾಡಿ ಇಂಜೆಕ್ಷನ್ ಕೊಡಿಸಬೇಕಾಗಿತ್ತೇನು?"—ಎಂದು ರಾಮಸ್ವಾಮಿ ಹೆಂಡತಿಯನ್ನು ಕೇಳಿದ.

ಗೌರಿ "ತಮಾಷೆಗೆ ಅಂದೆ ಅಷ್ಟೆ!" ಎಂದು ನಕ್ಕಳು.

"ನೀವು ಸಾಲಾನೂ ಮಾಡಬೇಡಿ, ಈಗ ಇಂಜೆಕ್ಷನ್ನೂ ಕೊಡಿಸಬೇಡಿ; ಫಸ್ಟಾಗಲಿ ನೋಡೋಣ" ಎಂದು ಸೈಕಲ್ ಬೆಲ್ ಒತ್ತಿದಳು.

ಅದು 'ಟ್ರಿಣ್!' ಎಂದಿತು.

* * * * *

ಅಡಿಗೆ ಕೆಲಸಕ್ಕೆ ನಾಗಮ್ಮ ಬಂದು ಒಂದು ತಿಂಗಳಾಗಿತ್ತು. ಗೌರಿಯ ಆರೋಗ್ಯವೂ ಸ್ವಲ್ಪ ಸುಧಾರಿಸಿತ್ತು. ಹನ್ನೆರಡು ಇಂಜೆಕ್ಷನ್ ತೆಗೆದುಕೊಂಡಿದ್ದಳು. ಟಾನಿಕ್ಕು ತೆಗೆದುಕೊಳ್ಳುತ್ತ ಹತ್ತು ದಿನಗಳಾಗಿದ್ದುವು. ದಿನದಿನಕ್ಕೂ ಅವಳ ಆರೋಗ್ಯ ಉತ್ತಮಗೊಳ್ಳುತ್ತಿತ್ತು.

ನಾಗಮ್ಮ ಕಸ ಮುಸುರೆ ಮಾಡಿಕೊಳ್ಳುತ್ತಿದ್ದಳು. ಕಾಫಿ ತಿಂಡಿ, ಮೇಲಿನ ಕೆಲಸ ಮಾತ್ರ ಗೌರಿ ನೋಡಿಕೊಳ್ಳುತ್ತಿದ್ದಳು. ಅವಳಿಗೆ

ದಿನವೂ ಸಾಕಷ್ಟು ವಿಶ್ರಾಂತಿ ದೊರೆಯುತ್ತಿದ್ದುದರಿಂದ ಔಷಧ, ಚೆನ್ನಾಗಿ ಮೈಗಂಟಿತು.

ತಂದೆಯವರಿಗೆ ಈ ವಿಷಯವಾಗಿ ಮಗಳು ಕಾಗದ ಬರೆದಿದ್ದಳು. ಶಾಮಣ್ಣನವರು ಆ ಕಾಗದ ಓದಿಕೊಂಡು "ಪರವಾಯಿಲ್ಲ, ಅಳಿಯ" ಎಂದುಕೊಂಡರು.

ಗಂಡ ಹೆಂಡತಿ ಪ್ರತಿ ದಿನವೂ ಸಂಜೆ ಸ್ವಲ್ಪ ದೂರ ಸುತ್ತಾಡಿಕೊಂಡು ಬರುವ ಅಭ್ಯಾಸವನ್ನು ಈಚೆಗೆ ಮಾಡಿಕೊಂಡಿದ್ದರು. ಅದೂ ಗೌರಿಯ ಆರೋಗ್ಯದ ಸಲುವಾಗಿ ಡಾಕ್ಟರ್ ಹೇಳಿದ ಸಲಹೆಯಂತೆ. ಗುರುವಾರ ಗುರುವಾರ ಅವರು ರಾಯರ ಗುಡಿಗೆ ಹೋಗಿ ಪ್ರದಕ್ಷಿಣೆ ನಮಸ್ಕಾರ ಹಾಕಿ, ಗುರುಗಳ ದರ್ಶನ ಮಾಡಿ ಬರುತ್ತಿದ್ದರು.

ಒಂದು ಗುರುವಾರ ಸಂಜೆ ಇಬ್ಬರೂ ಮಠದ ಕಡೆಗೆ ಹೊರಟಿದ್ದರು. ಆಗ ಆರು ಗಂಟೆಯ ಸಮಯ. ಇನ್ನೂ ಚೆನ್ನಾಗಿ ಬೆಳಕಿತ್ತು; ಬೆಳಕೇನು, ಸಂಜೆ ಬಿಸಿಲೇ ಇತ್ತು. ರಾಯರ ಗುಡಿಯ ರಸ್ತೆಗೆ ತಿರುಗುವಾಗ, ದಾರಿಗೆ ಅಡ್ಡಲಾಗಿ ಕೋತಿಗಳ ಒಂದು ಗುಂಪು ಹಾದುಹೋಯಿತು. ರಾಮಸ್ವಾಮಿ ಗೌರಿ ಇಬ್ಬರೂ ಅದನ್ನು ನೋಡಿದರು. ಆದರೆ ರಾಮಸ್ವಾಮಿಯ ಕಣ್ಣಿಗೆ ಸರಿಯಾಗಿ ಬಿದ್ದುದು ಒಂದು ಹೆಣ್ಣು ಕೋತಿ. ಗುಂಪಿನ ಹಿಂದೆ ಆ ದಪ್ಪ ಹೆಣ್ಣು ಕೋತಿ ಎಳೆಯ ಮರಿಯೊಂದನ್ನು ಹೊಟ್ಟೆಗೆ ಅವುಚಿಕೊಂಡು ನಿಧಾನವಾಗಿ ಆ ಕಡೆಗೆ ಹೋಯಿತು. ಅದು ಹೋಗುವಾಗ ರಾಮಸ್ವಾಮಿಯ ಕಡೆಗೆ ತಿರುಗಿ ನೋಡಿತು. ರಾಮಸ್ವಾಮಿಯೂ ಅದನ್ನು ನೋಡಿ, ಗೌರಿಯ ಕಡೆಗೆ ತಿರುಗಿದ. ಅವಳೂ ಅದನ್ನು ನೋಡಿದ್ದಳು.

"ಎಷ್ಟು ಪುಟ್ಟಮರಿ!" ಎಂದಳು

ರಾಮಸ್ವಾಮಿ "ಅದೇ ವಾಸಿ ನಿನಗಿಂತ" ಎಂದು ನಕ್ಕ.

ಅವನು ನಗುತ್ತಾ ಆ ಮಾತು ಹೇಳಿದ. ಆದರೆ ಗೌರಿಗೆ ಅದರಿಂದ ತುಂಬ ನೋವಾಯಿತು. ಅವಳು ಮಾತೇ ಆಡಲಿಲ್ಲ. ತಲೆ ತಗ್ಗಿಸಿದಳು. ಇದು ರಾಮಸ್ವಾಮಿಗೆ ಗೊತ್ತಾಯಿತು. "ಛೆ, ನಾನು ಹಾಗನ್ನಬಾರದಿತ್ತು"

ಎಂದುಕೊಂಡ. ತಾನು ಹಾಸ್ಯಕ್ಕೆ ಆಡಿದ ಆ ಮಾತನ್ನೂ ಅವಳು ಹಾಗೆಯೇ ತಿಳಿದುಕೊಂಡು ನಗುವಳೆಂದುಕೊಂಡಿದ್ದ. ಆದರೆ ಅವಳಿಗೆ ಅದರಿಂದ ತುಂಬ ನೋವಾಗಿತ್ತು.

ರಾತ್ರಿ ಮಲಗುವಾಗ ಗೌರಿ ಹೊದಿಕೆಯನ್ನು ಮೇಲೆಳೆದುಕೊಳ್ಳುತ್ತ "ನೀವ್ಯಾಕೆ ಹಾಗಂದದ್ದು ಸಾಯಂಕಾಲ?" ಎಂದು ಕೇಳಿದಳು.

ರಾಮುಸ್ವಾಮಿಗೆ ಅದು ಮರೆತುಹೋಗಿತ್ತು. "ಏನಂದೆ?" ಎಂದು ಕೇಳಿದ.

"ಸಾಯಂಕಾಲ ಮಠಕ್ಕೆ ಹೋಗೋವಾಗ?"

"ಏನಂದೆ?"

"ಏನಂದರೊ ಜ್ಞಾಪಿಸಿಕೊಳ್ಳಿ."

ರಾಮುಸ್ವಾಮಿ ಜ್ಞಾಪಿಸಿಕೊಂಡ; ನೆನಪಾಯಿತು, ನಕ್ಕ.

"ಓ, ಹೌದು ಕೋತಿ ನೋಡಿ."

"ಆಗ ನೀವು ಯಾಕೆ ಹಾಗಂದದ್ದು?"

"ಅನ್ನಬಾರದ?"

"ಅನ್ನಿ ಅನ್ನಿ, ಚೆನ್ನಾಗನ್ನಿ" ಎಂದು ಮುಖಕ್ಕೆ ಮುಸುಕು ಹಾಕಿಕೊಂಡಳು.

ರಾಮುಸ್ವಾಮಿ "ನಾನು ತಮಾಷೆಗೆ ಅಂದೆ ಗೌರಿ. ನೀನು ಅದನ್ನು ಅರ್ಥ ಮಾಡಿಕೊಳ್ಳಲೇ ಇಲ್ಲ" ಎಂದು ಹೊದಿಕೆಯನ್ನು ಎಳೆದ.

ಗೌರಿ ಹೊದಿಕೆಯನ್ನು ಮತ್ತೆ ಮುಖದ ಮೇಲೆಳೆದುಕೊಳ್ಳುತ್ತ "ನನಗೆ ಅರ್ಥವಾಗುತ್ತೆ. ನಿಮ್ಮ ಮನಸ್ಸಿಗೆ ಬೇಜಾರಾಗೇ ನೀವು ಹಾಗೆಲ್ಲ ಅನ್ನೋದು. ಅವತ್ತೂ ಹಾಗೇ ಅಂದಿರಿ, ಆ ನಾಯಿಮರೀನ್ನ ನೋಡಿ. ಹೌದು, ನಾನು ನಿಮ್ಮ ಭಾಗಕ್ಕೆ ನಾಯಿಗಿಂತ ಕಡೆ, ಕೋತಿಗಿಂತ ಕಡೆ" ಎಂದು ಅಳುವುದಕ್ಕೆ ಮೊದಲುಮಾಡಿದಳು.

ರಾಮುಸ್ವಾಮಿ ಗೌರಿಯ ಹತ್ತಿರಕ್ಕೆ ಸರಿದು "ಗೌರಿ ಇದೇನಿದು! ನಾನು ತಮಾಷೆಗೆ ಅಂದೆ ಗೌರಿ, ನೀನು ಹೀಗೆ ತಿಳ್ಕೊಳ್ತೀಯ ಅಂತ ಗೊತ್ತಿದ್ದರೆ ಖಂಡಿತ ಅಂತಿರಲಿಲ್ಲ. ನೀನೂ ನಕ್ಕುಬಿಡ್ತೀಯ ಅಂತ ಅಂದ್ಳೆ.

ಹಾಸ್ಯಕ್ಕೆ ಅನ್ನೋದು ನಿನಗೆ ಗೊತ್ತಾಗಲೇ ಇಲ್ಲ. ಹೋಗಲಿ ಬಿಡು, ಇನ್ನು ಮೇಲೆ ಹಾಗನ್ನೊಲ್ಲ" ಎಂದ.

"ಅನ್ನೋದು ಅಂದುಬಿಡೋದು, ಆಮೇಲೆ ತಮಾಷೆಗೆ ಅಂದೆ, ಇನ್ಮೇಲೆ ಅನ್ನೊಲ್ಲ ಅನ್ನೋದು. ಮುತ್ತು ಒಡೆದರೆ ಹೋಯ್ತು, ಮಾತು ಆಡಿದರೆ ಹೋಯ್ತೂಂತ ಗೊತ್ತಿಲ್ವೇನೊ. ಅವತ್ತಂತು ನನಗೆಷ್ಟು ಬೇಜಾರಾಯ್ತೊ!"

"ಯಾವತ್ತು?"

"ಅವತ್ತು? ಯಾವುದೋ ಇಂಗ್ಲೀಷ್ ಪೇಪರ್ ತೋರಿಸಿ ಹೇಳಿದಿರಲ್ಲ?"

"ಏನು ಹೇಳಿದೆ?"

"ಅದರಲ್ಲಿರೋ ಬೊಂಬೆ ತೋರಿಸಿ?"

"ಯಾವ ಬೊಂಬೆ! ನಂಗೊತ್ತಿಲ್ಲ, ಏನು ಹೇಳಿದೆ ಹೇಳು?"

"ಏನು ಹೇಳಿದಿರೋ ನೀವೇ ಜ್ಞಾಪಿಸಿಕೊಳ್ಳಿ."

"ನನಗೆ ಜ್ಞಾಪಕವಿಲ್ಲ. ನಿನಗೆ ಜ್ಞಾಪಕ ಇದೆಯಲ್ಲ ಹೇಳು."

"ಜ್ಞಾಪಕವಿಲ್ಲದೆ! ಅಂಥ ಮಾತನ್ನು ಮರೆಯೋಕಾಗುತ್ತ್ಯೆ."

"ಹೇಳು ಹೋಗಲಿ. ಕೇಳೋಣ, ನನಗೆ ಮರೆತ್ಹೋಗಿದೆ."

"ನಾ ಹೇಳೊಲ್ಲ"

"ಹಾಗಾದರೆ ನಾನು ಆ ಮಾತು ಅನ್ನಲೇ ಇಲ್ಲ."

"ಊ್ಹ್ಞ. ಅದ್ಯಾವೊಳೋ ಹೆಂಗಸು ತೊಟ್ಟಿಲು ತೂಗ್ತಾ ಇರೋ ಚಿತ್ರ ತೋರಿಸಿ ನೀವನ್ನಲಿಲ್ಲವೇನೊ!?"

"ಏನಂತ?"

"ಏನಂತ ಅಂದರೆ?"

"ಹೇಳು, ಏನಂದೆ ಅನ್ನೋದನ್ನ"

"ನಾ ಹೇಳೊಲ್ಲ."

"ಹಾಗಾದರೆ, ನಾನು ಸುಮ್ಮನೆ ಚಿತ್ರ ತೋರಿಸಿದೆ ಅಷ್ಟೆ. ಏನೂ ಅನ್ನಲಿಲ್ಲ."

"ಊಹ್ಞಾ. ಅನ್ನಲಿಲ್ಲವಂತೆ. ಹೇಳಲಿಲ್ಲವೇನೊ, ನೀನು ತೂಗೋದು ನಾಗೋಲಿ ತೊಟ್ಟಿಲು, ಕರೀಮುಂದ ಗೊಂಬೇಂತ."

"ಓ, ಹಾಗಂದೆನೇನು. ಹೋಗಲಿ ಬಿಡು" ಎಂದು ರಾಮುಸ್ವಾಮಿ ಗೋಡೆಯ ಕಡೆಗೆ ತಿರುಗಿಕೊಂಡ.

ಗೌರಿ "ಯಾಕೆ?" ಎಂದು ಭುಜ ಮುಟ್ಟಿ ಎಳೆದಳು. ರಾಮುಸ್ವಾಮಿ ಅವಳ ಕಡೆಗೆ ತಿರುಗಿದ. ಗೌರಿ ಕೇಳಿದಳು :

"ನಿಮ್ಮ ಮನಸ್ಸಿಗೆ ಬೇಜಾರಾಗಿಲ್ಲವೆ?"

"ಯಾಕೆ?"

"ನಿಮ್ಮ ತಾಯಿ ಇಷ್ಟ ನೆರವೇರಲಿಲ್ಲಾಂತ."

"ಏನು ನಮ್ಮ ತಾಯಿ ಇಷ್ಟ?"

"ನಿಮಗೆ ಗೊತ್ತಿಲ್ಲವೆ?"

"ಇಲ್ಲ, ಗೊತ್ತಿಲ್ಲ."

"ಊಹ್ಞಾ. ಗೊತ್ತಿದೆ. ಏನು ಮಾಡೋದು, ನಾನು ಹಿಂದಿನ ಜನ್ಮ ವಲ್ಲಿ ಫಲ ಕೊಟ್ಟು ಹುಟ್ಟಲಿಲ್ಲ. ಇದರಿಂದ ನಿಮಗೆ ಎಷ್ಟು ಬೇಜಾರಾಗಿ ದೆಯೊ!"—ಎಂದು ಮತ್ತೆ ಅಳುವುದಕ್ಕೆ ಮೊದಲುಮಾಡಿದಳು.

"ಗೌರಿ ಅಳಬೇಡ, ಒಂದು ವಿಷಯ ಹೇಳ್ತೀನಿ ಕೇಳು. ನಿನಗೆ ಅದನ್ನ ಹೇಳಿರಲಿಲ್ಲ" ಎಂದು ಅವಳ ಭುಜ ತಟ್ಟಿ ಹೇಳಿದ.

ಗೌರಿಗೆ ಅದೇನೊ ಕೇಳಬೇಕೆನ್ನಿಸಿತು.

"ಏನು?" ಎಂದು ಮುಸುಕು ಓರೆ ಮಾಡಿ ಗಂಡನ ಮುಖ ನೋಡಿ ಕೇಳಿದಳು.

"ಒಬ್ಬರು ಭವಿಷ್ಯ ಹೇಳಿದಾರೆ ಗೌರಿ!"

"ಏನಂತೆ?"

"ನೀನು ಹೀಗೇ ಇರೊಲ್ಲವಂತೆ!"

"ಹಾಗಂದರೆ?"

"ನೀನೂ ಪುಟ್ಟಮರೀನ್ನ ಆಡಿಸ್ತೀಯಂತೆ!"

"ಹೋಗಿ, ಎಲ್ಲ ಸುಳ್ಳು."

"ಇಲ್ಲ, ಇನ್ನೊಂದು ವಿಷಯಾನೂ ಹೇಳಿದರು."

"ಯಾರು ? ಹೇಳಿದೋರು ?"

"ಯಾರೋ, ನಿನಗ್ಯಾಕೆ"

"ಏನು ಹೇಳಿದರು ?"

"ನನಗೆ ವರ್ಗ ಆಗುತ್ತಂತೆ."

"ಯಾವಾಗ ?"

"ಇನ್ನೊಂದೆರಡು ಮೂರು ತಿಂಗಳಲ್ಲೇ ಆಗಬಹುದೂಂದಿದಾರೆ."

"ಯಾವತ್ತು ಹೇಳಿದರು ?"

"ಹೇಳಿ ಆಗಲೆ ಒಂದೂವರೆ ತಿಂಗಳಿಗೆ ಬಂತು."

ನೀವ್ಯಾಕೆ ಹೇಳಿರಲಿಲ್ಲ ಇದನ್ನ ?"

"ಸುಮ್ಮನೆ ಹೇಳಿರಲಿಲ್ಲ."

"ಯಾರು ಹೇಳಿದ್ದು ?"

"ಯಾರೋ ನಿನಗ್ಯಾಕೆ. ಏನು ಹೇಳಿದರು ಅನ್ನೋದು ಮುಖ್ಯ."

* * * * *

ಪಂಡಿತರು ಹೇಳಿದ ಎರಡು ಭವಿಷ್ಯಗಳೂ ನಿಜವಾದುವು. ಆದರೆ ಎರಡೂ ಒಟ್ಟಿಗೆ ಆಗಲಿಲ್ಲ. ಮೂರು ತಿಂಗಳಿಗಿಂತ ಹೆಚ್ಚು ಕಾಲ ನಾಗಮ್ಮನ ಕೈಯಲ್ಲಿ ಅಡಿಗೆ ಮಾಡಿಸಿಕೊಳ್ಳುವುದು ಗೌರಿಯ ಹಣೆಯಲ್ಲಿ ಬರೆದಿರಲಿಲ್ಲ. ಪಂಡಿತರ ಭವಿಷ್ಯದಂತೆ ಗಂಡನಿಗೆ ಶ್ರಾವಣಮಾಸದ ಕೊನೆಯಲ್ಲಿಯೇ ಮೈಸೂರಿಗೆ ವರ್ಗವಾಯಿತು.

ರಾಮುಸ್ವಾಮಿ ಸೈಕಲ್ಲು ಮತ್ತು ಸಾಮಾನು ಸಹಿತ ಮೊದಲು ಹೊಳೆನರಸೀಪುರಕ್ಕೆ ಹೋದ. ಶಾಮಣ್ಣನವರ ಚಿಕ್ಕಮ್ಮ ಮಗನ ಕೋರಿಕೆಯ ಮೇರೆ ಮಧುಗಿರಿಯಿಂದ ಬಂದು ಮನೆಯಲ್ಲಿ ನೆಲಸಿದ್ದಳು. ಆಕೆಗೂ ಯಾರೂ ದಿಕ್ಕಿರಲಿಲ್ಲ. ಗಂಡ, ಇದ್ದ ಒಬ್ಬ ಮಗ ಇಬ್ಬರನ್ನೂ ನೀಗಿಕೊಂಡು ಒಬ್ಬೊಂಟಿಗಳಾಗಿದ್ದಳು. ಜೀವನ ನಡಸುವುದೇ ಬಹಳ ಕಷ್ಟವಾಗಿತ್ತು. ಆ ಸಮಯಕ್ಕೆ ಸರಿಯಾಗಿ ಶಾಮಣ್ಣನವರ ಕಾಗದ ಬಂದು ಅವಳಿಗೆ ತುಂಬ ಸಹಾಯಮಾಡಿತ್ತು. ವಯಸ್ಸಾಗಿದ್ದರೂ ಅಡಿಗೆ

ಕೆಲಸ ಕಸಮುಸುರಿ ಎಲ್ಲ ಚಕಚಕ ಮಾಡಿಕೊಂಡು ಹೋಗುತ್ತಿದ್ದಳು ಆದ್ದರಿಂದ, ರಾಮಸ್ವಾಮಿ ಹೊಳೆನರಸೀಪುರದಲ್ಲಿ ಸಾಮಾನನ್ನೂ ಗೌರಿಯನ್ನೂ ಬಿಟ್ಟು, ತಾನೂ ಒಂದೆರಡು ದಿನ ಅಲ್ಲಿ ಇದ್ದು, ಮುಂದೆ ಮೈಸೂರಿಗೆ ಪ್ರಯಾಣಮಾಡಿದ.

ಊರಿಗೆ ಹೊರಡುವ ಹಿಂದಿನ ದಿನ ಬಟ್ಟೆಗಳನ್ನೆಲ್ಲ ಟ್ರಂಕಿಗೆ ಹಾಕುತ್ತಿದ್ದಾಗ, ಗೌರಿ ಗಂಡನನ್ನು ಕೇಳಿದಳು: "ಸೈಕಲ್ ತೊಗೊಂಡು ಹೋಗಲ್ಲವೆ?"

"ಇಲ್ಲ. ಆಫೀಸು ನೂರಡಿರಸ್ತೇಲೆ. ಅಲ್ಲೀ ಸದ್ಯಕ್ಕೆ ಯಾವುದಾದರೂ ರೂಮು ಮಾಡಿಕೊಳ್ಳೋದು. ಮನೆ ಮಾಡಿದ ಮೇಲೆ ನಿನ್ನೊತೇಲೇ ಅದನ್ನೂ ಕರಕೊಂಡ್ಹೋಗ್ತೀನಿ" ಎಂದು ರಾಮಸ್ವಾಮಿ ಹೇಳಿದ.

"ಸರಿ" ಎಂದು ಗೌರಿ ನಕ್ಕಳು.

ಮೈಸೂರಿಗೆ ವರ್ಗವಾದ ಸುದ್ದಿ ಬಂದಾಗಲೇ ಮಾಧವರಾಯರ ನೆನಪಾಗಿತ್ತು. ಅವನು ಅವರನ್ನು ನೋಡಿ ಆಗಲೆ ಸುಮಾರು ಏಳು ವರುಷಗಳಾಗಿದ್ದುವು. ಮೈಸೂರಿಗೆ ಹೋದ ಕೂಡಲೆ ಅವರ ಮನೆಗೆ ಹೋಗಿ ಕ್ಷಮಾಪಣೆ ಕೇಳಿಕೊಳ್ಳಬೇಕು. ಅವರು ಗೌರಿಯನ್ನು ಕರೆದುಕೊಂಡು ಬಾ, ಎಂದು ಪದೇಪದೇ ಹೇಳಿದ್ದರು. ಆದ್ದರಿಂದ ಗೌರಿಯನ್ನೂ ಅವರ ಮನೆಗೆ ಕರೆದುಕೊಂಡು ಹೋಗಬೇಕು, ಎಂದುಕೊಂಡ.

ಊರಿಗೆ ಹೋದ ಕೂಡಲೆ ಎಲ್ಲಿ ಇಳಿದುಕೊಳ್ಳುವುದು, ಎಂಬ ಪ್ರಶ್ನೆ ಬಂತು. ಮಾಧವರಾಯರ ಮನೆಯಲ್ಲಿಯೇ ಇಳಿದುಕೊಳ್ಳೋಣವೆ? ಎಂದೂ ಅನ್ನಿಸಿತು. ಆದರೆ ಆಮೇಲೆ 'ಅದು ಸರಿಯಲ್ಲ, ಇಷ್ಟು ವರುಷಗಳ ಮೇಲೆ ಅವರ ಮನೆಗೆ ನೇರವಾಗಿ, ಅದೂ ಒಬ್ಬನೇ–ಗೌರಿ ಇಲ್ಲದೆ–ಹೋಗಿ ಇಳಿದುಕೊಳ್ಳುವುದು ಸರಿಯಲ್ಲ, ಯಾವುದಾದರೂ ಹೋಟಲಲ್ಲಿ ಉಳಿದರಾಯಿತು; ಆಮೇಲೆ ಸರಿಯಾದ ಮನೆ ಮಾಡಿಕೊಳ್ಳೋದು' ಎಂದುಕೊಂಡ.

ಅದರ ಬಗ್ಗೆ ಹಾಗೆಯೇ ಯೋಚಿಸುತ್ತಿದ್ದಾಗ, ಅವನಿಗೆ ಒಂದು ವಿಷಯ ನೆನಪಾಯಿತು. ಸೋನಾರ್ ಬೀದಿಯಲ್ಲಿ ವೆಸ್ಟ್ ಎಂಡ್ ಲಾಡ್ಜ್

ಇದೆ. ಅಲ್ಲಿ ಬೇಕಾದಷ್ಟು ರೂಮುಗಳಿವೆ. ಯಾವುದಾದರೂ ಖಾಲಿ ಇದ್ದೇ ಇರುತ್ತದೆ. ತಾನು ಓದುತ್ತಿದ್ದಾಗ, ತನ್ನ ಸ್ನೇಹಿತ ರಾಮಮೂರ್ತಿ ಅಲ್ಲೇ ಒಂದು ರೂಮಿನಲ್ಲಿದ್ದ; ಅವನು ಕೊಡುತ್ತಿದ್ದ ಬಾಡಿಗೆ ಕೇವಲ ಐದು ರೂಪಾಯಿ. ಆದರೂ ರೂಮು, ಜಾಗ ಅಚ್ಚುಕಟ್ಟಾಗಿತ್ತು. ಆ ಕಟ್ಟಡದ ಎದುರಿನಲ್ಲೇ ವೆಲ್ ಕಂ ಹೋಟೆಲ್ ಇತ್ತು; ಅದು ಈಗಲೂ ಇರಬಹುದು. ಇದ್ದರೆ ಬಹಳ ಅನುಕೂಲ. ಆಫೀಸಿಗೂ ತುಂಬ ಹತ್ತಿರವಾಗಿದೆ. ಸರಿಯಾದ ಮನೆ ಸಿಕ್ಕುವ ವರೆಗೆ ವೆಸ್ಟ್ ಎಂಡ್ ಲಾಡ್ಜ್ ನಲ್ಲಿ ವಾಸ, ವೆಲ್ ಕಂ ಹೋಟೆಲಲ್ಲಿ ಊಟ ಮಾಡಬಹುದು; ಅಲ್ಲಿ ಊಟ ಚೆನ್ನಾಗಿಲ್ಲದಿದ್ದರೆ, ತಾನು ಹೋಗುತ್ತಿದ್ದ ಐಯ್ಯರ್ ಹೋಟೆಲ್ ನೂರಡಿ ರಸ್ತೆಯಲ್ಲಿದೆ; ಅದು ಹಾಗೆಯೇ ಇದ್ದರೆ ಅಲ್ಲಿಗೇ ಹೋಗಬಹುದು, ಅದೂ ಹತ್ತಿರವಾಗಿಯೆ ಇದೆ; ಅಲ್ಲಿ ಊಟ ಪರವಾಯಿಲ್ಲ, ಎನ್ನಿಸಿತು.

ರೈಲಿನಿಂದ ಇಳಿದ ಕೂಡಲೆ, ಗಾಡಿಯನ್ನು ಗೊತ್ತು ಮಾಡಿ ವೆಸ್ಟ್ ಎಂಡ್ ಲಾಡ್ಜ್ ಕಡೆಗೆ ಹೊಡಿಸಿದ. ಸ್ವಲ್ಪ ಹೊತ್ತಿನಲ್ಲಿಯೇ ವೆಸ್ಟ್ ಎಂಡ್ ಲಾಡ್ಜ್ ಬಂತು. ರಾಮಸ್ವಾಮಿ ಗಾಡಿಯಿಂದ ಇಳಿದು ವಿಚಾರಿಸಿದ. ಅಲ್ಲಿ ಒಂದೇ ಒಂದು ರೂಮು—ಅದೂ ಬೀದಿಯ ಪಕ್ಕದ ರೂಮು ಖಾಲಿಯಾಗಿತ್ತು; ರಾಮಸ್ವಾಮಿ ಅದನ್ನೇ ಬಾಡಿಗೆಗೆ ಗೊತ್ತು ಮಾಡಿಕೊಂಡ. ಬಾಡಿಗೆ ಒಂದು ರೂಪಾಯಿ ಏರಿತ್ತು. ಆರು ರೂಪಾಯಿ ಅಡ್ವಾನ್ಸ್ ಕೊಟ್ಟು, ಮನೆಯ ಮಾಲೀಕರ ಮಗನ ಹತ್ತಿರ ರಸೀತಿ ಪಡೆದದ್ದಾಯಿತು.

ಗಾಡಿಯಲ್ಲಿ ಬರುವಾಗಲೇ ರಾಮಸ್ವಾಮಿ ವೆಲ್ ಕಂ ಹೋಟೆಲಿನ ಬೋರ್ಡು ನೋಡಿದ್ದ. ಕೋಣೆಯಲ್ಲಿ ಸಾಮಾನನ್ನೆಲ್ಲ ಸರಿಯಾಗಿಟ್ಟು, ಹಾಸಿಗೆ ಬಿಚ್ಚಿದ. ಷರಾಯಿ ತೆಗೆದು, ಪಂಚೆ ಉಟ್ಟುಕೊಂಡು ಒಗೆದ ಟವಲೊಂದನ್ನು ಭುಜದ ಮೇಲೆ ಹಾಕಿಕೊಂಡ. ಸ್ನಾನ ಹೊಳೆನರಸೀಪುರ ದಲ್ಲಿಯೇ ಆಗಿತ್ತು; ಆದ್ದರಿಂದ ಮುಖ ತೊಳೆದುಕೊಂಡು ಊಟಮಾಡಿ, ಆಫೀಸಿನ ಕಡೆಗೆ ಹೊರಡುವುದು ಎಂದು ತೀರ್ಮಾನಿಸಿದ. ಪೆಟ್ಟಿಗೆಯಲ್ಲಿದ್ದ ಬೀಗ ಬೀಗದ ಕೈಗಳನ್ನೂ ಸೋಪಿನ ಪೆಟ್ಟಿಗೆಯನ್ನೂ ಹೊರಗೆ ತೆಗೆದು, ಬಾಗಿಲಿಗೆ ಬೀಗ ಹಾಕಿ ಹೋಟೆಲಿನ ಕಡೆಗೆ ಹೊರಟ.

ಹೋಟಲಿನಲ್ಲಿ 'ಊಟ ಉಂಟು, ತಿಂಗಳಿಗೆ ಒಂದು ಸ್ನಾನ ಎರಡು ಊಟ ಸೇರಿ ಹದಿನೆಂಟು ರೂಪಾಯಿ' ಎಂದು ಗೊತ್ತಾಯಿತು.

ರಾಮಸ್ವಾಮಿ 'ಊಟ ಹೇಗಿರುತ್ತೋ ನೋಡಿ ಆಮೇಲೆ ಅಡ್ವಾನ್ಸ್ ಕೊಡೋಣ' ಎಂದು ಒಂದು ಊಟದ ಟಿಕೆಟ್ ತೆಗೆದುಕೊಂಡ. ಮುಖ ಕೈಕಾಲು ತೊಳೆದುಕೊಂಡು ಒಳಗೆ ಹೋಗಿ ಕುಳಿತ. ಅಡಿಗೆ ಸುಮಾರಾಗಿತ್ತು; ಆರು ವರುಷಗಳಿಂದ ಮನೆಯ ಊಟ ಉಂಡ ಅವನಿಗೆ ಅದು ಅಷ್ಟು ರುಚಿಕರವಾಗಿರಲಿಲ್ಲ; ರಾತ್ರಿ ಇನ್ನಾವುದಾದರೂ ಹೋಟಲಲ್ಲಿ ಊಟಮಾಡಿ ನೋಡೋಣ, ಎಂದುಕೊಂಡು ಎದ್ದುಹೋಗಿ ಕೈತೊಳೆದುಕೊಂಡ. ಅಡಕೆ ಚೂರಿಗಾಗಿ ಮೇಜಿನ ಹತ್ತಿರ ಬಂದಾಗ, ಪ್ರೊಪ್ರೈಟರ್ "ಏನ್ ಸಾರ್, ಏನ್ಮಾಡ್ತೀರಿ?" ಎಂದು ಕೇಳಿದರು. ಅದಕ್ಕೆ ರಾಮಸ್ವಾಮಿ "ನೋಡೋಣ, ಸಾಯಂಕಾಲ ಅಥವಾ ನಾಳೆ ಬೆಳಗ್ಗೆ ಅಡ್ವಾನ್ಸ್ ಕೊಡ್ತೀನಿ" ಎಂದು ಕೋಣೆಗೆ ಹೊರಟ.

ಬಟ್ಟೆ ಹಾಕಿಕೊಂಡು ಆಫೀಸಿಗೆ ಹೊರಟಾಗ ಒಂದೂವರೆ ಹೊಡೆದಿತ್ತು; ರಾಮಸ್ವಾಮಿ ನೇರವಾಗಿ ಆಫೀಸಿಗೆ ಹೋದ. ಒಳಗೆ ಹೋಗಿ ಅಸಿಸ್ಟೆಂಟ್ ರಿಜಿಸ್ಟ್ರಾರ್ ರಾಮಚಂದ್ರರಾಯರ ದರ್ಶನ ಪಡೆದ. ಅವರು ರಾಮಸ್ವಾಮಿಯನ್ನು ಬೆಂಗಳೂರಿನ ಆಫೀಸಿನಲ್ಲಿ ನೋಡಿದ್ದರು. ತಕ್ಕಮಟ್ಟಿಗೆ ಪರಿಚಯವೂ ಇತ್ತು. ರಾಮಸ್ವಾಮಿ ಒಳಗೆ ಬಂದ ಕೂಡಲೆ "ಬನ್ನಿ ರಾಮಸ್ವಾಮಿ ಕೂತ್ಕೊಳ್ಳಿ. ಯಾವಾಗ ಬಂದಿರಿ?" ಎಂದು ಕ್ಷೇಮಸಮಾಚಾರ ವಿಚಾರಿಸಿಕೊಂಡರು. ರಾಮಸ್ವಾಮಿ ನಿಂತುಕೊಂಡೇ "ಈಗ ಬಂದೆ ರೈಲಿನಲ್ಲಿ" ಎಂದು ಹೇಳಿದ. ಸಾಹೇಬರು "ಕೂತ್ಕೊಳ್ಳಿ ಪರವಾಯಿಲ್ಲ, ಊಟ ಆಯಿತೆ?" ಎಂದು ಕೇಳಿದರು.

"ಆಯ್ತು ಸಾರ್, ಇವತ್ತೇ ಡ್ಯೂಟಿ ರಿಪೋರ್ಟ್ ಕೊಟ್ಬಿಡೋಣಾಂತ ಬಂದೆ" ಎಂದು ರಾಮಸ್ವಾಮಿ ನಿಂತುಕೊಂಡೇ ಹೇಳಿದ.

ರಾಯರು "ಈಗ ಬೇಡ. ಕೂತ್ಕೊಳ್ಳಿ ಹೇಳ್ತೀನಿ" ಎಂದು ಎದುರಿಗಿದ್ದ ಕುರ್ಚಿ ತೋರಿಸಿದರು. ರಾಮಸ್ವಾಮಿ ಕುಳಿತುಕೊಳ್ಳಬೇಕಾಯಿತು; ಸಾಹೇಬರ ಬಾಯಿಂದ "ಈಗ ಬೇಡ" ಎಂಬ ಮಾತು ಕೇಳಿ ಗಾಬರಿಯಾಯಿತು.

ರಾಮಸ್ವಾಮಿ "ಯಾಕೆ ಸಾರ್!?" ಎಂದು ಕೂತೂಹಲದಿಂದ ಕೇಳಿದ.

ರಾಯರು "ಯಾಕೂ ಇಲ್ಲ, ಗಾಬರಿಪಡಬೇಡಿ. ಇವತ್ತು ಗುರುವಾರ, ದಿನ ಚೆನ್ನಾಗಿದ್ದರೂ ಈಗ ಮೂರು ಗಂಟೆ ವರೆಗೂ ರಾಹುಕಾಲ ಇದೆ. ಆದ್ದರಿಂದ ಇವತ್ತು ಯಾಕೆ, ನಾಳೆ ಹನ್ನೊಂದು ಗಂಟೆಗೆ ಬಂದ್ಬಿಡಿ. ಹೋಗಿ, ಇವತ್ತು ರೆಸ್ಟ್ ತೊಗೊಳ್ಳಿ ಪರವಾಯಿಲ್ಲ" ಎಂದು ನಕ್ಕರು.

ರಾಮಸ್ವಾಮಿ "ಸರಿ, ಸಾರ್" ಎಂದು ತಾನೂ ನಕ್ಕ.

ಸಾಹೇಬರು ಹೇಳಿದಂತೆಯೇ ಮಾಡೋಣವೆಂದುಕೊಂಡು ಆಫೀಸು ಬಿಟ್ಟು ಹೊರಟ. ನೂರಡಿ ರಸ್ತೆಯಲ್ಲಿ ಬರುತ್ತಿದ್ದಾಗ ಅಯ್ಯರ್ ಹೋಟಲು ಕಾಣಿಸಿತು. ಏಳೆಂಟು ವರುಷಗಳ ಹಿಂದೆ ತಾನು ಊಟಮಾಡುತ್ತಿದ್ದ ಹೋಟಲೆ! ಒಳಗೆ ಹೋಗಿ ಊಟದ ದರ ವಿಚಾರಿಸಬೇಕೆನ್ನಿಸಿತು. ಹೋದ. ಕುರ್ಚಿಯ ಮೇಲೆ ಕುಳಿತು ಒಂದು ಲೋಟ ಕಾಫಿ ತರಿಸಿ ಕುಡಿದ. ಅದೇ ಪ್ರೊಪ್ರೈಟರ್ ಗಲ್ಲದ ಮೇಲೆ ಕುಳಿತಿದ್ದರು. ರಾಮಸ್ವಾಮಿ ಕಾಫಿಯ ಬಿಲ್ ಕೊಡುವಾಗ, "ಈಗ ಊಟ ಹೇಗೆ ಪ್ರೊಪ್ರೈಟರೆ?" ಎಂದು ಕೇಳಿದ. ಅಯ್ಯರ್ "ಸಿಂಗಲ್ ಊಟ ಎಂಟಾಣೆ, ತಿಂಗಳಿಕೆ ಆದರೆ ಹದಿನೆಂಟು ರೂಪಾಯಿ" ಎಂದರು. ರಾಮಸ್ವಾಮಿ ತಾನು ಬಿ. ಎ. ಓದುತ್ತಿದ್ದಾಗ ಅವರ ಹೋಟಲಲ್ಲಿಯೇ ಊಟಮಾಡುತ್ತಿದ್ದ ವಿಷಯವನ್ನು ಆತ್ಮೀಯವಾಗಿ ಅರಿಕೆ ಮಾಡಿಕೊಂಡ. ಅಯ್ಯರ್ "ಆ್ಞ ಆ್ಞ" ಎಂದು ಸುಮ್ಮನಾದರು.

ರಾಮಸ್ವಾಮಿ ಕೋಣೆಗೆ ಬಂದಾಗ ಮೂರೂ ಕಾಲು ಗಂಟೆಯಾಗಿತ್ತು. ಗೌರಿಗೆ ಕಾಗದ ಬರೆಯಲು ಬೇಕಾದಷ್ಟು ವಿರಾಮ ಸಿಕ್ಕಿತು. ಮಂಚದ ಮೇಲೆ ಥಾಸಿಗೆ ಉರುಳಿಸಿ ಬಿದ್ದುಕೊಂಡು ಲೆಟರ್ ಪ್ಯಾಡ್ ತೆಗೆದು ಬರೆಯತೊಡಗಿದ: 'ನಾನು ಸುಖವಾಗಿ ಊರು ತಲುಪಿದೆ. ವೆಸ್ಟ್ ಎಂಡ್ ಲಾಡ್ಜ್ ಎಂಬ ಕಟ್ಟಡದಲ್ಲಿ ಸುಮಾರು ಇಪ್ಪತ್ತು ಇಪ್ಪತ್ತೈದು ರೂಮುಗಳಿವೆ. ಅದರಲ್ಲಿ ಒಂದೇ ಒಂದು ಖಾಲಿ ಇತ್ತು. ಇದು ನನಗೆ ಅನುಕೂಲವಾಗಿದೆ. ಇದರ ನಂಬರ್ ಮೂರು.

ಕಾಗದ ಬರೆಯುವಾಗ ರೂಮು ನಂಬರು ಮೂರು, ವೆಸ್ಟ್ ಎಂಡ್ ಲಾಡ್ಜ್, ಸೋನಾರ್ ಬೀದಿ, ಮೈಸೂರು ಅಂತ ಬರಿ. ಊಟ ಎಲ್ಲಿ ಮಾಡೋದು ಅನ್ನೋದು ಇನ್ನೂ ತೀರ್ಮಾನಿಸಿಲ್ಲ, ಹತ್ತಿರದಲ್ಲೇ ಇರೋ ಹೋಟಲಲ್ಲಿ ಈಗ ಪರೀಕ್ಷೆ ಮಾಡಿ ನೋಡಿದೆ. ಅಷ್ಟೇನೂ ಚೆನ್ನಾಗಿರಲಿಲ್ಲ. ಹತ್ತಿರ ದಲ್ಲೇ ಇರುವ ಇನ್ಯಾವುದಾದರೂ ಹೋಟಲಲ್ಲಿ ರಾತ್ರಿ ಊಟ ಮಾಡಿ ನೋಡೋಣಾಂತಿದೀನಿ. ಆಫೀಸಿಗೆ ಹೋಗಿದ್ದೆ, ಈಗತಾನೆ ಅಲ್ಲಿಂದ ಬಂದೆ. ಸಾಹೇಬರು ಬಹಳ ಒಳ್ಳೆಯವರು. ಇವತ್ತು ಮೂರು ಗಂಟೆಯ ವರೆಗೂ ರಾಹುಕಾಲ ಇದ್ದದ್ದರಿಂದ ನಾಳೆ ಡ್ಯೂಟಿ ರಿಪೋರ್ಟ್ ಕೊಡಿ ಅಂತ ಹೇಳಿಕಳಿಸಿಬಿಟ್ಟರು. ಆದ್ದರಿಂದ ದೀರ್ಘವಾದ ಈ ಕಾಗದ ಬರೆ ಯಲು ಅವಕಾಶವಾಯಿತು. ಈ ಕಾಗದ ನಾಳೆಯೇ ನಿನಗೆ ತಲಪುತ್ತದೆ. ನಾನು ಇವತ್ತೇ ಡ್ಯೂಟಿ ರಿಪೋರ್ಟ್ ಕೊಟ್ಟಿದ್ದರೆ ಇದನ್ನು ರಾತ್ರಿ ಬರೀತಾ ಇದ್ದೆ. ಹಾಗಾಗಿದ್ದರೆ ಈ ಕಾಗದ ನಾಡಿದ್ದು ನಿನ್ನನ್ನು ಸೇರುತ್ತಿತ್ತು. ನಮ್ಮ ಸಾಹೇಬರ ಔದಾರ್ಯದಿಂದ ನನ್ನ ಕಾಗದ ನಾಳೆಯೇ ನಿನಗೆ ತಲಪುವ ಹಾಗಾಯಿತು. ಇವತ್ತು ಸಂಜೆ ಮಾಧವರಾಯರ ಮನೆಯ ಕಡೆ ಹೋಗೋಣಾಂತಿದೀನಿ. ಆಮೇಲೆ ಮನೆ ಹುಡುಕುವ ಕೆಲಸ. ಅಂತೂ ಆದಷ್ಟು ಬೇಗ ಮನೆ ಮಾಡುತ್ತೇನೆ, ಯೋಚನೆ ಮಾಡ ಬೇಡ" ಎಂದು ಎಲ್ಲ ವಿವರವಾಗಿ ಬರೆದು ಅಂಚೆಗೆ ಹಾಕಿಬಂದ.

ರಾತ್ರಿ ಅಯ್ಯರ್ ಹೋಟಲ ಊಟದ ಪರೀಕ್ಷೆ ಆಯಿತು. ವೆಲ್ ಕಂ ಲಾಡ್ಜ್ ಊಟಕ್ಕಿಂತ ಸ್ವಲ್ಪ ವಾಸಿಯಾಗಿತ್ತು. ಆದರೆ ಆ ಹೋಟಲು ರೂಮಿಗೆ ತುಂಬ ಹತ್ತಿರವಾಗಿದೆ, ಇದು ಸ್ವಲ್ಪ ದೂರ ಏನು ಮಾಡೋದು ಎನ್ನಿಸಿದಾಗ, 'ದೂರ ಆದರೂ ಪರವಾಯಿಲ್ಲ. ಇಲ್ಲಿಗೇ ಬಾ' ಎಂದು ಅಯ್ಯರ್ ಹೋಟಲಿನ ಅವಿಯಿಲ್ ಹೇಳಿತು.

ಮಾರನೆಯ ದಿನ ಹೋಟಲಿಗೆ ಹೋದ ಕೂಡಲೆ ಅಯ್ಯರ್ "ಏನು ಅಡ್ವಾನ್ಸ್ ಕುಡ್ತೀರಾ?" ಎಂದು ಕೇಳಿದರು. ರಾಮುಸ್ವಾಮಿ "ನಾನು ಒಂದು ತಿಂಗಳು ಇರೋದಿಲ್ಲ. ಬೇಗ ಮನೆ ಮಾಡಿಬಿಡ್ತೀನಿ. ಆದ್ದರಿಂದ ಹದಿನೈದು ದಿನದ ಅಡ್ವಾನ್ಸ್ ಕೊಟ್ಟಿರ್ತೀನಿ. ಆಮೇಲೆ ನೋಡ್ಕೊ

ಳ್ಳೋಣ" ಎಂದು ಹೇಳಿದ. ತಿಂಗಳಿಗಿಂತ ಕಡಮೆ ಆದರೆ ಅಯ್ಯರ್ ಯಾರಿಗೂ ಆ ರೇಟಿಗೆ ಊಟ ಹಾಕುತ್ತಿರಲಿಲ್ಲ; ಆದರೆ ರಾಮುಸ್ವಾಮಿ ಹಳೆಯ ಗಿರಾಕಿ, ಅಲ್ಲದೆ ಹತ್ತಿರದಲ್ಲಿಯೇ ಇರುವ ಆಫೀಸಿನಲ್ಲಿ ಈಗ ದೊಡ್ಡ ಕೆಲಸದಲ್ಲಿದ್ದಾನೆ, ಎಂದು ಒಪ್ಪಿಕೊಂಡು ಅಡ್ವಾನ್ಸ್ ಒಂಬತ್ತು ರೂಪಾಯಿ ಸ್ವೀಕರಿಸಿ ಊಟದ ಪುಸ್ತಕದಲ್ಲಿ ರಾಮುಸ್ವಾಮಿಯ ಹೆಸರು ವಿಳಾಸ ಬರೆಸಿದರು. ರಾಮುಸ್ವಾಮಿ ಊಟದ ಏರ್ಪಾಟು ಆದ ಹಾಗಾಯಿತಲ್ಲ, ಎಂದುಕೊಂಡು ಆಫೀಸಿನ ಕಡೆಗೆ ಹೊರಟ.

ಸಂಜೆ ಆಫೀಸಿನಿಂದ ಬಂದಮೇಲೆ, ಬಟ್ಟೆ ಬಿಚ್ಚಿ ಮುಖ ಕೈ ಕಾಲು ತೊಳೆದುಕೊಂಡ. ಅಯ್ಯರ್ ಹೋಟಲಲ್ಲಿ ಕಾಫಿ ಕುಡಿದು ಮಾಧವರಾಯರ ಮನೆಯ ಕಡೆಗೆ ಹೋಗೋಣ ಎನ್ನಿಸಿತು. ಹೊರಟ. ಅವನು ಹಿಂದಿನ ದಿನ ಸಂಜೆಯೇ ಅವರ ಮನೆಗೆ ಹೋಗಿದ್ದ. ಆದರೆ ಅವನಿಗೆ ರಾಯರು ಸಿಕ್ಕಲಿಲ್ಲ. ಯಾರೋ ಒಬ್ಬ ಹುಡುಗಿ ಹೊರಗೆ ಬಂದು "ಅವರು ಇಲ್ಲ ಮನೇಲಿ" ಎಂದು ಹೇಳಿದಳು. "ಲಕ್ಷ್ಮಮ್ಮನೋ ರಿಲ್ಲವೆ?" ಎಂದು ಕೇಳಿದ್ದಕ್ಕೆ "ಇಲ್ಲ ಅವರೂ ಇಲ್ಲ. ಇಬ್ಬರೂ ಈಗ ಪೇಟೆಗೆ ಹೋದರು" ಎಂದು ಉತ್ತರ ಬಂತು. ರಾಮುಸ್ವಾಮಿ ವಾಪಸು ಬಂದುಬಿಟ್ಟಿದ್ದ. ಈ ದಿನ ನೋಡೋಣ ಸಿಕ್ಕಬಹುದು ಎಂದುಕೊಂಡು ಗೇಟು ತೆಗೆದು ಬಂಗಲೆಯ ಹತ್ತಿರಕ್ಕೆ ಹೋದ. ತಾನು ಓದುತ್ತಿದ್ದ ಕೋಣೆಯಲ್ಲಿ ಅವನ ಹಾಗೆಯೇ ಒಬ್ಬ ವಿದ್ಯಾರ್ಥಿ ವಾಸವಾಗಿದ್ದ. ಆತ ಯಾವುದೋ ಇಂಗ್ಲಿಷ್ ಪುಸ್ತಕವನ್ನು ಗಟ್ಟಿಯಾಗಿ ಓದುತ್ತಿದ್ದ. ರಾಮುಸ್ವಾಮಿ ಬಾಗಿಲಲ್ಲಿ ನಿಂತು ಎರಡು ಮೂರು ಸಲ "ಮಾಧೂರಾವ್ ಮಾಧೂರಾವ್" ಎಂದು ಕೂಗಿದ. ಆ ವಿದ್ಯಾರ್ಥಿಯ ಓದಿನಿಂದ ರಾಯರಿಗೆ ಆ ಕೂಗು ಕೇಳಿಸಲಿಲ್ಲವೊ ಏನೊ. ಒಳಗಿನಿಂದ ಉತ್ತರವೇ ಬರಲಿಲ್ಲ. ರಾಮುಸ್ವಾಮಿ ವೆರಾಂಡಾಕ್ಕೆ ಹೋಗಿ ಪಡಸಾಲೆಯ ಬಾಗಿಲ ಹತ್ತಿರ ನಿಂತು "ಮಾಧೂರಾವ್!" ಎಂದು ಮತ್ತೆ ಕೂಗಿದ.

ಮಾಧವರಾಯರು ಒಳಗಿನಿಂದ "ಯಾರು?" ಎಂದು ಹೊರಗೆ ಬಂದರು

ಬೆನ್ನು ಸ್ವಲ್ಪ ಬಾಗಿದ್ದರೂ ತಲೆಗೂದಲು ತುಂಬ ನರೆತಿದ್ದರೂ ಮಾಧವರಾಯರು ಅದೇ ಮಾಧವರಾಯರಾಗಿದ್ದರು. ಆದರೆ ರಾಮಸ್ವಾಮಿ ತುಂಬ ಬದಲಾಯಿಸಿಬಿಟ್ಟಿದ್ದ. ರಾಯರಿಗೆ ಅವನ ಗುರುತು ಹತ್ತಲಿಲ್ಲ. ಅವರು ಮುಖ ನೋಡಿ ಮತ್ತೆ "ಯಾರು ?" ಎಂದರು.

ರಾಮಸ್ವಾಮಿ "ನಾನು, ರಾಮಸ್ವಾಮಿ" ಎಂದ.

ರಾಯರಿಗೆ ಆಗ ಗೊತ್ತಾಯಿತು. "ಓ ಬನ್ನಿ ಬನ್ನಿ. ನನಗೆ ಗೊತ್ತಾಗಲೇ ಇಲ್ಲ. ಆಗಲೆ ಐದಾರು ವರುಷ ಆಗ್ಹೋಯ್ತೇನೊ, ಅಲ್ಲ?" ಎಂದು ಕುರ್ಚಿ ತೋರಿಸಿ, ಪದ್ಧತಿಯಂತೆ ತಾವು ಸೋಫಾದ ಮೇಲೆ ಕುಳಿತುಕೊಂಡರು.

ರಾಮಸ್ವಾಮಿ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ "ಎಲ್ಲಿ ಐದಾರು ವರುಷ! ಏಳು ವರುಷ ಆಗ್ತಾಬಂತು!" ಎಂದ.

"ಕೊನೇಗೂ ನೀವು ಕಾನ್ವೊಕೇಷನ್‌ಗೆ ಬರಲೇ ಇಲ್ಲ!"

"ಇಲ್ಲ. ಆಗಲಿಲ್ಲವಲ್ಲ. ಆವಾಗ ಹಾಗಾಗ್ಹೋಯ್ತು, ಏನು ಮಾಡೋದು."

"ಅಯ್ಯೊ, ಪಾಪ! ಹೌದು. ಬರೆದಿದ್ದರಲ್ಲ, ಆದರೆ ನೀವು ನಿಮ್ಮ ಒಂದು ಫೋಟೊ ಕೊಡಲೇಬೇಕು. ಈಗ ಏನಾಗಿದೆ ಗೊತ್ತೊ, ಬನ್ನಿ ತೋರಿಸ್ತೀನಿ" ಎಂದು ಎದ್ದು ರಾಮಸ್ವಾಮಿಯನ್ನು ಮುಂದಿನ ಕೋಣೆಯ ಹತ್ತಿರಕ್ಕೆ ಕರೆದುಕೊಂಡುಹೋದರು. ಬಾಗಿಲ ಹತ್ತಿರ ನಿಂತು "ಶ್ರೀನಿವಾಸರಾವ್ !" ಎಂದು ಕೂಗಿ ಬಾಗಿಲು ತಟ್ಟಿದರು. ಬಾಗಿಲು ತೆರೆಯಿತು. ಒಳಗೆ ಓದುತ್ತಿದ್ದ ವಿದ್ಯಾರ್ಥಿ ಓದು ನಿಲ್ಲಿಸಿ, ಪುಸ್ತಕವನ್ನು ಕೈಯಲ್ಲೇ ಹಿಡಿದು ಎದ್ದುನಿಂತ. ರಾಯರು ಇವರು "ಮಿ|| ರಾಮಸ್ವಾಮಿ ಅಂತ. ಏಳು ವರುಷದ ಹಿಂದೆ ಇದೇ ರೂಮಿನಲ್ಲಿ ಓದಿ ಬಿ. ಎ. ಪಾಸು ಮಾಡಿದರು. ನೀವು ನೋಡದೇ ಇರೋದು ಇವರನ್ನೆ!" ಎಂದು ನಕ್ಕು ಗೋಡೆಯ ಕಡೆ ತಿರುಗಿದರು.

ರಾಮಸ್ವಾಮಿ ಆ ಕಡೆ ನೋಡಿದ. ಅವನು ಹಿಂದೆ ನೋಡಿದ್ದ ಎಂಟು ಮಂದಿ ವಿದ್ಯಾರ್ಥಿಗಳ ಫೋಟೊಗಳು ಅಲ್ಲಿ ಹಾಗೆಯೇ

ಇದ್ದುವು. ಆದರೆ ಅದರ ಮುಂದೆ ಸ್ವಲ್ಪ ಸ್ಥಳ ಬಿಟ್ಟು, ಮತ್ತೆ ಮೂರು ಹೊಸ ಫೋಟೋಗಳು ಅದೇ ಸಾಲಿನಲ್ಲಿವೆ! ನಡುವೆ ಉಳಿದಿರುವ ಸ್ಥಳ ತನ್ನದು, ಎಂಬುದು ನೋಡಿದ ಕೂಡಲೆ ಅವನಿಗೆ ಹೊಳೆಯಿತು.

ರಾಯರು ರಾಮುಸ್ವಾಮಿಯ ಕಡೆಗೆ ತಿರುಗಿ "ನೋಡಿದಿರಾ, ಆ ಜಾಗ ಹಾಗೇ ಇದೆ. ನೀವು ಅದನ್ನ ಭರ್ತಿ ಮಾಡಬೇಕು" ಎಂದು ನಕ್ಕರು.

ರಾಮುಸ್ವಾಮಿ "ಆಗಲಿ" ಎಂದು ನಕ್ಕ.

ರಾಯರು "ಬನ್ನಿ" ಎಂದು ಕೋಣೆಯಿಂದ ಹೊರಗೆ ಹೊರಟು ಮತ್ತೆ ಪಡಸಾಲೆಯನ್ನು ಪ್ರವೇಶಿಸಿದರು. ರಾಮುಸ್ವಾಮಿ ಅವರ ಹಿಂದೆಯೇ ಹೋಗಿ ಪಡಸಾಲೆಯಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡ.

ರಾಯರು ನೇರವಾಗಿ ಒಳಗೆ ಹೋಗಿ, ಪುನಃ ಬಂದರು.

ಸೋಫಾದ ಮೇಲೆ ಕುಳಿತುಕೊಳ್ಳುತ್ತ "ಯಾವತ್ತು ಬಂದಿರಿ?" ಎಂದು ಕೇಳಿದರು.

ರಾಮುಸ್ವಾಮಿ "ನಿನ್ನೆ ಮಧ್ಯಾಹ್ನ" ಎಂದ.

ಅಷ್ಟು ಹೊತ್ತಿಗೆ ಮಾಧವರಾಯರ ಮೊಮ್ಮಗಳು ಸರಸು ಎರಡು ಲೋಟ ಕಾಫಿ ತಂದಳು. ಕಾಫಿಯ ಬಟ್ಟಲನ್ನು ತೆಗೆದುಕೊಳ್ಳುತ್ತ ರಾಮುಸ್ವಾಮಿ "ಇವಳ್ಯಾರು? ಸರಸು ಅಲ್ಲವೆ?" ಅಂದ.

ರಾಯರು "ಹೌದು!" ಎಂದರು.

"ಎಷ್ಟು ದೊಡ್ಡೋಳಾಗಿಬಿಟ್ಟದಾಳೆ! ಎಷ್ಟೊವರ್ಷ ಇವಳಿಗೆ?"

"ಹದಿಮೂರು ತುಂಬಿತು"

"ಓ"

"ಈಗ ನೀವು ಎಲ್ಲಿರೋದು?"

"ಇಲ್ಲೀಗೆ ವರ್ಗ ಆಯಿತು. ಇವತ್ತು ಡ್ಯೂಟಿ ರಿಪೋರ್ಟ್ ಕೂಡ ಕೊಟ್ಟಿದ್ದಾಯ್ತು"

"ಯಾವ ಆಫೀಸು? ನಾನು ಮರೆತ್ಬಿಟ್ಟಿದೀನಿ"

“‘ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಫ್ ಕೋ-ಆಪರೇಟಿವ್ ಸೊಸೈಟೀಸ್ ಆಫೀಸು’’

“ಸೊಸೈಟಿ ಇನ್‌ಸ್ಪೆಕ್ಟರ ಕೆಲಸ ಅನ್ನಿ. ಇಲ್ಲೇನೊ ಅಥವಾ ಊರೂರು ಸುತ್ತಬೇಕೊ?”

“ಸದ್ಯಕ್ಕೆ ಇಲ್ಲೇ ಇರಬೇಕು. ಆಮೇಲೆ ಏನ್ಮಾಡ್ತಾರೊ ಗೊತ್ತಿಲ್ಲ; ಈಗೇನೊ ಸುತ್ತೋ ಹಾಗಿಲ್ಲ.”

“ನೀವು ಒಬ್ಬರೇ ಬಂದರೋ ಹೆಂಡತೀನ್ನೂ ಕರಕೊಂಡು ಬಂದರೊ?”

“ಇಲ್ಲ ಒಬ್ಬನೇ ಬಂದೆ”

“ಹಾಗಾದರೆ ಹೆಂಡತೀನ್ನ ತವರುಮನೇಲಿ ಬಿಟ್ಟಿದೀರೇನು?”

“ಹ್ಞು.”

“ಎಷ್ಟು ಮಕ್ಕಳು?”

“ಏನೂ ಇಲ್ಲ”

“ನಿಜವಾಗೂ?”

“ಒಂದಾಗಿತ್ತು, ಹೋಯ್ತು. ಸದ್ಯಕ್ಕೇನೂ ಇಲ್ಲ”

“ಆಗುತ್ತೆ ಆಗುತ್ತೆ. ಆಗಲಿ ಒಂದು ಡಜನ್!”

“ಸರಿ ಸರಿ.”

“ಯಾವತ್ತು ಕರಸ್ತೀರಿ ಹೆಂಡತೀನ?”

“ಮನೆ ಮಾಡಬೇಕಲ್ಲ, ಸರಿಯಾದ ಮನೆ ನೋಡಿ ಕರಕೊಂಡು ಬರ್ತೀನಿ. ನಿಮಗೆ ತಿಳಿದ್ಹಾಗೆ ಯಾವುದಾದರೂ ಸಣ್ಣ ಮನೆ ಖಾಲಿ ಇದೆಯೇನು?”

“ನೋಡಿದಿರಾ, ನೀವೆಂಥ ಕೆಲಸ ಮಾಡಿದಿರಿ. ಮೂರು ದಿನ ಮುಂಚೆ ಬಂದಿದ್ದರೆ ನಮ್ಮ ಮನೇನೇ ಖಾಲಿ ಇತ್ತು, ಕೊಡ್ತಿದ್ದೆ. ನಾನೊಂದು ಔಟ್ ಹೌಸ್ ಕಟ್ಟಿಸಿದೀನಿ. ನಮ್ಮ ಹಳೇ ವಿಕ್ಟೋರಿಯಾ ಗಾಡಿ ಇಟ್ಟಿತ್ತಲ್ಲ, ಆ ಷೆಡ್ ನೋಡಿದ್ದಿರಾ ನೀವು?”

“ನೋಡಿದ್ದೆ.”

"ಅದನ್ನ ಸ್ವಲ್ಪ ಬಡಾಯಿಸಿ ಒಂದು ಔಟ್‌ಹೌಸ್ ಮಾಡಿಸಿದೆ. ಚೆನ್ನಾಗಾಯ್ತು. ಹದಿನೈದು ರೂಪಾಯಿ ಬಾಡಿಗೆ. ಮೊನ್ನೆ ಶಾರದಾ ವಿಲಾಸಾ ಹೈಸ್ಕೂಲ್ ಮೇಷ್ಟರೊಬ್ಬರು ಗೊತ್ತುಮಾಡ್ಕೊಂಡು ಹೋದರು. ನಾಳೆ ಬರ್‍ತಾರೆ ಅವರು!"

"ಅಯ್ಯೋ, ಇದು ಸಿಕ್ಕಿದ್ದರೆ ನನಗೆ ತುಂಬ ಅನುಕೂಲವಾಗ್ತಾ ಇತ್ತು"

"ಏನು ಮಾಡೋದು ಹೇಳಿ. ಆಗಲಿ, ಪರವಾಯಿಲ್ಲ ನೋಡೋಣ ಸರಿಯಾದ್ದು ಯಾವುದಾದರೂ ನನ್ನ ಕಣ್ಣಿಗೆ ಬಿದ್ದರೆ ಹೇಳ್ತೀನಿ"

"ಸರಿ, ನೋಡಿ. ಇಲ್ಲೇ ಹತ್ತಿರವಾಗಿ ಯಾವುದಾದರೂ ಸಿಕ್ಕಿದರೆ ಅನುಕೂಲ" ಎಂದು ರಾಮುಸ್ವಾಮಿ ಖಾಲಿಯಾಗಿದ್ದ ಕಾಫಿಯ ಬಟ್ಟಲನ್ನು ಮುಂದಿದ್ದ ಟೀಪಾಯಿಯ ಮೇಲಿಟ್ಟ.

"ಸರಿ, ನಾನು ಇನ್ನು ಬರ್‍ತೀನಿ. ಲಕ್ಷಮ್ಮನೋರು ಒಳಗಿದಾರೇನು?"

"ಇದಾಳೆ."

"ಹೇಳಿಬಿಡಿ ನಾನು ಊರಿಗೆ ಬಂದಿರೋ ವಿಷಯಾನ."

"ಆಗಲಿ. ನಿಮ್ಮ ಹೆಂಡತಿ ಬಂದ ಕೂಡಲೆ ಕರಕೊಂಡು ಬನ್ನಿ ನಮ್ಮನೇಗೆ"

"ಆಗಲಿ. ಮನೆ ಒಂದು ಸಿಕ್ಕಲಿ"

"ಸಿಕ್ಕದೇ ಏನು, ಸಿಕ್ಕುತ್ತೆ"

* * * * *

ಮನೆ ಸಿಕ್ಕಿತು. ಸರಿಯಾದ ಮನೆಯೇ ಸಿಕ್ಕಿತು. ಡಿ. ಸುಬ್ಬಯ್ಯ ರಸ್ತೆಯಲ್ಲಿ ನೂರಡಿರಸ್ತೆಗೆ ಹತ್ತಿರದಲ್ಲಿಯೇ ಅಚ್ಚುಕಟ್ಟಾದ ಮನೆ. ಒಂದು ರೂಮು, ಒಂದು ಹಾಲು, ಅಡಿಗೆಮನೆ, ಬಚ್ಚಲುಮನೆ ಎಲ್ಲ ವಿಶಾಲವಾಗಿವೆ. ದೀಪ ಇದೆ; ನಲ್ಲಿಯ ಜೊತೆಗೆ ಬಾವಿಯೂ ಇರುವುದರಿಂದ ನೀರಿನ ಅನುಕೂಲ ಚೆನ್ನಾಗಿದೆ.

ಮನೆ ಗೊತ್ತು ಮಾಡಿಕೊಂಡ ಮಾರನೆಯ ದಿನವೇ ರಾಮುಸ್ವಾಮಿ ಹೊಳೆನರಸೀಪುರಕ್ಕೆ ಕಾಗದ ಹಾಕಿದ. 'ಮನೆ ಗೊತ್ತುಮಾಡಿದ್ದೇನೆ.

ಚೆನ್ನಾಗಿದೆ. ನಾನು ಶುಕ್ರವಾರ ಸಂಜೆಯ ರೈಲಿನಲ್ಲಿ ಹೊರಟು ಬರುತ್ತೇನೆ. ಭಾನುವಾರ ಬೆಳಗ್ಗೆ ಅಲ್ಲಿಂದ ಹೊರಡಬೇಕು. ಆದ್ದರಿಂದ ಎಲ್ಲ ಏರ್ಪಾಟು ಮಾಡಿಕೊ' ಎಂದು ಗೌರಿಗೂ, ಅದೇ ವಿಷಯವನ್ನು ಮಾವನವರಿಗೆ ಹೇಗೆ ತಿಳಿಸಬೇಕೊ ಹಾಗೆ ತಿಳಿಸುವ ಒಂದು ಕಾಗದವನ್ನು ಶಾಮಣ್ಣನವರಿಗೂ ಬರೆದು ಪೋಸ್ಟ್ಮಾಡಿದ.

ಕಾಗದ ನೋಡಿ, ಗೌರಿಗೆ ತುಂಬ ಸಂತೋಷವಾಯಿತು. ಆ ಶುಕ್ರವಾರ ಬೇಗ ಬರಲಪ್ಪ, ಎಂದು ಎಲ್ಲ ಸಿದ್ಧ ಮಾಡಿಕೊಂಡು ಕಾಯುತ್ತಿದ್ದಳು.

ರಾಮಸ್ವಾಮಿ ಕಾಗದ ಬರೆದಿದ್ದಂತೆಯೇ ಶುಕ್ರವಾರ ರಾತ್ರಿ ಒಂಬತ್ತೂಮುಕ್ಕಾಲು ಗಂಟೆಗೆ ರೈಲ್ವೆ ನಿಲ್ದಾಣದಿಂದ ಮನೆಗೆ ಬಂದ.

ಊಟ ಆದ ಮೇಲೆ ಸ್ವಲ್ಪ ಹೊತ್ತು ಮಾವನವರೊಡನೆ ಮಾತಾಡಿ ಅನಂತರ ಮಲಗಿಕೊಳ್ಳಲು ಕೋಣೆಗೆ ಹೋದ. ಅಷ್ಟು ಹೊತ್ತಿಗೆ ಗೌರಿ ಕೋಣೆಯಲ್ಲಿ ಎರಡು ಹಾಸಿಗೆ ಹಾಸಿ, ಎಲೆ ಅಡಕೆ ತಟ್ಟೆ ತರಲು ಒಳಗೆ ಹೋಗಿದ್ದಳು. ರಾಮಸ್ವಾಮಿ ಒಂದು ಹಾಸಿಗೆಯ ಮೇಲೆ ಬಿದ್ದುಕೊಂಡ; ಸ್ವಲ್ಪ ಹೊತ್ತಿನಲ್ಲಿಯೇ ಗೌರಿ ಎಲೆಅಡಕೆ ತಟ್ಟೆಯನ್ನು ಹಿಡಿದು ಕೋಣೆಯನ್ನು ಪ್ರವೇಶಿಸಿದಳು. ಬಾಗಿಲು ಹಾಕಿಕೊಂಡು ತಟ್ಟೆಯೊಡನೆ ಬಂದು ಪಕ್ಕದಲ್ಲಿ ಕುಳಿತುಕೊಂಡಳು.

ಎಲೆ ಮಡಿಸಿ ಕೊಡುತ್ತ "ಮನೆ ಹೇಗಿದೆ ?" ಎಂದು ಕೇಳಿದಳು.

"ಚೆನ್ನಾಗಿದೆ."

"ಆಫೀಸಿಗೆ ದೂರಾನ ?"

"ಇಲ್ಲ. ತುಂಬ ಹತ್ತಿರ. ಒಂದು ಒಂದೂವರೆ ಫರ್ಲಾಂಗು ಆಗಬಹುದು ಅಷ್ಟೆ."

"ಅನುಕೂಲವಾಗಿದೆಯಾ ?"

"ಫಸ್ಟ್ಕ್ಲಾಸಾಗಿದೆ, ಎಲ್ಲ ಬರೆದಿದ್ನಲ್ಲ ಕಾಗದದಲ್ಲಿ ?"

"ಸರಿ, ಬರೆದಿದ್ದಿರಿ. ನೀರು ಯಾವಾಗಲೂ ಇರುತ್ತ್ಯೆ ?"

"ಬೆಳಗ್ಗೆ ಎಂಟೆಂಟೂವರೆ ವರೆಗೂ ಇರುತ್ತೆ. ಆಮೇಲೆ ಮಧ್ಯಾಹ್ನ ಮೂರು ಗಂಟೆಗೆ ಬರುತ್ತೆ. ಪುನಃ ಬೆಳಗ್ಗೆ ವರೆಗೂ ಇರುತ್ತೆ.''

"ಪರವಾಯಿಲ್ಲ ಹಾಗಾದರೆ"

"ಅಲ್ಲೇನು ಅಡಿಗೆಗಿಡಿಗೇ ಕೆಲಸಕ್ಕೆ ಯಾರನ್ನೂ ಇಟ್ಟುಕೊಳ್ಳ ಬೇಕಾಗಿಲ್ಲ. ಎಲ್ಲ ಅನುಕೂಲವಾಗಿದೆ."

"ಅಡಿಗೆ ಕೆಲಸಕ್ಕೆ ಯಾಕೆ! ನಂಗೇನಾಗಿದೆ ಧಾಡಿ."

"ಕಸಮುಸುರೇಗೆ? ಅದಕ್ಕೂ ಬೇಡ ಅಲ್ಲವೆ?"

"ಊ್ಞ. ಕಸಮುಸುರೇಗೆ ಒಬ್ಬಳು ಬೇಕೇ ಬೇಕು."

"ಆ ಊರಲ್ಲಿ ಕಸಮುಸುರೆ ಮಾಡೋಕೆ ಯಾರೂ ಸಿಕ್ಕೋದೇ ಇಲ್ಲ ವಂತೆ!"

"ಊ್ಞ. ಸುಳ್ಳು! ನಾನೇನು ಎಳೇ ಮಗೂಂತ ತಿಳಿಕೊಂಡಿರೊ! ಹಾಸ್ಯಮಾಡೋಕೆ!"

"ಅಲ್ಲ. ಎಳೆಮಗು ತಾಯಿ ಆಗೋಳು!"

"ಹೋಗಿ ನೀವು" ಎಂದು ತಟ್ಟೆಯನ್ನು ಆಚೆ ತೆಗೆದಿಟ್ಟಳು.

"ಯಾಕೆ?"

"ಎಲ್ಲ ಸುಳ್ಳು."

* * * * *

ಪಂಡಿತರ ಭವಿಷ್ಯ ಸುಳ್ಳಾಗಲಿಲ್ಲ. ಕಣಜದ ಹುಳ ಗಂಡ ಹೆಂಡತಿ ಮಲಗುವ ಕೋಣೆಯಲ್ಲಿ ಗೂಡು ಕಟ್ಟಿ 'ಭವಿಷ್ಯ ನಿಜ' ಎಂದು ಹೇಳಿತು. ಮೈಸೂರಿಗೆ ಬಂದ ಒಂದು ವರುಷದೊಳಗಾಗಿ ಗೌರಿಗೆ ನಾಲ್ಕು ತಿಂಗಳಾ ಯಿತು.

ಊರಿಗೆ ಬಂದ ಮಾರನೆಯ ದಿನವೇ ರಾಮಸ್ವಾಮಿ ಗೌರಿಯನ್ನು ಕರೆದುಕೊಂಡು ಮಾಧವರಾಯರ ಮನೆಗೆ ಹೋಗಿದ್ದ. ಮಾಧವರಾಯರು ಲಕ್ಷ್ಮಮ್ಮನವರು ಈ ದಂಪತಿಗಳನ್ನು ನೋಡಿ ಸಂತೋಷಪಟ್ಟರು.

ರಾಯರಂತೂ "ರಾಮಸ್ವಾಮಿ, ನಿಮ್ಮೊಬ್ಬರದೇ ಫೋಟೊ ತಂದು ಕೊಡಬೇಡಿ. ಇಬ್ಬರೂ ಇರೋ ಫೋಟೊ ತೆಗಸಿಕೊಡಿ. ಅದನ್ನೇ ಹಾಕ್ತೀನಿ. ಯಾಕೇಂದ್ರೆ, ಕಾನ್ವೊಕೇಷನ್ನಿಗೆ ಇಬ್ಬರೂ ಬರಬೇಕೂಂತ ಹೇಳಿದ್ದೆ. ಬರ್ಲಿಲ್ಲ. ಈಗ ಇಬ್ಬರ ಫೋಟೋನಾದರೂ ಹಾಕೋಣ!"

ಎಂದು ನಕ್ಕರು. ರಾಮಸ್ವಾಮಿಯೂ ನಕ್ಕು "ಆಗಲಿ" ಎಂದ. ಆದರೆ ಎಂಟು ಹತ್ತು ತಿಂಗಳಾದರೂ ರಾಯರ ಇಷ್ಟವನ್ನು ಅವನು ನೆರವೇರಿಸ ಲಿಲ್ಲ ಗೌರಿಯೂ ಹೇಳಿ ಹೇಳಿ ಸಾಕಾದಳು. ಒಂದನೆಯ ತಾರೀಕು ಬಂದ ಕೂಡಲೆ "ನಾಳೆ ಹೋಗೋಣಾಂದ್ರೆ ಸ್ಟೂಡಿಯೋಕ್ಕೆ" ಎಂದು ಗೋಗರೆಯುತ್ತಿದ್ದಳು. ರಾಮಸ್ವಾಮಿ ಏನಾದರೂ ನೆಪ ಹೇಳಿ ದಿನ ಕಳೆಯುತ್ತಿದ್ದ. ಅದುವರೆಗೆ ತಾವಿಬ್ಬರೇ ಒಂದು ಫೋಟೊ ತೆಗಸಿಕೊಂಡಿ ರಲಿಲ್ಲ. ಹಾಗೆ ಒಂದು ಫೋಟೊ ತೆಗಸಿಕೊಳ್ಳಬೇಕೆಂಬ ಇಷ್ಟ ಅವನಿಗೂ ಇತ್ತು. ಆದರೆ ಏಕೊ ಅದಕ್ಕೆ ಇನ್ನೂ ಕಾಲ ಬಂದಿರಲಿಲ್ಲ.

ಇನ್ನೊಂದು ದಿನ ಮಾಧವರಾಯರ ಮನೆಗೆ ಹೋಗಿದ್ದಾಗ ಅವರು ಪುನಃ ಜ್ಞಾಪಿಸಿದರು. ರಾಮಸ್ವಾಮಿಗೆ ಅವರು ಐದಾರು ಬಾರಿ ಹಾಗೆ ಜ್ಞಾಪಿಸಿದ್ದರು; ಕೇಳಿಕೊಂಡಿದ್ದರು. ರಾಮಸ್ವಾಮಿ 'ಇಲ್ಲ' ಎಂದು ಎಂದೂ ಹೇಳಿರಲಿಲ್ಲ. ಆದರೆ ಎಷ್ಟು ದಿನಗಳಾದರೂ ರಾಯರ ಇಷ್ಟ ನೆರವೇರಲಿಲ್ಲ. ಅವರು "ನೀವು ಹೀಗೇ ಮಾಡ್ತಾ ಇದ್ದರೆ ಒಂದು ಕ್ಯಾಮರಾ ತಂದು ನಾನೇ ಫೊಟೊ ತೆಗೆದುಬಿಡ್ತೀನಿ, ಅಷ್ಟೆ. ಅದು ಹೇಗಾದರೂ ಬರ್ಲಿ, ಅದನ್ನೇ ಎನ್ಲಾರ್ಜ್ ಮಾಡಿಸಿ ರೂಮಿನಲ್ಲಿ ಹಾಕಿ ಬಿಡ್ತೀನಿ!" ಎಂದು ಹೆದರಿಸಿದರು. ರಾಮಸ್ವಾಮಿ "ಸದ್ಯ, ಹಾಗೆ ಮಾತ್ರ ಮಾಡಬೇಡಿ. ಬೇಗ ತೆಗಸ್ತೀನಿ" ಎಂದು ಹೇಳಿ ನಗುತ್ತಾ ಗೌರಿಯೊಡನೆ ಹೊರಟ.

ಆದರೆ ಬೇಗ ತೆಗಸಲೇ ಇಲ್ಲ. ಮತ್ತೆ ಮೂರುತಿಂಗಳು ಕಳೆದು ಹೋದುವು. ಮಾಧವರಾಯರು ಮದರಾಸಿನಲ್ಲಿದ್ದ ತಮ್ಮ ಎರಡನೆಯ ಮಗಳ ಮನೆಗೆ ಹೋಗಿ ಲಕ್ಷ್ಮಮ್ಮನವರ ಕಣ್ಣಿನ ಚಿಕಿತ್ಸೆಗೋಸ್ಕರ ಅಲ್ಲೇ ಮೂರು ತಿಂಗಳು ಇದ್ದುದರಿಂದ ಆ ಫೋಟೊವಿನ ದರದು ಕಡಮೆಯಾ ಗಿತ್ತು. ಆದರೂ ಗೌರಿ ಬಿಡಲಿಲ್ಲ.

ಒಂದು ಭಾನುವಾರ ಮಧ್ಯಾಹ್ನ "ನೀವು ಈಗ ತೆಗಸಿದರೆ ತೆಗೆದ ಹಾಗೆ. ಇಷ್ಟೇ ಇದ್ದರೆ ಆಮೇಲೆ ನಾನೊಪ್ಪಲ್ಲ" ಎಂದಳು.

ರಾಮಸ್ವಾಮಿ "ಯಾಕೆ?" ಅಂದ.

"ಯಾಕೊ ಹೋಗಿ. ಗೊತ್ತಿದ್ದರೂ ನನ್ನ ಕೇಳಬೇಡಿ."

"ನನಗೆ ಗೊತ್ತಿಲ್ಲ ಕಣೆ"

"ಊ್ಞ. ಆಟ ಆಡಬೇಡಿ."

"ಓ. ಗೊತ್ತಾಯ್ತು. ಈಗ ಎಷ್ಟು ತಿಂಗಳು ಗೌರಿ?"

"ಹೋಗಿ ನನ್ನ ಕೇಳಬೇಡಿ"

"ಯಾಕೆ?"

"ನಿಮಗೆ ಗೊತ್ತಿಲ್ಲವೇನೊ!"

"ಇಲ್ಲ"

"ಊ್ಞ"

"ಮೂರು ತಿಂಗಳು ಆಯ್ತು ಅಲ್ಲ?"

"ಇನ್ನೂ ನೀವು ಹೋದ ತಿಂಗಳಲ್ಲಿದೀರಿ ಅಂತ ಕಾಣುತ್ತೆ"

"ಹೋಗಲಿ ಬಿಡು. ನಾಳೆ ಫಸ್ಟು ಖಂಡಿತ ತೆಗಸಿಬಿಡೋಣ."

ರಾಮಸ್ವಾಮಿ ಈ ಬಾರಿ ಮಾತಿಗೆ ತಪ್ಪಲಿಲ್ಲ. ಮೊದಲನೆಯ ತಾರೀಕಿನ ಸಂಜೆಯೇ ಗೌರಿಯೊಡನೆ ರಾಮನ್ ಸ್ಟುಡಿಯೋಕ್ಕೆ ಹೋಗಿ ಒಂದು ಫೋಟೊ ತೆಗಸಿದ. ಮಾರನೆಯ ದಿನವೇ ಅದರ ಪ್ರೂಫು ನೋಡಿದಾಗ ಗೌರಿ "ಮದುವೆ ಆಗಿ ಹನ್ನೆರಡು ವರುಷ ಆದರೂ ಈಗತಾನೆ ಮದುವೆ ಆದೋರಹಾಗಿದೀವಿ" ಎಂದು ನಕ್ಕಳು. ರಾಮಸ್ವಾಮಿ "ಹೌದು, ಆದರೆ ಮದುವೆ ಆದಾಗ ಹೀಗೇ ಫೋಟೊ ತೆಗಸಿದ್ದರೆ ಚೆನ್ನಾಗಿರ್ತಿತ್ತು" ಎಂದ.

"ಯಾಕೆ? ಈವಾಗ ಚೆನ್ನಾಗಿಲ್ಲವೆ?"

"ಇಲ್ಲ, ಆವಾಗ ನೀನು ಹೇಗಿದ್ದಿ ಜ್ಞಾಪಿಸ್ಕೊ"

"ಊ್ಞ, ಗೊತ್ತಾಯ್ತು. ಈವಾಗ ದಪ್ಪ ಆಗಿಬಿಟ್ಟಿದೀನೀಂತ ನಿಮಗೆ ಅಸಮಾಧಾನ. ಅದಕ್ಕೇ ಫೋಟೊ ತೆಗಸ್ಕೊಳ್ಳೋಕೆ ಹಿಂಜರಿದಿರೀಂತ ಕಾಣುತ್ತೆ. ಅಲ್ಲವೆ?"

"ಇಲ್ಲ"

"ನಂಗೆಲ್ಲ ಗೊತ್ತು. ಹೋಗಲಿ, ಇದಕ್ಕೇನಾದರೂ ಔಷಧ ಇದ್ದರೆ ತಂದುಕೊಡಿ. ಅದೇನಾದರೂ ತೆಳ್ಳಗೆ ಮಾಡುತ್ತೊ ಏನೊ, ನೋಡೋಣ"

"ಛೆ ಛೆ. ಅದಕ್ಕಲ್ಲ ಗೌರಿ ನಾನು ಹೇಳಿದ್ದು. ಆವಾಗ ತೆಗಸಿದ್ದರೆ ಇಬ್ಬರಿಗೂ ಹತ್ತು ಹನ್ನೆರಡ್ವರ್ಷ ಕಡಮೆ ಆಗಿರ್‍ತಿತ್ತು, ಇನ್ನೂ ಚೆನ್ನಾಗಿರ್‍ತಿತ್ತು, ಅಂತ."

"ಸರಿ. ಹಾಗಾದರೆ ಈವಾಗ ಚೆನ್ನಾಗಿಲ್ವೊ?"

"ಚೆನ್ನಾಗಿದೆ."

ಫೋಟೊ ತೆಗಸಿದ ಎಂಟು ದಿನಗಳೊಳಗಾಗಿ ಅದರ ಒಂದು ಕಾಪಿ ಕಟ್ಟು ಹಾಕಿಸಿಕೊಂಡು, ಮಾಧವರಾಯರ ಬಂಗಲೆಯ ಕೋಣೆ ಸೇರಿತು. ಮಾಧವರಾಯರೂ "ಚೆನ್ನಾಗಿದೆ, ಚೆನ್ನಾಗಿದೆ" ಎಂದು ತಲೆ ಆಡಿಸಿದರು.

* * * * *

ಗೌರಿಗೆ ನಾಲ್ಕು ತಿಂಗಳು ತುಂಬಿದ ಕೂಡಲೆ ರಾಮುಸ್ವಾಮಿ ಮಾವನವರಿಗೆ ಕಾಗದ ಬರೆದ. ಅಳಿಯನ ಕಾಗದ ಬಂದ ಮಾರನೆಯ ದಿನವೇ ಅವರು ಉತ್ತರ ಬರೆದರು. ಜೊತೆಯಲ್ಲಿ ಗೌರಿಗೂ ಒಂದು ಕಾಗದ ಬರೆದು ಇಟ್ಟಿದ್ದರು.

ರಾಮುಸ್ವಾಮಿಗೆ ಬರೆಯುತ್ತ 'ಗೌರಿಗೆ ಸ್ವಲ್ಪ ಹುಷಾರಾಗಿರು ಅಂತ ಹೇಳಿ. ಬೇಕಾದರೆ ಚಿಕ್ಕಮ್ಮನನ್ನು ಅಲ್ಲಿಗೆ ಕಳಿಸಿಕೊಡುತ್ತೇನೆ. ನನ್ನ ಪಾಡು ಹೇಗಾದರೂ ಆಗುತ್ತದೆ. ಅಲ್ಲೋ ಇಲ್ಲೋ ಇದ್ದು ಕಾಲಹಾಕ ಬಹುದು. ಮೊದಲನೆಯ ಬಾರಿ ಹಾಗಾಗಿರುವುದರಿಂದ ಈಗ ಹುಷಾರಾಗಿರುವುದು ಅಗತ್ಯ. ಆರು ತಿಂಗಳು ತುಂಬಿದ ಕೂಡಲೆ ಇಲ್ಲಿಗೆ ಕಳಿಸಿ. ಇಲ್ಲಿ ಅನುಕೂಲವಾಗಿದೆ. ಚಿಕ್ಕಮ್ಮ ಇದಾಳೆ, ಓಡಾಡುವುದಕ್ಕೆ ನಾನಿದೀನಿ. ಅಲ್ಲೇ ಆದರೆ ನಿಮಗೆ ತೊಂದರೆ ಆಗಬಹುದು' ಎಂದು ತಿಳಿಸಿದ್ದರು.

ರಾಮುಸ್ವಾಮಿ 'ಏನು ಪರವಾಯಿಲ್ಲ. ಗೌರಿ ಹುಷಾರಾಗಿದಾಳೆ. ಆರು ತಿಂಗಳು ಕಳೀಲಿ, ನೋಡಿಕೊಳ್ಳೋಣ' ಎಂದು ಉತ್ತರ ಬರೆದ.

ಆರು ತಿಂಗಳು ಕಳೆಯಿತು. ಆದರೆ ರಾಮುಸ್ವಾಮಿ ಗೌರಿಯನ್ನು ತವರುಮನೆಗೆ ಕಳಿಸಲಿಲ್ಲ. ಚಿಕ್ಕಮ್ಮನನ್ನೂ ಕರಸಿಕೊಳ್ಳಲಿಲ್ಲ.

ಗೌರಿಯ ಕೈಯಲ್ಲಿ ಕೆಲಸವೇ ಸಾಗುತ್ತಿರಲಿಲ್ಲ. ಊಟವಂತೂ

ಸ್ವಲ್ಪವೂ ಸೇರುತ್ತಿರಲಿಲ್ಲ. ಬಲವಂತವಾಗಿ ತಿಂದರೆ ಸ್ವಲ್ಪ ಹೊತ್ತಿನಲ್ಲಿಯೇ ಒಂದಗುಳೂ ಬಿಡದೆ ಎಲ್ಲ ವಾಂತಿಯಾಗಿಬಿಡುತ್ತಿತ್ತು. ಏಕೊ ಆಗಾಗ ಕೈಕಾಲೇ ಹಿಡಿದುಬಿಡುತ್ತಿತ್ತು.

ಒಂದು ದಿನ ಗೌರಿ "ಚಿಕ್ಕಮ್ಮನ್ನ ಯಾಕೆ .ಕರಸಬಾರದು ?" ಎಂದುದಕ್ಕೆ "ಯಾರೂ ಬೇಡ. ಬೇಕಾದರೆ ಬೆಂಗಳೂರಿನಲ್ಲಿ ಇಟ್ಟುಕೊಂಡ ಹಾಗೆ ಯಾರಾದರೂ ಒಬ್ಬರನ್ನ ಅಡಿಗೆಗೆ ಇಟ್ಟುಕೊಳ್ಳೋಣ'' ಎಂದುಬಿಟ್ಟ.

ಗೌರಿ "ಅದೇಕೆ ? ಊರಿಗೆ ಕಳಿಸಿ ಅಂದರೆ ಬೇಡ ಅಂತೀರಿ ; ಚಿಕ್ಕಮ್ಮನ್ನ ಕರಸೋಣಾಂದ್ರೆ ಅದೂ ಬೇಡ ಅಂತೀರಿ. ಯಾಕೆ, ನಮ್ಮಣ್ಣ ನಿಮಗೇನು ಮಾಡಿದರು ?" ಎಂದು ಕೇಳಿದಳು.

"ನಿಮ್ಮಣ್ಣ ಏನೂ ಮಾಡಲಿಲ್ಲ. ಪಾಪ, ಅವರೇನು ಮಾಡ್ತಾರೆ !"

"ಮತ್ತೆ ಯಾಕೆ ಅಲ್ಲಿಗೆ ಕಳಿಸೋದು ಬೇಡ ಅಂದಿರಿ ?"

"ಇಲ್ಲೇ ಅನುಕೂಲವಾಗಿದೆ, ಆದ್ದರಿಂದ"

"ಏನು ಅನುಕೂಲ ?"

"ಕೃಷ್ಣಮೂರ್ತಿ ಇಲ್ಲವೇನು ?"

"ಅವರು ಯಾವ ಆಸ್ಪತ್ರೇಲಿ ಇರೋದು ?''

"ಕೆ. ಆರ್. ಹಾಸ್ಪಿಟಲ್‌ನಲ್ಲಿ—ಅವನು ಅಸಿಸ್ಟೆಂಟ್ ಸರ್ಜನ್ ಈಗ !"

"ಹೌದು. ಅಲ್ಲಿದ್ರೆ ?''

"ಅವನಿಗೆ ಲೇಡಿ ಡಾಕ್ಟರು, ಹೆಡ್‌ನರ್ಸು, ಎಲ್ಲ ತುಂಬ ಬೇಕಾದೋರು. ಆದ್ದರಿಂದ ಇಲ್ಲೇ ಅನುಕೂಲವಾಗಿದೇಂತ ಬರೆದೆ ನಿಮ್ಮಣ್ಣಂಗೆ, ಅಷ್ಟೆ"

"ಹಾಗೇ ಬರೆದಿದೀರ ?''

"ಹೌದು. ಇನ್ನೇನೂ ಬರೆದಿಲ್ಲ, ದೊಡ್ಡಾಸ್ಪತ್ರೆ, ನನ್ನ ಸ್ನೇಹಿತ ಡಾಕ್ಟರ್ ಕೃಷ್ಣಮೂರ್ತಿ ಅಂತ ಇದಾರೆ. ಅವರು ಈಗ ಕೆ. ಆರ್. ಹಾಸ್ಪಿಟಲ್‌ನಲ್ಲಿ ಅಸಿಸ್ಟೆಂಟ್ ಸರ್ಜನ್ ಆಗಿದಾರೆ ಅವರಿಗೆ ಲೇಡಿ

ಡಾಕ್ಟರು ತುಂಬ ಗುರುತು. ಆದ್ದರಿಂದ ಸುಮ್ಮನೆ ಅಲ್ಲಿಗೆ ಯಾಕೆ ಕಳಿಸ ಬೇಕು, ಬೇಡ ಇಲ್ಲೇ ಇರಲಿ, ಅಂತ ಬರೆದಿದೇನೆ.''

''ಸರಿ. ಆದರೆ ಚಿಕ್ಕಮ್ಮನ್ನ ಯಾಕೆ ಕರಸಬಾರದು?"

"ಬೇಡ, ಅವರನ್ನ ಕರಸಿದರೆ ನಿಮ್ಮ ತಂದೆಗೆ ತುಂಬ ತೊಂದರೆ. ಯಾಕೆ, ನಾವು ಯಾರನ್ನಾದರೂ ಒಬ್ಬ ಹೆಂಗಸನ್ನ ಅಡಿಗೆ ಕೆಲಸಕ್ಕಿಟ್ಟು ಕೊಳ್ಳೋಣ."

ಗೌರಿ ಒಪ್ಪಿಕೊಳ್ಳಬೇಕಾಯಿತು.

ಮಾಧವರಾಯರು ಗೊತ್ತುಮಾಡಿಕೊಟ್ಟ ಭಾಗೀರತಮ್ಮ ಎರಡು ತಿಂಗಳು ಹತ್ತುದಿನ ಕೆಲಸಮಾಡಿ, ದೇವರ ಹತ್ತಿರ ಇಟ್ಟಿದ್ದ ಪುಟ್ಟ ಬೆಳ್ಳಿಯ ಲೋಟ ಹಾರಿಸಿಕೊಂಡು ಹೊರಟುಹೋದಳು. ಅವಳು ಮೆಣಸಿನ ಪುಡಿ, ಚಟ್ನಿಪುಡಿ, ಕಾಫಿಪುಡಿ, ತುಪ್ಪ ಮುಂತಾದುವುಗಳನ್ನು ಕದ್ದು ಸಾಗಿಸುತ್ತಿದ್ದುದನ್ನು ಗೌರಿ ಕಣ್ಣಾರ ನೋಡಿ ಅನೇಕ ಬಾರಿ ಆಕೆಗೆ ಬುದ್ಧಿ ಹೇಳಿದ್ದಳು. ಆದರೆ ಆಕೆ "ನಂಗೇನು ಗೊತ್ತು, ಏನಾಯ್ತೊ! ತೊಗೊಂಡೋಳ ಮನೆ ಹಾಳಾಗಲಿ, ಅವಳ ಕೈ ಸೇದ್ಹೋಗಲಿ, ದೇವರಾಣೇಗೂ ನಾ ತೊಗೊಂಡಿಲ್ಲಮ್ಮಾ" ಎಂದು ದೇವರ ಮುಂದೆಯೇ ಕುಳಿತು ದೇವರ ಕಟ್ಟೆಯನ್ನು ಬಡಿದುಬಡಿದು ಆಣೆ ಹಾಕುತ್ತಿದ್ದಳು. ಗೌರಿ ಹಾಳಾಗಿ ಹೋಗಲಿ, ಎಂದು ಸುಮ್ಮನಾಗುತ್ತಿದ್ದಳು. ಆದರೆ ಕೊನೆಕೊನೆಗೆ ಅವಳ ಲೂಟಿಯನ್ನು ತಡೆಯಲಾಗಲಿಲ್ಲ, ಆಕೆಯಿಂದ ಅನುಕೂಲಕ್ಕಿಂತ ಅನನುಕೂಲಗಳೇ ಹೆಚ್ಚಾಗತೊಡಗಿದುವು. ಅನ್ನ ಸಾರು ಕೂಡ ಮಾಯವಾಗತೊಡಗಿತು. ಭಾಗೀರತಮ್ಮ ಹಿಂದಿನ ಬೀದಿಯಲ್ಲಿಯೇ ಚಿಕ್ಕ ಕೋಣೆಯೊಂದರಲ್ಲಿ ವಾಸವಾಗಿದ್ದುದರಿಂದಲೂ ಪುಟ್ಟಪುಟ್ಟ ಮೂರು ಹೆಣ್ಣುಮಕ್ಕಳು ಮತ್ತು ಎರಡು ಗಂಡು ಮಕ್ಕಳ ಹೊಟ್ಟೆ ತುಂಬಿಸಬೇಕಾಗಿದ್ದುದರಿಂದಲೂ ಲೂಟಿ ಕಡಮೆಯಾಗಲೇ ಇಲ್ಲ. ಬೆಳ್ಳಿಯ ಲೋಟ ಕಳುವಾದ ದಿನ ಗೌರಿ ಚೆನ್ನಾಗಿ ತರಾಟೆಗೆ ತೆಗೆದುಕೊಂಡಳು. ಭಾಗೀರತಮ್ಮ ಸಾರಿಗೆ ಹುಳಿ ಉಪ್ಪು ಖಾರ ಹಾಕದೆ ಹಾಗೆಯೇ ಎದ್ದು ಹೊರಟುಹೋದಳು. ಆಮೇಲೆ ಆಕೆ ವಾಪಸು ಬರಲಿಲ್ಲ.

ಆದರೆ ಗೌರಿಗೆ ತುಂಬ ಅನನುಕೂಲವಾಯಿತು.

ಎಂಟೂವರೆ ತಿಂಗಳು ತುಂಬಿ ಹೋಗಿತ್ತು; ಎದ್ದರೆ ಕೂಡುವುದು ಕಷ್ಟ, ಕುಳಿತರೆ ಏಳುವುದು ಕಷ್ಟ ಹಾಗಾಗಿಬಿಟ್ಟಿತ್ತು. ಭಾಗೀರತಮ್ಮ ಹೊರಟುಹೋದಮೇಲೆ, ಗೌರಿ ಆ ಸಿಟ್ಟಿನಲ್ಲಿ 'ಹೋದರೆ ಹೋದಳು, ನನ್ನ ಕೈಯಲ್ಲಿ ಆಗೊಲ್ವೇನು' ಎಂದುಕೊಂಡು ಎದ್ದು, ಸಾರಿಗೆ ಹುಳಿ ಉಪ್ಪು ಖಾರ ಹಾಕಿದಳು.

ಮಾರ್ಕೆಟ್ಟಿಗೆ ಹೋಗಿದ್ದ ರಾಮುಸ್ವಾಮಿ ಹತ್ತೂವರೆ ಗಂಟೆಗೆ ಬಂದು ಬಾಗಿಲ ಹತ್ತಿರ ಸೈಕಲ್ ಬೆಲ್ ಬಾರಿಸಿದ. ಗೌರಿ ಬಾಗಿಲು ತೆರೆದಳು. ಒಳಗೆ ಬಂದು ಸೈಕಲ್ಲನ್ನು ಗೋಡೆಗೆ ಒರಗಿಸಿದ. ಹೆಂಡತಿ ಎಲ್ಲ ಕತೆ ಹೇಳಿದಳು. ರಾಮುಸ್ವಾಮಿ "ಪೋಲಿಸಿಗೆ ಕೊಟ್ಬಿಡ್ಬೇಕು ಕತ್ತೆ ಮುಂಡೇನ!" ಎಂದು ಗರ್ಜಿಸಿದ. ಗೌರಿ "ಹೋಗಲಿ ಬಿಡಿ, ಸದ್ಯ ಶನಿ ತೊಲಗಿತಲ್ಲ" ಎಂದಳು.

"ಹಾಗಾದರೆ ಈಗ ಅಡಿಗೆ ಏನಾಯ್ತು, ಮಾಡಿಹೋದಳೊ, ಅಥವಾ ಮುಂಚೇನೇ ಹೊರಟ್ಹೋದಳೊ ?"

"ಇಲ್ಲ. ನಾನೇ ಮಾಡ್ದೆ, ಈಗ ಹುಳಿ ಉಪ್ಪು ಖಾರ ಹಾಕಿದೆ. ಅನ್ನ ಒಂದು ಬೆಂದಿತ್ತು, ಬೇಳೆ ಬೆಯಿಸಿದ್ದಳು"

"ಆಫೀಸಿಗೆ ಹೊತ್ತಾಯ್ತಲ್ಲ ಮತ್ತೆ?" ಎಂದು ರಾಮುಸ್ವಾಮಿ ಕೋಟು ಬಿಚ್ತುತ್ತಾ ಹೇಳಿದ.

ಗೌರಿ "ಅಡಿಗೆ ಆಗಿದೆ. ಏಳಿ ಬಡಿಸ್ತೀನಿ" ಎಂದು ಒಳಗೆ ಹೋದಳು.

ರಾಮುಸ್ವಾಮಿ ಕೈಕಾಲು ತೊಳೆದುಕೊಂಡು ಅಡಿಗೆಮನೆಗೆ ಬಂದ. ಗೌರಿ ಬೆಳ್ಳಿಯ ತಟ್ಟೆ ಇಟ್ಟು, ಮಣೆ ಹಾಕುತ್ತಿದ್ದಳು. ಪಾಪ, ಬಗ್ಗಲಾರದೆ ಬಗ್ಗಿ ಕೆಲಸ ಮಾಡುತ್ತಿದ್ದ ಅವಳನ್ನು ನೋಡಿ ರಾಮುಸ್ವಾಮಿಗೆ 'ಛೆ' ಎನ್ನಿಸಿತು. "ಬಿಡು, ನಾ ಇಟ್ಕೊಳ್ತೀನಿ" ಎಂದು ಮಣೆಯನ್ನು ಸರಿಯಾಗಿಟ್ಟು, ಷೆಲ್ಫಿನ ಮೇಲಿದ್ದ ಒಂದು ಲೋಟ ಮತ್ತು ರೈಲು ತಂಬಿಗೆ ತಂದು ಕೊಡ ದಲ್ಲಿದ್ದ ನೀರು ಬಗ್ಗಿಸಿ ತುಂಬಿಕೊಂಡ. ಗೌರಿ ಅಡಿಗೆ ಒಲೆಯ ಮುಂದೆ

ಕುಳಿತು ಅನ್ನ ತೋಡುತ್ತಿದ್ದಳು. ರಾಮಸ್ವಾಮಿ ನೀರಿಟ್ಟುಕೊಂಡು ಮಣೆಯ ಮೇಲೆ ಕುಳಿತುಕೊಂಡ.

ಗೌರಿ "ಉಪ್ಪು ತುಪ್ಪ?" ಎಂದು ಏಳುವುದಕ್ಕೆ ಪ್ರಯತ್ನಿಸಿದಳು.

ರಾಮಸ್ವಾಮಿ ತಕ್ಷಣವೆ ಎದ್ದು "ಬೇಡ ಕೂತ್ಕೊ, ನಾ ಹಾಕ್ಕೋತೀನಿ" ಎಂದು ತುಪ್ಪ ಉಪ್ಪು ಬಡಿಸಿಕೊಂಡ. ಅಲ್ಲಿಯೇ ಇದ್ದ ಮೊಸರಿನ ಪಾತ್ರೆ ಕಣ್ಣಿಗೆ ಬಿತ್ತು. ಅದನ್ನೂ ತಂದು ಗೌರಿಯ ಹತ್ತಿರ ಇಟ್ಟ. "ಮೊಸರು ಕಡೆದಿಲ್ಲಾಂತ ಕಾಣುತ್ತೆ. ಕಡೆಗೋಲು ಸೌಟು ತಂದು ಕೊಡಲೇನು?" ಎಂದು ಕೇಳಿದ. ಗೌರಿ "ಬೇಡಿ, ನಾ ತೊಗೋತೀನಿ. ನೀವು ಕೂತ್ಕೊಳ್ಳಿ" ಎಂದು ಗಂಡನ ಮುಖನೋಡಿ ನಕ್ಕಳು.

ರಾಮಸ್ವಾಮಿ ಊಟಮಾಡಿಕೊಂಡು ಆಫೀಸಿಗೆ ಹೊರಟಾಗ ಹನ್ನೊಂದೂ ಕಾಲು ಆಗಿಹೋಗಿತ್ತು; 'ಹೊತ್ತಾಯ್ತು ಹೊತ್ತಾಯ್ತು' ಎಂದು ಗಡಿಬಿಡಿಯಲ್ಲಿ, ಅಡಕೆಲೆ ಹಾಕಿಕೊಳ್ಳದೆ ಸೈಕಲ್ ಹತ್ತಿ ಹೊರಟು ಹೋದ.

* * * * *

ಆಫೀಸಿನಿಂದ ವಾಪಸು ಮನೆಗೆ ಹೊರಟಾಗ ಆರುಗಂಟೆ.

ದಿನವೂ ಗೌರಿ ಗಂಡ ಆಫೀಸಿನಿಂದ ಬರುವುದನ್ನೇ ಕಾಯುತ್ತ ಹೊರಗಡೆ ಕುಳಿತಿರುತ್ತಿದ್ದಳು. ಆದರೆ ಆ ದಿನ ಬಾಗಿಲು ಹಾಕಿತ್ತು. ಅಡಿಗೆಮನೆಯ ಡ್ಯೂಟಿ ಬಿದ್ದಿರುವುದರಿಂದ ಒಳಗೆ ಏನೊ ಕೆಲಸಮಾಡುತ್ತಿರಬಹುದು, ಎಂದುಕೊಂಡು ರಾಮಸ್ವಾಮಿ ಬಾಗಿಲು ನೂಕಿದ; ಸೈಕಲ್ ಬೆಲ್ ಮಾಡಿದ. ಉತ್ತರ ಬರಲಿಲ್ಲ.

"ಬಾಗಿಲು" ಎಂದು ಕೂಗಿದ. ಆದರೂ ಉತ್ತರ ಬರಲಿಲ್ಲ.

ಒಳಗೆ ಗೌರಿ ನರಳಿದಂತೆ ಕೇಳಿಸಿತು.

ರಾಮಸ್ವಾಮಿಗೆ ಗಾಬರಿಯಾಯಿತು.

"ಗೌರೀ, ಬಾಗಿಲು!" ಎಂದು ಗಟ್ಟಿಯಾಗಿ ಕೂಗಿದ, ಸೈಕಲಿನ ಮುಂದಿನ ಚಕ್ರದಿಂದ ಬಾಗಿಲನ್ನು ಗುದ್ದಿದ.

ಗೌರಿ "ಬಂದೇ" ಎಂದ ಹಾಗಾಯಿತು.

ರಾಮಸ್ವಾಮಿ ಸ್ವಲ್ಪ ಹೊತ್ತು ಸುಮ್ಮನೆ ನಿಂತುಕೊಂಡ.

ಎಷ್ಟೋ ಹೊತ್ತಾದ ಮೇಲೆ ಗೌರಿ ಬಾಗಿಲು ತೆರೆದಳು.

ಅವಳ ಮುಖ ನೋಡಿ ರಾಮುಸ್ವಾಮಿಗೆ ಹೆದರಿಕೆಯಾಯಿತು. ತಲೆಗೂದಲು ಕೆದರಿಹೋಗಿತ್ತು, ಸೀರೆಯ ಸೆರಗು ನೆರಿಗೆ ಅಸ್ತವ್ಯಸ್ತವಾಗಿದ್ದುವು. ಮುಖ ಕೆಂಪಡರಿತ್ತು, ಕಣ್ಣುಗಳೆರಡೂ ಊದಿಕೊಂಡಿದ್ದುವು.

"ಯಾಕೆ ಗೌರಿ?" ಎಂದು ರಾಮುಸ್ವಾಮಿ ಕೇಳಿದ.

ಗೌರಿ ಬೀದಿಯ ಬಾಗಿಲನ್ನು ಹಿಡಿದುಕೊಂಡೇ "ನನ್ನ ಕೈಲಾ—ಗೊಲ್ಲ" ಎಂದು ಕುಸಿದು ಕುಳಿತುಬಿಟ್ಟಳು.

ಹೆರಿಗೆಯ ನೋವು ಕಾಣಿಸಿರಬಹುದು ಎಂದುಕೊಂಡು ರಾಮುಸ್ವಾಮಿ ಗೋಡೆಗೆ ಸೈಕಲ್ ಒರಗಿಸಿ, ಎರಡು ಕೈಗಳಲ್ಲೂ ಅವಳನ್ನು ಹಿಡಿದು ಎಬ್ಬಿಸಿದ. "ಬಾ, ಮಲಕ್ಕೊ ಬಾ" ಎಂದು ಕೋಣೆಗೆ ಕರೆದುಕೊಂಡು ಹೋಗಿ, ಅವಳೇ ಹಾಸಿಕೊಂಡಿದ್ದ ಹಾಸಿಗೆಯ ಮೇಲೆ ಮಲಗಿಸಿದ.

ಗೌರಿ ಗಂಡನ ಕೈಹಿಡಿದುಕೊಂಡು "ನನ್ನ ಕೈಲಾಗೊಲ್ಲಾಂದ್ರೆ" ಎಂದಳು.

ರಾಮುಸ್ವಾಮಿ "ಯಾವಾಗಿನಿಂದ ಗೌರಿ?" ಎಂದು ಕೇಳಿದ.

"ನೀವು ಆಫೀಸಿಗೆ ಹೋದ ಮೇಲೆ ಊಟಕ್ಕೆ ಕೂತೆ. ಎರಡು ತುತ್ತು ಸಾರು ಅನ್ನ ತಿಂದಿದ್ದೆ, ಚಳುಕು ಬಂದುಬಿಟ್ಟಿತು. ತಡೆಯೋಕಾಗಲಿಲ್ಲ. ಕಡಮೆ ಆಗುತ್ತೇನೋಂತ ಅಲ್ಲೇ ಮಲಕ್ಕೊಂಡಿದ್ದೆ. ಆದರೆ ನಿಮಿಷನಿಮಿಷಕ್ಕೂ ಜಾಸ್ತಿ ಆಯ್ತು. ಎಲ್ಲ ಹಾಗೇ ಬಿಟ್ಟುಬಂದು ಹಾಸಿಗೆ ಉರುಳಿಸ್ಕೊಂಡು ಮಲಗಿಬಿಟ್ಟೆ.—ಅಯ್ಯೋ, ನನ್ನ ಕೈಲಿ ತಡೆಯೋಕಾಗೊಲ್ಲಾಂದ್ರೆ" ಎಂದು, ನೋವು ತಡೆಯಲಾರದೆ ಕಣ್ಣು ಮುಚ್ಚಿ ಹಿಂಡಿ, ಮುಖ ಸೊಟ್ಟಮಾಡಿದಳು.

"ನೀನು ಮಲಕ್ಕೊಂಡಿರು, ನಾನು ಕೃಷ್ಣಮೂರ್ತಿ ಮನೇಗೆ ಹೋಗಿ ಬರ್ತೀನಿ" ಎಂದು ರಾಮುಸ್ವಾಮಿ ಎದ್ದ. ಸೈಕಲ್ ತೆಗೆದುಕೊಂಡು ಬೀದಿಯಬಾಗಿಲು ಮುಂದಕ್ಕೆ ಹಾಕಿಕೊಂಡು ಹೊರಟ. ಕೃಷ್ಣಮೂರ್ತಿ ಮನೆಯಲ್ಲಿರಲಿಲ್ಲ, ತಮ್ಮನ ಮದುವೆಗಾಗಿ ಬೆಂಗಳೂರಿಗೆ ಹೋಗಿದ್ದ. ಹೆಂಡತಿಮಕ್ಕಳು ಎಲ್ಲ ಹೊರಟುಹೋಗಿದ್ದರು. ಮನೆಗೆ ಕಾವಲಾಗಿ ವೆರಾಂಡಾದಲ್ಲಿ ಕುಳಿತಿದ್ದ ಆಳು ಈ ಸುದ್ದಿ ಹೇಳಿದ.

ರಾಮಸ್ವಾಮಿಗೆ ದಿಕ್ಕೇ ತೋಚಲಿಲ್ಲ.

ಬೀದಿಯ ಕಡೆಗೆ ತಿರುಗಿ "ಎಂಥ ಕೆಲಸ ಆಗ್ಹೋಯ್ತಲ್ಲಪ್ಪಾ!" ಎಂದು ಕೊಂಡ.

ಆ ಮಾತು ಕೇಳಿ ಆಳು "ಯಾಕೆ ಬುದ್ಧಿ?" ಎಂದ.

ರಾಮಸ್ವಾಮಿ "ಯಾಕೂ ಇಲ್ಲಪ್ಪ, ಮನೇಲಿ ಹೆರಿಗೆ ಟೈಮು. ಆಸ್ಪತ್ರೆಗೆ ಹೋಗಬೇಕಾಗಿತ್ತು. ಅವರು ನನ್ನ ಸ್ನೇಹಿತರು. ಆದ್ದರಿಂದ ಬಂದೆ" ಎಂದ.

"ಮಿಡ್‌ವೈಫು ಬಂದಿಲ್ವಾ?"

"ಇಲ್ಲಪ್ಪ. ಇಲ್ಲೇ ಹತ್ತಿರದಲ್ಲಿ ಯಾರಾದರೂ ಇದಾರಾ?"

"ಇದಾರೆ. ತಮ್ಮ ಮನೆ ಎಲ್ಲಿ ಬುದ್ಧಿ?"

"ಇಲ್ಲೇ, ಡಿ. ಸುಬ್ಬಯ್ಯರೋಡಲ್ಲಿ."

ಆಳು ರಾಮಸ್ವಾಮಿಯ ಹತ್ತಿರಕ್ಕೆ ಬಂದು,

"ಓ. ಹಾಗಾದರೆ ಹತ್ತಿರ ಬುದ್ಧಿ, ಪರವಾಯಿಲ್ಲ. ಡಿ. ಸುಬ್ಬಯ್ಯ ರೋಡಿಂದ ಮೇಲಕ್ಹೋಗಿ ಬಲಕ್ಕೆ ತಿರುಕ್ಕೊಳ್ಳಿ. ಮರಿಮಲ್ಲಪ್ಪ ಇಸ್ಕೂಲ್ ಸಿಕ್ತದೆ. ಅದರ ಪಕ್ಕದಲ್ಲೆ ಎಡಕ್ಕೆ ಒಂದು ರಸ್ತೆ ಹೋಯ್ತದೆ. ಅದರಲ್ಲಿ ಹೋದರೆ ಗೆಸ್ಟ್‌ಹೌಸ್ ಸಿಕ್ತದೆ. ಅದರಿಂದ ಮುಂದೆ ನಾಲ್ಕು ಹೆಜ್ಜೆ ಹಾಕಿದರೆ ಒಂದು ಮಿಲ್ಕ್‌ಸೆಂಟರ್ ಬತ್ತದೆ. ಅಲ್ಲಿ ಹಿಂದುಗಡೆ ಇಬ್ಬರು ಮೂರು ಜನ ನರ್ಸ್‌ಗೊಳಿದಾರೆ. ಬಹಳ ಒಳ್ಳೇವರು, ಹೋಗಿ ಕರೆದರೆ ಯಾರಾದ್ರು ಬತ್ತಾರೆ ಬುದ್ಧಿ" ಎಂದು ದಾರಿ ತೋರಿಸಿದ.

ರಾಮಸ್ವಾಮಿ ತಕ್ಷಣವೆ ಸೈಕಲ್ ಹತ್ತಿದ. ಮಿಲ್ಕ್‌ಸೆಂಟರ್ ಸಿಕ್ಕಿತು. ನರ್ಸ್ ಎಲಿಜಮ್ಮ ಸಹ "ಬರ್ತೀನಿ, ಒಂದು ಗಾಡಿ ತಂದ್ಬಿಡಿ" ಎಂದಳು. ರಾಮಸ್ವಾಮಿ ಶಿವರಾಮಪೇಟೆಗೆ ಹೋಗಿ, ಒಂದು ಗಾಡಿ ತೆಗೆದುಕೊಂಡು ಬಂದ. ಎಲಿಜಮ್ಮ ಚರ್ಮದ ಪೆಟ್ಟಿಗೆ ಹಿಡಿದುಕೊಂಡು ಗಾಡಿ ಹತ್ತಿದಳು. ಐದು ನಿಮಿಷಗಳೊಳಗಾಗಿ ಗಾಡಿ ಮನೆ ಸೇರಿತು.

ಗೌರಿಯ ಸಲಹೆಯ ಮೇರೆ ರಾಮಸ್ವಾಮಿ ಪಕ್ಕದ ಮನೆಯ

ಜಯಮ್ಮನವರನ್ನು ಕರೆದು ಬಂದ. ಅವರು ಮನೆಯ ಹಿರಿಯ ಹೆಂಗಸಿನಂತೆ ಮಿಡ್‌ವೈಫಿಗೆ ತುಂಬ ನೆರವಾದರು. ನರ್ಸ್ ಎಲಿಜಮ್ಮ ಸುಮಾರು ಎರಡು ಗಂಟೆ ಹೊತ್ತು ತನ್ನ ಕೈಲಾದ ಪ್ರಯತ್ನ ಮಾಡಿದಳು. ಆದರೆ ಸುಸೂತ್ರವಾಗಿ ಹೆರಿಗೆ ಆಗುವ ಸೂಚನೆ ಕಂಡುಬರಲಿಲ್ಲ.

ಕೋಣೆಯಿಂದ ಹೊರಗೆ ಬಂದು, ರಾಮುಸ್ವಾಮಿಯನ್ನು ಕುರಿತು "ನಿಮಗೆ ದೊಡ್ಡ ಲೇಡಿ ಡಾಕ್ಟರ್ ಗುರುತಿದಾರ?" ಎಂದು ಕೇಳಿದಳು.

ರಾಮುಸ್ವಾಮಿ "ಇಲ್ಲ. ಆದರೆ ಕೆ. ಆರ್. ಹಾಸ್ಪಿಟಲ್‌ನಲ್ಲಿರೋ ಡಾಕ್ಟರ್ ಕೃಷ್ಣಮೂರ್ತಿ ನನ್ನ ಸ್ನೇಹಿತರು; ಅವರಿಗೆ ಗುರುತಿದಾರೆ" ಎಂದ.

"ಅವರ ಮೂಲಕ ಹೇಳಿದರೆ ಲೇಡಿ ಡಾಕ್ಟರ್ ಮನೇಗೆ ಬರತಾರ? ತಡಮಾಡೋ ಹಾಗಿಲ್ಲ, ಬೇಗ ಹೋಗಿ ಕರೀಬೇಕಲ್ಲ!"

"ನನ್ನ ಸ್ನೇಹಿತರು ಊರಲ್ಲಿಲ್ಲ."

"ಹಾಗಾದರೆ ಏನು ಮಾಡ್ತೀರ? ಬೇಗ ಡಿಸೈಡ್ ಮಾಡಬೇಕು."

"ಚೆಲುವಾಂಬಾ ಹಾಸ್ಪಿಟಲ್‌ಗೇ ಕರಕೊಂಡು ಹೋದರೆ?"

"ಆಗಲಿ, ಬೇಗ ಯಾರದ್ದಾದರೂ ಕಾರ್ ಇದ್ದರೆ ತಗೊಂಬ್ಬನ್ನಿ" ಎಂದು ಆಕೆ ಒಳಗೆ ಹೊರಟುಹೋದಳು.

ರಾಮುಸ್ವಾಮಿಗೆ, ಏನು ಮಾಡಬೇಕೊ ತೋರಲಿಲ್ಲ.

ಆಗಲೆ ಗಡಿಯಾರದಲ್ಲಿ ಹತ್ತು ಗಂಟೆಯಾಗಿತ್ತು.

ಕಾರ್ ಇರುವ ಸ್ನೇಹಿತರಾರೂ ಹತ್ತಿರದಲ್ಲಿರಲಿಲ್ಲ. ಕಾರ್ ಇರುವುದು ಇಬ್ಬರಲ್ಲೇ. ಅವರಿಬ್ಬರೂ ಒಂಟಿಕೊಪ್ಪಲಿನಲ್ಲಿದಾರೆ. ಹತ್ತಿರದಲ್ಲೇ ಇರುವ ಅಪರಿಚಿತರನ್ನು ಕೇಳುವ ಧೈರ್ಯ ರಾಮುಸ್ವಾಮಿಗೆ ಇರಲಿಲ್ಲ. ಆ ಬಗ್ಗೆ ಆಲೋಚಿಸಿ, ಯಾರನ್ನು ಕೇಳುವುದು ಎಂದು ತೀರ್ಮಾನಿಸಲು ಕಾಲಾವಕಾಶವೂ ಇರಲಿಲ್ಲ. ಸುಮ್ಮನೆ ಸೈಕಲ್ ಹತ್ತಿ ದೊಡ್ಡ ಮಾರ್ಕೆಟ್ ಕಡೆಗೆ ಹೊರಟ. ಯಾವುದಾದರೂ ಟ್ಯಾಕ್ಸಿ ಬಾಡಿಗೆಗೆ ಸಿಕ್ಕಬಹುದೆಂದು ಟ್ಯಾಕ್ಸಿ ಸ್ಟ್ಯಾಂಡಿನ ಕಡೆಗೆ ವೇಗವಾಗಿ ಸೈಕಲ್ ಬಿಟ್ಟ. ಆದರೆ, ಅಲ್ಲಿ ಒಂದೇ ಒಂದು ಗಾಡಿ ನಿಂತಿತ್ತು. ಸದ್ಯ, ಒಂದಾದರೂ ಇದೆಯಲ್ಲ ಎಂದು

ಕೊಂಡು "ಬರ್ತೀ ಏನಪ್ಪಾ?" ಎಂದು ಕೇಳಿದ. ಗಾಡಿಯ ಫ್ರಂಟ್ ಬೋರ್ಡಿನ ಮೇಲೆ ಕುಳಿತಿದ್ದ ಕ್ಲೀನರ್ "ಇಲ್ಲ ಸಾಮಿ, ರಿಪೇರಿ ಆಗ್ಬೇಕು" ಎಂದ. "ಇನ್ಯಾವುದಾದ್ರೂ ಗಾಡಿ ಇದ್ಯೇನಪ್ಪ?" ಎಂದು ಅವನನ್ನು ಕೇಳಿದಾಗ "ಇಲ್ಲ ಸಾಮಿ, ಎಲ್ಲ ಹೊರಟೋಯ್ತು. ಇನ್ನ ಯಾವ್ದೂ ಬರೋಕಿಲ್ಲ" ಎಂದ.

ರಾಮಸ್ವಾಮಿಗೆ ಏನು ಮಾಡಬೇಕೊ ತೋಚಲಿಲ್ಲ. ಸುಮ್ಮನೆ ಸ್ಟ್ಯಾಂಡ್ ಸುತ್ತ ನೋಡುತ್ತಾ ಹೊರಟ. ಸೂರಪ್ಪರಸ್ತೆಗೆ ತಿರುಗಿದಾಗ, ಸೀತಮ್ಮಾಳ್ ಆಸ್ಪತ್ರೆ ಕಡೆಯಿಂದ ಒಂದೇ ಒಂದು ಖಾಲಿ ಜಟಕಾಗಾಡಿ ನಿಧಾನವಾಗಿ ಬರುತ್ತಿದ್ದುದು ಕಣ್ಣಿಗೆ ಬಿತ್ತು.

ಗಾಡಿಯ ಹತ್ತಿರ ಹೋಗಿ "ಬರ್ತೀ ಏನಯ್ಯ?" ಎಂದು ಕೇಳಿದ.

ಗಾಡಿಯವನು "ಬರ್ತೀನಿ ಸಾಮಿ, ಎಲ್ಲಿಗೆ?" ಎಂದ.

'ಚಿಕ್ಕಮಾಂಬಾ ಸ್ಟ್ರೀಟ್' ಎಂದು ಬಾಡಿಗೆ ಗೊತ್ತುಮಾಡಿಕೊಂಡು ಗಾಡಿಯನ್ನು ಮನೆಯ ಮುಂದೆ ತಂದು ನಿಲ್ಲಿಸುವ ಹೊತ್ತಿಗೆ ಹತ್ತೂ ಮುಕ್ಕಾಲು ಆಗಿಹೋಗಿತ್ತು.

ನರ್ಸ್ ಎಲಿಜಮ್ಮ ಗಾಡಿ ನೋಡಿ, "ಅಯ್ಯೋ ಕಾರ್ ಸಿಕ್ಕಲಿಲ್ಲವೇ!" ಎಂದಳು.

ರಾಮಸ್ವಾಮಿ "ಇಲ್ಲ" ಎಂದ.

ಎಲಿಜಮ್ಮ "ಹೋಗಲಿ, ಸ್ವಲ್ಪ ನಿಮ್ಮ ಕೈ ಹಿಡ್ಕೊಳ್ಳಿ, ಗಾಡೀಲಿ ಮಲಗಿಸೋಣ" ಎಂದು ಹೇಳಿದಳು. ರಾಮಸ್ವಾಮಿ ಎಲಿಜಮ್ಮ ಇಬ್ಬರೂ ಗೌರಿಯ ಕೈ ಹಿಡಿದುಕೊಂಡು ಆಕೆಯನ್ನು ಗಾಡಿಯ ವರೆಗೆ ನಡೆಸಿಕೊಂಡು ಹೋದರು. ಆಕೆಗೆ ತುಂಬ ಸುಸ್ತಾಗಿತ್ತು; ಹೆಜ್ಜೆಯನ್ನು ಎತ್ತಿ ಇಡುವಷ್ಟು ಶಕ್ತಿಯೂ ಆ ದೇಹದಲ್ಲಿರಲಿಲ್ಲ. ಕಾಲೆಳೆದುಕೊಂಡೇ ನಿಧಾನವಾಗಿ ಗಾಡಿಯ ಹತ್ತಿರಕ್ಕೆ ಬಂದಾಗ ರಾಮಸ್ವಾಮಿ ಎಲಿಜಮ್ಮ ಇಬ್ಬರೂ ಸೇರಿ ಗೌರಿಯನ್ನು ಎತ್ತಿ, ಗಾಡಿಯಲ್ಲಿ ಮಲಗಿಸಿದರು.

ಅನಂತರ, ರಾಮಸ್ವಾಮಿ ಮನೆಯೊಳಗೆ ಹೋಗಿ, ಬಾಗಿಲಲ್ಲಿಯೇ ನಿಂತಿದ್ದ ಜಯಮ್ಮನವರಿಗೆ "ದಯವಿಟ್ಟು, ನಿಮ್ಮ ಜಯರಾಮೂನ್ನ

ಇಲ್ಲಿ ಮಲಕ್ಕೊಂಡಿರೂನ್ನಿ, ನಾನು ಬರ್ತೀನಿ" ಎಂದು ಚೀಲಕ್ಕೆ ಒಂದು ಶಾಲು, ದುಪ್ಪಟಿ, ಸೀರೆ ತುಂಬಿಕೊಂಡು ಬೇಗ ಹೋಗಿ ಗಾಡಿಯಲ್ಲಿ ಕುಳಿತ.

ಎಲಿಜಮ್ಮ ಗಾಡಿಯ ಮುಂದೆ, ಗೌರಿಯ ತಲೆಯ ಹತ್ತಿರ ಕೂತಿದ್ದಳು. ರಾಮುಸ್ವಾಮಿ ಹಿಂದೆ ಕುಳಿತಿದ್ದ. ಗಾಡಿಯ ಹತ್ತಿರ ಬಂದು ನಿಂತಿದ್ದ ಜಯಮ್ಮನವರನ್ನು ನೋಡಿ "ದಯವಿಟ್ಟು ಮನೇ ಕಡೆ ಸ್ವಲ್ಪ ನೋಡಿಕೊಳ್ಳಿ. ಪಾಪ, ನಿಮಗೆ ತುಂಬ ತೊಂದರೆ ಕೊಡ್ತಾ ಇದೀನಿ" ಎಂದ. ಅದಕ್ಕೆ ಜಯಮ್ಮನವರು "ಛೆ, ಛೆ, ಹಾಗಂದರೇನು! ಪರವಾಯಿಲ್ಲ. ಹೋಗಿಬಿಟ್ಟುಬನ್ನಿ ; ಗೌರಮ್ಮ, ಏನೂ ಯೋಚನೆಮಾಡಬೇಡಿ, ಎಲ್ಲ ಸುಸೂತ್ರವಾಗಿ ಆಗ್ಹೋಗುತ್ತೆ, ಧೈರ್ಯವಾಗಿರಿ" ಎಂದರು.

ಗಾಡಿ ನಿಧಾನವಾಗಿ ಹೊರಟಿತು.

ಅದು ಆಸ್ಪತ್ರೆ ತಲಪಿದಾಗ ಹನ್ನೆರಡು ಗಂಟೆಯ ಸಮಯ.

ರೋಗಿಗಳ ಮನೆಯಾದರೂ ಆಸ್ಪತ್ರೆಯ ಆವರಣ ಶಾಂತವಾಗಿತ್ತು, ಗೇಟಿನ ಹತ್ತಿರ ಏತಕ್ಕೊ ಬಂದಿದ್ದ ವಾಚ್‌ಮನ್ ಮುನಿಸ್ವಾಮಿನಾಯಿಡು ಗಾಡಿ ಅಲ್ಲಿಗೆ ಬಂದ ಕೂಡಲೆ "ಯಾರು ಸಾಮಿ?" ಎಂದು ಕೇಳಿದ. ರಾಮುಸ್ವಾಮಿ "ಡಾಕ್ಟರ್ ಕೃಷ್ಣಮೂರ್ತಿ ಕಡೆಯೋರಪ್ಪ, ಹೆರಿಗೆ ಕೇಸು ಕರಕೊಂಡ್ಬಂದಿದೀನಿ, ಸ್ವಲ್ಪ ಗೇಟು ಪೂರ್ತ ತೆಗಿ" ಎಂದ. ತಮ್ಮ ಡಾಕ್ಟರ್ ಕಡೆಯುವರು ಎಂದು ಗೊತ್ತಾದ ಕೂಡಲೆ ವಾಚ್‌ಮನ್ ಚಕ್ಕನೆ ಗೇಟು ತೆಗೆದು ಪಕ್ಕದಲ್ಲಿ ನಿಂತುಕೊಂಡ. ಗಾಡಿ ಒಳಗೆ ಹೋಯಿತು.

ದೊಡ್ಡ ಡಾಕ್ಟರ್ ಇರಲಿಲ್ಲ. ಅಸಿಸ್ಟೆಂಟ್ ಸರ್ಜನ್ ಇಂದಿರಮ್ಮನಿಗೆ ನೈಟ್ ಡ್ಯೂಟಿ ಬಿದ್ದಿತ್ತು. "ಯಾವುದೋ ಹೆರಿಗೆ ಕೇಸು ಬಂದಿದೆ" ಎಂದು ಹೆಡ್ ನರ್ಸ್ ಹೇಳಿದಾಗ ಆಕೆ "ಯಾರು? ಒಂದು ಬೆಡ್ ಕೊಟ್ಟು ಮಲಗಿಸಿರು, ಆಮೇಲೆ ಬರ್ತೀನಿ" ಎಂದು ಆಫೀಸಿನ ಕಡೆಗೆ ಹೊರಟುಹೋದಳು. ರಾಮುಸ್ವಾಮಿ ಬೇಗ ಬೇಗ ಅವರ ಹಿಂದೆ ಹೋಗಿ "ಡಾಕ್ಟರ್, ಒಂದು ನಿಮಿಷ" ಎಂದ.

ಇಂದಿರಮ್ಮ ಹಿಂದಿರುಗಿ ನೋಡಿ, ನಿಂತುಕೊಂಡಳು.

"ನಾನು ಡಾಕ್ಟರ್ ಕೃಷ್ಣಮೂರ್ತಿ ಸ್ನೇಹಿತ. ನನ್ನ ವೈಫನ್ನ ಕರಕೊಂಡು ಬಂದಿದೀನಿ. ಡೆಲಿವರಿ ಟೈಮು, ತುಂಬ ಸೀರಿಯಸ್ಸಾಗಿದೆ. ಆದ್ದರಿಂದ ಸ್ವಲ್ಪ ದಯವಿಟ್ಟು ನೋಡಿ" ಎಂದು ವಿನಯದಿಂದ ಹೇಳಿಕೊಂಡ.

"ಓ, ನೀವೆಲ್ಲಿದೀರಿ ?"

"ಇಲ್ಲೇ, ಇನ್‌ಸ್ಪೆಕ್ಟರ್ ಆಫ್ ಕೋ-ಆಪರೇಟಿವ್ ಸೊಸೈಟೀಸ್ ಆಗಿದೀನಿ"

"ಕೃಷ್ಣಮೂರ್ತಿಯವರು ತಮಗೆ ಹೇಗೆ ಗೊತ್ತು?"

"ನಾನು ಅವನು ಸ್ಕೂಲ್‌ಮೇಟ್ಸ್, ಇಬ್ಬರದೂ ಒಂದೇ ಊರು"

"ಸರಿ, ಅವರು ಊರಿಗೆ ಬಂದರೊ?"

"ಇಲ್ಲ, ಅವನಿದ್ದಿದ್ದರೆ ಅವನೂ ನನ್ನ ಜೊತೆ ಬರ್‍ತಿದ್ದ. ಅವನ ತಮ್ಮನ ಮದುವೇಗೆ ಹೋಗಿದಾನೆ"

"ಎಲ್ಲಿದಾರೆ ನಿಮ್ಮ ವೈಫು ?"

"ಇಲ್ಲೇ ಗಾಡೀಲಿದಾರೆ"

"ಸರಿ, ಇರಲಿ. ನಾನು ಹೆಡ್ ನರ್ಸನ್ನ ಕಳಿಸ್ತೀನಿ, ಗಾಡಿ ಹತ್ತಿರ ಇರಿ" ಎಂದು ಹೇಳಿ ಆಫೀಸು ರೂಮಿಗೆ ಹೊರಟುಹೋದಳು.

ಸುಮಾರು ಕಾಲು ಗಂಟೆ ರಾಮುಸ್ವಾಮಿ ಗಾಡಿಯ ಹತ್ತಿರವೇ ನಿಂತಿದ್ದ. ಹೆಡ್ ನರ್ಸ್ ಬರಲಿಲ್ಲ. ಅಷ್ಟು ದೂರ ಗಾಡಿಯಲ್ಲಿ ಬಂದುದರಿಂದ ಗೌರಿಗೆ ತುಂಬ ಆಯಾಸವಾಗಿತ್ತು, ನೋವು ಹೆಚ್ಚಾಗಿತ್ತು; ತಡೆಯಲಾರದೆ ಗಟ್ಟಿಯಾಗಿ ನರಳಲು ಮೊದಲುಮಾಡಿದಳು. ಎಲಿಜಮ್ಮ "ನೀವಿಲ್ಲಿರಿ, ನಾನು ಬರ್‍ತೀನಿ" ಎಂದು ರಾಮುಸ್ವಾಮಿಗೆ ಹೇಳಿ, ಗಾಡಿ ಇಳಿದು ಹೆಡ್ ನರ್ಸಿನ ಕೋಣೆಯ ಕಡೆಗೆ ಹೊರಟಳು. ಅಷ್ಟು ಹೊತ್ತಿಗೆ ಸರಿಯಾಗಿ ಹೆಡ್ ನರ್ಸ್ ಜಾನಕಮ್ಮ ಒಂದು ಸ್ಟ್ರೆಚರ್ ತೆಗಸಿಕೊಂಡು ಎದುರಿಗೆ ಬಂದಳು.

ಗೌರಿಯನ್ನು ಸ್ಟ್ರೆಚರ್ ಮೇಲೆ ಮಲಗಿಸಿ, ಹೆರಿಗೆ ರೂಮಿಗೆ ಸಾಗಿಸಿದ್ದಾಯಿತು. ನರ್ಸ್ ಎಲಿಜಮ್ಮನೂ ಸ್ಟ್ರೆಚರ್ ಹಿಂದೆ ಹೊರಟಳು.

ಸುಮಾರು ಕಾಲು ಗಂಟೆ ಯಾರೂ ಹೊರಗೆ ಬರಲಿಲ್ಲ.

ಗಾಡಿಯವನು "ಇನ್ನೆ ಎಷ್ಟೊತ್ತು ಇರಬೇಕು ಸಾಮಿ?" ಎಂದು ಕೇಳಿದ. ರಾಮಸ್ವಾಮಿ "ಇನ್ನೊಂದಷ್ಟು ಹೊತ್ತು ಇದ್ದುಬಿಡು. ಆ ನರ್ಸ್ ಹೊರಗಡೆ ಬಂದ ಕೂಡಲೆ ಬೇಗ ಹೇಳಿಬಿಡ್ತೀನಿ" ಎಂದ. "ಭಾಳ ಹೊತ್ತಾಯ್ತುದೆ ಸಾಮಿ" ಎಂದು ಗಾಡಿಯ ಸಾಬಿ ಗೋಗರೆದ. "ಏನ್ಮಾಡೋದಕ್ಕಾಗ್ತದೆ ಹೇಳು; ಸಮಯ ಹಾಗಿದೆ. ಹೆಚ್ಚಾಗಿ ಕೊಡ್ತೀನಿ; ಗೊತ್ತುಮಾಡಿರೋ ಬಾಡಿಗೇನೇ ಕೊಟ್ಬಿಡ್ತೀನೀಂತ ತಿಳಿಕೊಳ್ಬೇಡ" ಎಂದು ರಾಮಸ್ವಾಮಿ ಹೇಳಿದ. ಗಾಡಿಯವನು "ಬಾಡಿಗೆ ಕೊಡ್ತೀರ. ಆದರೆ ಮನೆ ಭಾಳ ದೂರ ಸಾಮಿ,—ನರಸಿಂಹರಾಜ ಮೊಹಲ್ಲ" ಎಂದ.

ಅಷ್ಟು ಹೊತ್ತಿಗೆ ಎಲಿಜಮ್ಮ ಹೊರಗೆ ಬಂದಳು. ಆಕೆಯ ಹಿಂದೆಯೇ ಬಂದ ಆ ಹೆಡ್ ನರ್ಸ್ "ನೀನು ಹೊರಡಮ್ಮ, ನೀನ್ಯಾಕೆ ಸುಮ್ಮನೆ ನಿದ್ದೆಗೆಡಬೇಕು" ಎಂದು ಹೇಳಿದಳು. ಎಲಿಜಮ್ಮ ಮೆಟ್ಟಿಲಿನ ಹತ್ತಿರಕ್ಕೆ ಬಂದಳು. ರಾಮಸ್ವಾಮಿ "ಏನಂತೆ?" ಎಂದು ಕುತೂಹಲದಿಂದ ಕೇಳಿದ. ಎಲಿಜಮ್ಮ "ಇನ್ನೂ ಏನೂ ಇಲ್ಲ" ಎಂದಳು. ಹೆಡ್ ನರ್ಸ್ "ಏನ್ಸಾರ್, ಅಂಥವರನ್ನ ಗಾಡೀಲಿ ಕರ್ಕೊಂಡ್ಬಂದ್ಬಿಟ್ಟಿರಲ್ಲ, ಕಾರ್ ಸಿಕ್ಕಲಿಲ್ಲವೆ?" ಎಂದು ಕೇಳಿದಳು. ರಾಮಸ್ವಾಮಿ "ಇಲ್ಲ, ಕಾರ್ ಸಿಕ್ಕಲಿಲ್ಲ" ಎಂದ. ಹೆಡ್ ನರ್ಸ್ "ಛೆ ಛೆ!" ಎಂದು ಹೊರಟುಬಿಟ್ಟಳು.

ಅವಳ ಪ್ರಶ್ನೆ, ಅವಳ ನಡವಳಿಕೆ ರಾಮಸ್ವಾಮಿಗೆ ಗಾಬರಿಯನ್ನುಂಟುಮಾಡಿದುವು. "ಯಾಕೆ! ಏನಂತೆ?" ಎಂದು ಎಲಿಜಮ್ಮನನ್ನು ಕೇಳಿದ. ಆಕೆ "ಏನೂ ಇಲ್ಲ, ಗಾಬರಿಪಟ್ಕೊಳ್ಳಬೇಡಿ. ತುಂಬ ಆಯಾಸ ಆಗಿದೆ; ಗಾಡೀಲಿ ಕರಕೊಂಡು ಬರಬಾರದಾಗಿತ್ತೂಂತ ಡಾಕ್ಟರ್ ಅಂದರು. ನನಗೆ ಗಾಡೀಲಿ ಬರೋದು ಇಷ್ಟ ಇರಲಿಲ್ಲ. ಏನು ಮಾಡೋದು, ಕಾರ್ ಸಿಕ್ಕಲಿಲ್ವಲ್ಲ!" ಎಂದಳು. ರಾಮಸ್ವಾಮಿ "ಲೇಡಿ ಡಾಕ್ಟರ್ ಏನಂದರು? ನೋಡಿದರೊ?" ಎಂದು ಕೇಳಿದ. ಎಲಿಜಮ್ಮ "ನೋಡ್ತಾ ಇದಾರೆ, ನೀನ್ಯಾಕೆ ಇರಬೇಕು ಹೋಗು ಅಂತ ನನ್ನ ಕಳಿಸ್ಬಿಟ್ಟರು; ಮನೇಗೆ ಬಿಡಬೇಕಲ್ಲ ಹಾಗಾದರೆ ಈಗ?"

ಎಂದಳು. ರಾಮಸ್ವಾಮಿ ಒಂದು ನಿಮಿಷ ಸುಮ್ಮನಿದ್ದು, "ಗಾಡಿ ಇದೆ. ಹೊರಟುಬಿಡಬಹುದು ; ಆದರೆ ನೀವೂ ಇದ್ದರೆ ಒಳ್ಳೇದಲ್ಲವೆ ?" ಎಂದ. ಎಲಿಜಮ್ಮ "ಏನೂ ಬೇಕಾಗಿಲ್ಲ ನಾನ್ಯಾಕೆ ಇರಬೇಕು. ಬೆಳಗ್ಗೆ ಬರ್ತೀನಿ; ಪರವಾಗಿಲ್ಲ, ಡಾಕ್ಟರಮ್ಮನೋರಿರೋದರಿಂದ ಏನೂ ಯೋಚನೆ ಮಾಡ ಬೇಕಾಗಿಲ್ಲ. ಈ ಗಾಡೀಲೇ ನನ್ನ ಕಳಿಸಿಬಿಡಿ" ಎಂದಳು.

ರಾಮಸ್ವಾಮಿ ಎಲಿಜಮ್ಮನನ್ನು ಕಳಿಸಬೇಕಾಯಿತು. "ಒಬ್ಬರೇ ಹೋಗ್ತೀರಾ ? ಪರವಾಯಿಲ್ಲವೆ ?" ಎಂದ. ಎಲಿಜಮ್ಮ "ಪರವಾಯಿಲ್ಲ, ಹೋಗ್ತೀನಿ ; ನಾಳೆ ಬೆಳಗ್ಗೆ ಬರ್ತೀನಿ" ಎಂದು ಹೇಳಿ ಗಾಡಿ ಹತ್ತಿದಳು. ರಾಮಸ್ವಾಮಿ ಗಾಡಿಯವನಿಗೆ ಮೂರು ರೂಪಾಯಿ ಬಾಡಿಗೆ ಕೊಟ್ಟು, "ಹೋಗಪ್ಪ, ನೀನು ; ಇವರನ್ನ ಗೆಸ್ಟ್‌ಕ್ವಾರ್ಟರ್ಸ್ ಹತ್ತಿರ ಬಿಟ್ಟುಬಿಟ್ಟು ಹೋಗು—ಲೇಡಿ ಡಾಕ್ಟರ್ ಬಂಗಲೆ ಇದೆಯಲ್ಲ, ಅದರ ಹಿಂದೇನೆ" ಎಂದು ಹೇಳಿ ಕಳಿಸಿದ. ಸಾಬಿ ಗಾಡಿಯ ದೀಪದ ಬೆಳಕಿನಲ್ಲಿ ಮೂರು ರೂಪಾಯಿ ಯನ್ನು ನೋಡಿಕೊಂಡು ಸಂತೋಷದಿಂದ "ಸಲಾಂ ಸಾಮಿ" ಎಂದು ಹೇಳಿ 'ಛ್' ಎಂದು ಕುದುರೆಗೆ ಸೂಚನೆ ಕೊಟ್ಟ. ಗಾಡಿ ಹೊರಟಿತು.

ರಾಮಸ್ವಾಮಿ ಒಬ್ಬನೇ ಆದ. ಸುಮಾರು ಕಾಲು ಗಂಟೆ ಒಬ್ಬನೇ ಗೋಡೆಗೆ ಒರಗಿ ನಿಂತುಕೊಂಡಿದ್ದ. ಅಲ್ಲಿ ಹಾಗೆ ನಿಂತಿರಲು ಸಾಧ್ಯ ವಾಗಲಿಲ್ಲ. ಮೆಲ್ಲಗೆ ಹೆಡ್ ನರ್ಸ್ ಕೋಣೆಯ ಕಡೆಗೆ ಹೋದ. ಒಬ್ಬ ನರ್ಸ್ ಬೆಡ್‌ಪ್ಯಾನ್ ಹಿಡಿದುಕೊಂಡು ಪಕ್ಕದ ಕೋಣೆಯಿಂದ ಬಂದಳು. ರಾಮಸ್ವಾಮಿಗೆ ಆಕೆಯನ್ನು ಮಾತಾಡಿಸಬೇಕೆನ್ನಿಸಿತು. "ಹೆಡ್‌ನರ್ಸ್ ಎಲ್ಲಿದಾರೆ ?" ಎಂದು ಕೇಳಿದ ಅದಕ್ಕೆ ಆಕೆ "ಡಾಕ್ಟರ್ ಯಾವುದೋ ಹೆರಿಗೆ ಕೇಸ್ ಅಟೆಂಡ್ ಮಾಡ್ತಾ ಇದಾರೆ. ಅವರ ಹತ್ತಿರ ಇದಾರೆ. ಬರ್ತಾರೆ. ಯಾಕೆ ?" ಎಂದು ಕೇಳಿದಳು. ರಾಮಸ್ವಾಮಿ "ಯಾಕೂ ಇಲ್ಲ. ನನ್ನ ವೈಫನ್ನೇ ಅವರು ಈವಾಗ ಅಟೆಂಡ್ ಮಾಡ್ತಾ ಇರೋದು" ಎಂದ. ಆಗ ಆ ನರ್ಸ್ "ಓ, ಈವಾಗ ಗಾಡೀಲಿ ಬಂದರಲ್ಲ, ಅವರು ನಿಮ್ಮ ವೈಫಾ, ದಪ್ಪಗಿದಾರಲ್ಲ ?" ಎಂದು ಕೇಳಿದಳು. ರಾಮಸ್ವಾಮಿ "ಹೌದು" ಎಂದ. ನರ್ಸ್ "ಹಾಗಾದರೆ ಇಲ್ಯಾಕೆ ನಿಂತಿದೀರಿ. ಆ ರೂಮಿ

ನಲ್ಲಿ ಬೆಂಚಿದೆ. ಕೂತ್ಕೊಳ್ಳಿ, ಅಲ್ಲಿ ಯಾರೂ ಇಲ್ಲ" ಎಂದು ಪಕ್ಕದ ಕೋಣೆಯ ಕಡೆ ಕೈ ತೋರಿ, ಹೊರಟುಹೋದಳು.

ರಾಮಸ್ವಾಮಿ ಆ ರೂಮಿಗೆ ಹೋಗಿ, ಅಲ್ಲಿ ಹಾಕಿದ್ದ ಬೆಂಚಿನ ಮೇಲೆ ಕುಳಿತುಕೊಂಡ.

ಮೈಯೆಲ್ಲ ಏಕೊ ಬಿಸಿಯಾಗಿತ್ತು, ಮನಸ್ಸು ಚಡಪಡಿಸುತ್ತಿತ್ತು, ಹೃದಯ ಗಡಗಡ ನಡುಗುತ್ತಿತ್ತು. ಭಾರವನ್ನು ತಡೆಯಲಾರದೆ ತಲೆಯನ್ನು ಬಲ ಅಂಗೈಯಲ್ಲಿಟ್ಟು ಸುಮ್ಮನೆ ಕುಳಿತುಕೊಂಡ. ಆದರೆ ಆ ಮನಸ್ಸು ಹೆರಿಗೆಯ ರೂಮಿನ ಹತ್ತಿರವೇ ಕಾತರದಿಂದ ಪರದಾಡುತ್ತಿತ್ತು. ಅರ್ಧ ಗಂಟೆಯಾದರೂ ಆ ಕಡೆಯಿಂದ ಒಬ್ಬರೂ ಬರಲಿಲ್ಲ; ಇವನನ್ನು ಮಾತಾಡಿಸಲಿಲ್ಲ. ಎರಡು ಮೂರು ಬಾರಿ ಎದ್ದು ಹೊರಗೆ ಬಂದು ನೋಡಿದ. ಯಾರಾದರೂ ಬಂದರೆ ಕೇಳಿ ತಿಳಿದುಕೊಳ್ಳೋಣ, ಎಂದು ಸುಮ್ಮನೆ ನಿಂತುಕೊಂಡ. ಆದರೆ ಯಾರೂ ಬರಲಿಲ್ಲ; ನಿಂತು ನಿಂತು ಸಾಕಾಗಿ ಮತ್ತೆ ಒಳಗೆ ಹೋಗಿ ಬೆಂಚಿನ ಮೇಲೆ ಕುಳಿತುಕೊಂಡ.

ಆದರೆ, ಸ್ವಲ್ಪ ಹೊತ್ತಿನಲ್ಲಿಯೆ ದೂರದಲ್ಲಿ ಯಾರೊ ಕಿರಿಚಿದ ಹಾಗಾಯಿತು. ಹೃದಯ "ಗೌರಿಯೆ ಗೌರಿಯೆ!" ಎಂದಿತು. ಎದ್ದು ಹೊರಗೆ ಬಂದ. ದೂರದಲ್ಲಿದ್ದ ಹೆರಿಗೆ ರೂಮಿನಲ್ಲಿ ಯಾರೊ ಮಾತಾಡುತ್ತಿದ್ದರು. ಯಾರೊ ಗಟ್ಟಿಯಾಗಿ ನರಳುತ್ತಿದ್ದರು, ಏನೇನೊ ಶಬ್ದವಾಗುತ್ತಿತ್ತು. ರಾಮಸ್ವಾಮಿಗೆ ಗಾಬರಿಯಾಯಿತು. ಸ್ವಲ್ಪ ಹೊತ್ತು ಆ ಕಡೆಯೇ ನೋಡುತ್ತ ಸುಮ್ಮನೆ ನಿಂತಿದ್ದ. ಆ ಕೋಣೆಯಿಂದ ಯಾರೂ ಹೊರಗೆ ಬರಲಿಲ್ಲ. 'ಛೆ, ಗೌರಿ ಇರಲಾರದು. ಇನ್ನಾರೋ ಇರಬೇಕು. ರೋಗಿಗಳಿಂದಲೇ ತುಂಬಿರುವ ಈ ಆಸ್ಪತ್ರೆಯಲ್ಲಿ ಗೌರಿಯೇ ಕೂಗಿದಳೆಂದು ಹೇಗೆ ಊಹಿಸುತ್ತೀಯೆ' ಅಲ್ಲ ಎಂದು ಮನಸ್ಸು ಹೇಳಿತು. "ಹೌದು, ಸೀರಿಯಸ್ಸಾಗಿದ್ದಿದ್ದರೆ ಯಾರಾದರೂ ಬಂದು ಹೇಳುತ್ತಿದ್ದರು. ಗೌರಿ ಹುಷಾರಾಗಿರಬಹುದು. ಎಲ್ಲ ಸುಸೂತ್ರವಾಗಿ ನಡೆಯಬಹುದು" ಎಂದುಕೊಂಡು ರಾಮಸ್ವಾಮಿ ಪುನಃ ಕೋಣೆಯೊಳಕ್ಕೆ ಬಂದು, ಬೆಂಚಿನ ಮೇಲೆ ಕುಳಿತುಕೊಂಡ, ತಕ್ಷಣವೆ ಹೊರಗೆ ಬೂಟ್ಸಿನ ಸದ್ದಾಯಿತು.

ರಾಮುಸ್ವಾಮಿ ಎದ್ದು ನಿಂತ. ಹೆಡ್ ನರ್ಸ್ ಜಾನಕಮ್ಮ ಬೇಗ ಬೇಗ ಆ ಕೋಣೆಯ ಬಾಗಿಲ ಬಳಿಗೆ ಬಂದಳು. ರಾಮುಸ್ವಾಮಿಯನ್ನು ನೋಡಿ "ಇಲ್ಲಿದ್ದೀರಾ! ನಿಮ್ಮನ್ನೇ ಹುಡುಕಿಕೊಂಡು ಬಂದೆ. ನಿಮ್ಮ ಹೆಸರೇನು?" ಎಂದು ಕೇಳಿದಳು.

ರಾಮುಸ್ವಾಮಿ "ರಾಮುಸ್ವಾಮಿ" ಎಂದ.

ನರ್ಸ್ "ಇಟ್ ಈಸ್ ನಾಟ್ ಅನ್ ಈಸಿ ಕೇಸ್!—ಬಹಳ ಕಷ್ಟ. ಆಕೆಗೆ ತುಂಬ ಬೇಜಾರಾಗಿದೇಂತ ಕಾಣುತ್ತೆ" ಎಂದಳು. ರಾಮುಸ್ವಾಮಿಗೆ ಆ ಮಾತು ಅರ್ಥವಾಗಲಿಲ್ಲ.

"ಏನು! ನೀವು ಹೇಳೋದು ನನಗರ್ಥವಾಗಲಿಲ್ಲ"

"ಸ್ವಲ್ಪ ಹಿಸ್ಟರಿಕ್ ತರಹ ಆಗಿಬಿಟ್ಟಿದೆ."

"ಅಯ್ಯೊ, ಈಗ ಹೇಗಿದಾಳೆ? ಹೆರಿಗೆ ಆಯ್ತೆ?"

"ಇನ್ನೂ ಇಲ್ಲ. ಹೆರಿಗೆ ಆಗೋಹಾಗಿಲ್ಲ"

"ಹಾಗಂದ್ರೆ?"

"ಸುಲಭವಾಗಿ ಆಗೊಲ್ಲ. ಆಕೆಗೆ ತುಂಬ ಬೇಜಾರಾಗಿಬಿಟ್ಟಿದೇಂತ ಕಾಣುತ್ತೆ"

"ನಿಮ್ಮ ಮಾತು ನನಗರ್ಥವಾಗೊಲ್ಲ? ಯಾಕೆ? ಏನಂತಾಳೆ?"

"ನನ್ನನ್ನ ಸಾಯಿಸಿ, ಆ ಮಗೂನ ಬದುಕಿಸಿ ಅಂತ ಹುಚ್ಚು ಹುಚ್ಚಾಗಿ ಕಿರಿಚ್ತಾ ಇದಾರೆ ಆಕೆ. ಹಿಸ್ಟೀರಿಯಾ ತರಹಾನೇ"

ರಾಮುಸ್ವಾಮಿಗೆ ಗಾಬರಿಯಾಯಿತು.

"ಅಯ್ಯೊ ಯಾಕೆ! ನಾನು ಹೋಗಿ ನೋಡಬಹುದೆ?" ಎಂದು ಹೊರಗೆ ಹೊರಟ.

ಜಾನಕಮ್ಮ "ಇಲ್ಲಿ ಬನ್ನಿ ಇಲ್ಲಿ, ನಿಮ್ಮನ್ನ ಅಲ್ಲಿ ಬಿಡೊಲ್ಲ; ಅವರನ್ನ ಆಪರೇಷನ್ ಥೇಟರಿಗೆ ಸಾಗಿಸಿದೇವೆ. ಇನ್ನೊಂದರ್ಧ ಗಂಟೇಲಿ ಆಪರೇಷನ್ ಮಾಡಿಬಿಡ್ತೇವೆ." ಎಂದಳು.

"ಯಾಕೆ! ಬಹಳ ಕಷ್ಟವೆ?"

"ಹೆರಿಗೆ ಆಗೋ ಹಾಗೇ ಇಲ್ಲ. ಮಗು ಉಳಿದರೆ ತಾಯಿ

ಉಳಿಯೋ ಹಾಗಿಲ್ಲ, ತಾಯಿ ಉಳಿದರೆ ಮಗು ಉಳಿಯೋ ಹಾಗಿಲ್ಲ; ಹೇಗಾದರೂ ಆಪರೇಷನ್ ಆಗಲೇಬೇಕಾಗಿದೆ. ನಾವೇನೊ ಮಗೂನ ಕಟ್ ಮಾಡಿ ತೆಗೆದುಬಿಡೋಣಾಂತಿದೇವೆ. ಆದರೆ ಆಕೆ ಸುಮ್ಮನೆ ನಾನು ಸತ್ತರೂ ಚಿಂತೆಯಿಲ್ಲ, ಆ ಮಗೂನ ಬದುಕಿಸಿ ಅಂತ ಕೂಗ್ತಾ ಇದಾರೆ.—ಅದ್ಯಾಕೆ ಹಾಗ್ ಕೂಗ್ತಾರೆ!....ಹೋಗಲಿ ಬನ್ನಿ, ರಿಜಿಸ್ಟರ್ನಲ್ಲಿ ರುಜು ಮಾಡೋರಂತೆ" ಎಂದು ಆಕೆ ಪಕ್ಕದ ಕೋಣೆಯ ಕಡೆಗೆ ಹೋದಳು.

ಸಂದರ್ಭ, ರಾಮುಸ್ವಾಮಿಗೆ ವಿಚಿತ್ರವಾಗಿತ್ತು. ಮೂಕನಂತೆ ಜಾನಕಮ್ಮನ ಹಿಂದೆ ಹೋಗಿ ರಿಜಿಸ್ಟರಿನಲ್ಲಿ ರುಜು ಮಾಡಿದ; ಬರೆಯುವಾಗ ಕೈಗಡಗಡ ನಡುಗಿತು.

ಜಾನಕಮ್ಮ "ಸರಿ, ಅಲ್ಲಿ ಕೂತಿರಿ ನಾನು ಬರ್‍ತೀನಿ" ಎಂದು ಹೇಳಿ ಹೊರಟಳು.

ರಾಮುಸ್ವಾಮಿ "ನರ್ಸ್, ಒಂದು ನಿಮಿಷ. ಮಗು ಹೋದರೂ ಪರವಾಯಿಲ್ಲ. ದಯವಿಟ್ಟು ದೊಡ್ಡ ಜೀವ ಉಳಿಸಿ" ಎಂದು ಕೇಳಿಕೊಂಡ. ಆಗ ಅವನ ಧ್ವನಿ ನಡುಗುತ್ತಿತ್ತು, ದುಃಖ ತುಂಬಿಬಂದಿತ್ತು.

ಜಾನಕಮ್ಮ ಹೊರಟುಹೋದಳು.

ಆಪರೇಷನ್ ಯಶಸ್ವಿಯಾಗಿ ನಡೆಯಿತು.

ಮಗು ಹೋಯಿತು, ಗೌರಿ ಬದುಕಿದಳು.

೭

ಆ ಆಪರೇಷನ್ ಆದಮೇಲೆ ಗೌರಿ ಇಳಿದುಹೋದಳು. ಅವಳು ಹಾಗಾಗುತ್ತಾಳೆ, ಎಂದು ರಾಮುಸ್ವಾಮಿ ಕನಸಿನಲ್ಲಿಯೂ ಎಣಿಸಿರಲಿಲ್ಲ. ಹನ್ನೆರಡು ವರುಷದ ಆ ಮೈ ಕೇವಲ ಮೂರು ತಿಂಗಳಲ್ಲಿಯೇ ಮಾಯವಾಗಿತ್ತು. ಗೌರಿ ತುಂಬ ತೆಳ್ಳಗಾದಳು.

ಆಪರೇಷನ್ ಆದ ಮಾರನೆಯ ದಿನವೇ ರಾಮುಸ್ವಾಮಿ ಹೊಳೆನರಸೀಪುರಕ್ಕೆ ಕಾಗದ ಹಾಕಿದ್ದ. ಶಾಮಣ್ಣನವರು ಚಿಕ್ಕಮ್ಮನನ್ನು

ಕರೆದುಕೊಂಡು ಆ ದಿನವೇ ಮೈಸೂರಿಗೆ ಹೊರಟುಬಂದರು. ಅವರು ಆರು ದಿನ ಮೈಸೂರಿನಲ್ಲಿ ಇದ್ದು, ಚಿಕ್ಕಮ್ಮನನ್ನು ಅಲ್ಲಿಯೆ ಬಿಟ್ಟು ಊರಿಗೆ ವಾಪಸು ಹೊರಟರು. ಹೊಳೆನರಸೀಪುರಕ್ಕೆ ಹೊರಡುವ ದಿನ ಆಸ್ಪತ್ರೆಗೆ ಹೋಗಿ ಗೌರಿಯನ್ನು ನೋಡಿ "ಹುಷಾರಾಗಿರಮ್ಮ, ನಾನು ಹೋಗಿಬಿಟ್ಟು ಬರ್ತೀನಿ" ಎಂದು ಹೇಳಿ ಅವಳ ಅನುಮತಿ ಪಡೆದು ಊರು ಬಿಟ್ಟರು.

ಗೌರಿ ಹುಷಾರಾಗಿಯೇ ಇದ್ದಳು. ಆಸ್ಪತ್ರೆಯಿಂದ ಒಂಬತ್ತನೆಯ ದಿನವೇ ವಾಪಸು ಮನೆಗೆ ಬಂದಳು. ಅಂದಿನಿಂದ ಮೂರು ತಿಂಗಳು ಅವಳು ಹಾಸಿಗೆ ಬಿಟ್ಟು ಏಳಲಿಲ್ಲ; ಆದರೆ ಹಾಸಿಗೆಯಲ್ಲಿಯೇ ಕರಗಿ ಹೋದಳು.

ರಾಮಸ್ವಾಮಿ ಡಾಕ್ಟರ್ ಕೃಷ್ಣಮೂರ್ತಿಯನ್ನು ಮನೆಗೆ ಕರೆದು ಕೊಂಡುಬಂದು ತೋರಿಸಿದ. ಕೃಷ್ಣಮೂರ್ತಿ ಹಾಸಿಗೆಯಲ್ಲಿ ಮಲಗಿದ್ದ ಗೌರಿಯನ್ನು ಪರೀಕ್ಷಿಸಿ, "ಏನಿಲ್ಲ, ನಾನು ಬರೆದುಕೊಟ್ಟಿದೀನಲ್ಲ, ಆ ಟಾನಿಕ್ ತಂದುಕೊಡು. ಹೆಚ್ಚಿಗೆ ಆಯಾಸ ಮಾಡಿಕೊಳ್ಳದಹಾಗಿರಲಿ. ಏನೂ ಭಯವಿಲ್ಲ, ಹುಷಾರಾಗ್ತಾರೆ. ಈಗೇನಾದರೂ ವ್ಯತ್ಯಾಸ ಆದರೆ ಕರಿ, ನಾನು ಬಂದು ನೋಡ್ತೀನಿ" ಎಂದು ಹೇಳಿ ಹೊರಟುಹೋದ.

ಆಮೇಲೆ ಅವನಿಗೆ ಬರಲಾಗಲಿಲ್ಲ. ಗೌರಿಯನ್ನು ಪರೀಕ್ಷಿಸಿದ ಎಂಟು ದಿನಗಳಲ್ಲಿಯೇ ಕೃಷ್ಣಮೂರ್ತಿಗೆ ಶಿವಮೊಗ್ಗಾಕ್ಕೆ ವರ್ಗವಾಯಿತು.

ಮೂರು ತಿಂಗಳು ಏನೂ ಇರಲಿಲ್ಲ. ಆಮೇಲೆ ಹೊಟ್ಟೆ ನೋವು ಕಾಣಿಸಿಕೊಂಡಿತು. ಗೌರಿ "ಏಕೊ ನೋಯುತ್ತೆ" ಎಂದು ಚಿಕ್ಕಮ್ಮನಿಗೆ ಹೇಳಿದಳು. ಚಿಕ್ಕಮ್ಮ ಏನೇನೊ ಔಷಧ ಮಾಡಿದರು. ಆದರೆ ಗುಣ ವಾಗಲಿಲ್ಲ. "ಹೋಗುತ್ತೆ ಅದೇನು ಮಾಡುತ್ತೆ. ಮೂರು ತಿಂಗಳಿಂದ ಹಾಗೇ ಮಲಗಿದ್ದಿ ನೋಡು, ಆದ್ದರಿಂದ ಹಾಗಾಗಿದೆ; ಎದ್ದು ಓಡಾಡಿದರೆ ಸರಿಹೋಗುತ್ತೆ" ಎಂದುಬಿಟ್ಟರು. ಗೌರಿಯೂ ಹಾಗೆಯೇ ಅಂದು ಕೊಂಡಳು.

ಎದ್ದು ಓಡಾಡಿದ ಮೇಲೆ, 'ಸ್ವಲ್ಪ ವಾಸಿ' ಎನ್ನಿಸಿತು.

ಒಂದು ರಾತ್ರಿ ಗೌರಿ ಮಲಗುವ ಕೋಣೆಗೆ ಬಂದಾಗ, ರಾಮಸ್ವಾಮಿ

"ಈಗ ಹೇಗಿದೆ ಗೌರಿ ?" ಎಂದ. ಗೌರಿ "ಏನು ?" ಎಂದು ನಗುತ್ತಾ ಬಂದು ಪಕ್ಕದಲ್ಲಿ ಕುಳಿತುಕೊಂಡಳು.

"ನೋವು ?"

"ಈಗ ಇಲ್ಲ, ಮೂರುನಾಲ್ಕು ದಿನದಿಂದ ಇಲ್ಲ"

"ಓ, ಸರಿ. ಆಪರೇಷನ್ ಆದ ಆಮೇಲೆ ಹೊಲಿದಿದಾರೆ ನೋಡು; ಅದಕ್ಕೇ ಎಲ್ಲೊ ನೋಯ್ತಾ ಇತ್ತು ಅಂತ ಕಾಣುತ್ತೆ. ಅಥವಾ, ಬಾಣಂತಿ ಬೇನೆ ಅಂತ ನಾನು ಕೇಳಿದೀನಿ. ಅದೇ ತರಹ ಇದ್ದರೂ ಇರಬಹುದು. ಹಾಗಾದರೆ ಈವಾಗ ಸ್ವಲ್ಪಾನೂ ನೋವಿಲ್ಲ ?"

"ಇಲ್ಲ, ಹುಷಾರಾಗಿದೀನಿ"

"ನಿಜವಾಗೂ ?" ಎಂದು ರಾಮುಸ್ವಾಮಿ ಹೆಂಡತಿಯ ಬಲಗೈ ಹಿಡಿದು ಹಿಂಡಿದ.

ಗೌರಿ "ತಡೀರಿ, ಬಂದೆ. ಹಿತ್ತಲಬಾಗಿಲು ಹಾಕ್ಕೊಂಡು ಎಲಡಕೆ ತಟ್ಟೆ ತೊಗೊಂಡು ಬಂದುಬಿಡ್ತೀನಿ" ಎಂದು ಎದ್ದಳು.

"ಚಿಕ್ಕಮ್ಮ ಮಲಕ್ಕೊಂಡರಾ ?"

"ಹ್ಞು, ಇವತ್ತು ಏಕಾದಶಿ ತಾನೆ. ಬೆಳಗಿನಿಂದ ಏನೂ ಇಲ್ಲದೆ ತುಂಬ ಸುಸ್ತಾಗಿದಾರೆ"

"ಒಂದು ಲೋಟ ಹಾಲಾದರೂ ತೊಗೊಳ್ಳಿ ಅನ್ಬೇಕಾಗಿತ್ತು"

"ತೊಗೊಳಲ್ಲ. ಏನೂ ತೊಗೋಬಾರದಂತೆ"

"ಸರಿ, ಒಳ್ಳೆ ಏಕಾದಶಿ !"

ಗೌರಿ "ಬರ್ತೀನಿ ಬಾಗಿಲು ಹಾಕ್ಕೊಂಡು" ಎಂದು ಹೋದಳು. ಸ್ವಲ್ಪ ಹೊತ್ತಿನಲ್ಲಿಯೇ ಹಿತ್ತಲಬಾಗಿಲು ಬೀದಿಬಾಗಿಲು ಎಲ್ಲ ನೋಡಿಕೊಂಡು, ಎಲಡಕೆ ತಟ್ಟೆ ಹಿಡಿದುಕೊಂಡು ಕೋಣೆಯನ್ನು ಪ್ರವೇಶಿಸಿದಳು.

ರಾಮುಸ್ವಾಮಿ "ತಟ್ಟೆ ಇಲ್ಲಿಡು" ಎಂದು ಅಪ್ಪಣೆ ಮಾಡಿದ.

ಗೌರಿ "ಯಾಕೆ ?" ಎಂದು ತಟ್ಟೆ ಹಿಡಿದುಕೊಂಡೇ ಕೇಳಿದಳು.

"ಇಲ್ಲಿಡು, ನಾನು ಮಡಿಸಿಕೊಡ್ತೀನಿ"

“ಅದೇನು ?”

“ಇಷ್ಟು ದಿನವೂ ನೀನು ಮಡಿಸಿಕೊಡ್ತಿದ್ದಿ. ಇವತ್ತು ನಾನು ಮಡಿಸಿಕೊಡ್ತೀನಿ”

“ಸರಿ, ಹಾಗೇಮಾಡಿ” ಎಂದು ನಗುತ್ತಾ ಗೌರಿ ಎಲಡಕೆ ತಟ್ಟೆಯನ್ನು ರಾಮಸ್ವಾಮಿಯ ಕೈಗೆ ಕೊಟ್ಟಳು.

ರಾಮಸ್ವಾಮಿ ಎಲೆಗೆ ಸುಣ್ಣಹಚ್ಚುತ್ತ ಹೆಂಡತಿಯ ಮುಖ ನೋಡಿ “ಗೌರಿ, ಇಷ್ಟರ ಮಟ್ಟಿಗೆ ಆಗ್ತೀಯಾಂತ ನಾ ಬೇರೆ ನಂಬಿರಲಿಲ್ಲ” ಎಂದ.

“ನಿಮ್ಮ ಪುಣ್ಯ, ಬೇಗ ಹುಷಾರಾದೆ”

‘ನಿಮ್ಮ ಪುಣ್ಯ’ ಎಂದ ಕೂಡಲೆ ಹೆರಿಗೆಯ ದಿನದ ಚಿತ್ರ ರಾಮಸ್ವಾಮಿಯ ಕಣ್ಣು ಮುಂದೆ ಬಂದು ನಿಂತಿತು. ತಾಯಿ ಮಗು ಇಬ್ಬರನ್ನೂ ಉಳಿಸಿಕೊಳ್ಳುವ ಪುಣ್ಯವನ್ನು ಅವನು ಪಡೆದಿರಲಿಲ್ಲ. ಮಗು ಹೋಯಿತು; ಗೌರಿ ಬದುಕಿಕೊಂಡಳು. ಅವನು ಆ ದಿನ ಕೇಳಿಕೊಂಡದ್ದೂ ಹಾಗೆಯೆ. ಮಗು ಹೋದರೂ ಪರವಾಯಿಲ್ಲ, ದಯವಿಟ್ಟು ಗೌರಿಯನ್ನು ಉಳಿಸಿ, ಎಂದು ಬೇಡಿಕೊಂಡಿದ್ದ. ವಿಚಿತ್ರವಾದ ಆ ಸನ್ನಿವೇಶದಲ್ಲಿ ಅವನ ಪುಣ್ಯದ ಪರೀಕ್ಷೆ ನಡೆಯಿತು.

“ಗೌರಿ, ನೀನೇಕೆ ಅವತ್ತು ಹಾಗೆ ಹೇಳಿದ್ದು?”

“ಯಾವತ್ತು?”

“ಹೆರಿಗೆ ದಿನ”

“ಏನಂದೆ ?”

“ಏನಂದೆಯೊ ಜ್ಞಾಪಿಸಿಕೊ”

“ಯಾರೆದುರಿಗೆ ಹೇಳಿದ್ದು ?”

“ಹೆರಿಗೆ ರೂಮಿನಲ್ಲಿ—ಡಾಕ್ಟರ್ ಹತ್ತಿರ”

“ಏನೊ ನೆನಪಿಲ್ಲವಲ್ಲ !”

“ಎರಡು ಮೂರು ಸಲ ಗಟ್ಟಿಯಾಗಿ ಕೂಗಿ ಹೇಳಿದೆಯಂತೆ ?”

“ಏನಂತ ?”

“ಹೇಳಿದೋಳಿಗೇ ಗೊತ್ತಿಲ್ಲವೆ ? ಚೆನ್ನಾಯ್ತು!”

"ಇಲ್ಲ, ನಾನು ಏನೂ ಹೇಳಲಿಲ್ಲ."

"ಸುಳ್ಳು ಹೇಳ್ತೀಯ ?"

"ಇಲ್ಲ; ಖಂಡಿತವಾಗೂ, ಏನು ಹೇಳಿದೆನೊ ನನಗ್ಗೊತ್ತಿಲ್ಲ. ಆವಾಗ ಏನಾಯ್ತೊ ಒಂದೂ ನನಗೆ ಗೊತ್ತಿಲ್ಲ"

"ನಿಜವಾಗೂ ?"

"ನಿಜವಾಗೂ. ನಾನೇನೂ ಮಾತಾಡಲೇ ಇಲ್ಲ. ಸುಮ್ಮನೆ ಮಲಗಿದ್ದೆ"

"ಇಲ್ಲ. ನೀನು ಮಾತಾಡಿದಿ. ಆ ಹೆಡ್‌ನರ್ಸ್ ಬಂದು ಹೇಳಿದಳು"

"ಏನಂತ ?"

"ನೀನು ಹೇಳಿದ ಮಾತನ್ನ"

"ಏನು ನಾನು ಹೇಳಿದ್ದು ?"

"ನಾನು ಸತ್ತರೂ ಚಿಂತೆಯಿಲ್ಲ, ಮಗೂನ ಬದುಕಿಸಿ, ಮಗೂನ ಬದುಕಿಸಿ ಅಂತ ಕೂಗಿದೆಯಂತೆ ನೀನು?"

"ಇಲ್ಲ ನನಗೆ ನೆನಪಿಲ್ಲವಲ್ಲ !"

"ಜ್ಞಾಪಿಸಿಕೊ"

ಗೌರಿ ಸ್ವಲ್ಪ ಹೊತ್ತು ಸುಮ್ಮನಿದ್ದಳು.

ಇದ್ದಕ್ಕಿದ್ದಂತೆ "ಹೌದು, ಹಾಗಂದೇಂತ ಕಾಣುತ್ತೆ. ಅವರು ಆಪರೇಷನ್ ಮಾಡೋಣ ಅಂತಾಯ್ತು; ನಾನು ಸತ್ತರೂ ಚಿಂತೆಯಿಲ್ಲ, ಮಗೂನ ಬದುಕಿಸಿ ಅಂದೆ, ನಿಜ. ಆವಾಗ ಹಾಗೆ ಹೇಳಿದೆ" ಎಂದಳು.

ರಾಮಸ್ವಾಮಿ ತಕ್ಷಣವೆ "ಹಾಗೆ ಹೇಳಬಹುದೆ ಗೌರಿ ?" ಎಂದು ಹೆಂಡತಿಯ ಕೈಹಿಡಿದುಕೊಂಡ.

"ನೀನಿದ್ದರೆ ತಾನೆ ಮಗು ?"

ಗೌರಿ ಗಂಡನ ತೋಳಿನೊಳಗೆ ಬಂದಳು.

ರಾಮಸ್ವಾಮಿ ಅವಳನ್ನು ಬಲವಾಗಿ ಅಪ್ಪಿಕೊಂಡ.

* * * * *

ಆರು ತಿಂಗಳು ಗೌರಿ ಆರೋಗ್ಯವಾಗಿಯೇ ಇದ್ದಳು. ಇನ್ನು ಪರವಾಯಿಲ್ಲ, ಅಡಿಗೆ ಕೆಲಸ ಮಾಡಿಕೊಳ್ಳುತ್ತೇನೆ ಎಂಬ ನಂಬಿಕೆ ಅವಳಿಗೆ ಬಂದಿತ್ತು; ತಂದೆಗೆ ಹೊಳೆನರಸೀಪುರದಲ್ಲಿ ತುಂಬ ತೊಂದರೆಯಾಗಿದೆ ಎಂಬುದು ಗೊತ್ತಿದ್ದುದರಿಂದ ಚಿಕ್ಕಮ್ಮನನ್ನು ಊರಿಗೆ ಕಳಿಸಬಹುದೆಂದು ಕೊಂಡಳು. "ಚಿಕ್ಕಮ್ಮ, ಇನ್ನು ಪರವಾಯಿಲ್ಲ, ನಾನು ಮಾಡ್ಕೊಳ್ತೀನಿ. ನೀವು ಹೊರಡಿ, ಅಲ್ಲಿ ಅಣ್ಣಂಗೆ ತುಂಬ ತೊಂದರೆ ಆಗುತ್ತೆ" ಎಂದಳು. ಹೊಳೆನರಸೀಪುರಕ್ಕೆ ಬೇಗ ಹೋಗಬೇಕೆಂದು ಚಿಕ್ಕಮ್ಮನಿಗೂ ಅನ್ನಿಸಿತ್ತು. ಆಗಲೆ ಎರಡು ಮೂರು ಸಲ ಆಕೆ ಅದನ್ನು ವ್ಯಕ್ತಪಡಿಸಿದ್ದಳು. ಗೌರಿ ಅಪ್ಪಣೆ ಕೊಟ್ಟ ಆರು ದಿನಗಳಲ್ಲಿಯೇ ಚಿಕ್ಕಮ್ಮ ಹೊಳೆನರಸೀಪುರಕ್ಕೆ ಹೊರಟಳು. ಶಾಮಣ್ಣನವರು 'ನನಗೆ ತೊಂದರೆ ಆದರೂ ಚಿಂತೆಯಿಲ್ಲ, ಇನ್ನೂ ಒಂದೆರಡು ವಾರ ಇದ್ದು ಬಾ, ಗೌರಿ ಚೆನ್ನಾಗಿ ಹುಷಾರಾದ ಮೇಲೆ ಹೊರಟು ಬಾ. ಅವಳಿಗೆ ತುಂಬ ತೊಂದರೆ ಆಗುತ್ತೆ' ಎಂದು ಬರೆದಿದ್ದರೂ, ಚಿಕ್ಕಮ್ಮ "ನಾನು ಶಾಮಣ್ಣಂಗೆ ಹೇಳ್ತೀನಿ. ಈಗ ಪರವಾಯಿಲ್ಲ, ಹುಷಾರಾಗಿದೀಯಲ್ಲ" ಎಂದು ಹೇಳಿ ಸಾಮಾನು ಕಟ್ಟಿ ಕೊಂಡಳು.

ಆಕೆ ಊರಿಗೆ ಹೋದಮೇಲೆ ಒಂದು ವಾರ ಗೌರಿ ಯಾರ ಸಹಾಯವೂ ಇಲ್ಲದೆ ಅಡಿಗೆ ಕೆಲಸಮಾಡಿಕೊಂಡಳು. ಕಸಮುಸರೆಗಾಗಿ ಇದ್ದ ನಿಂಗಿ ಹೊರಗಿನ ಕೆಲಸಗಳನ್ನೆಲ್ಲ ನೋಡಿಕೊಳ್ಳುತ್ತಿದ್ದಳು. ಆದರೆ ಒಂದು ವಾರದೊಳಗಾಗಿ ಗೌರಿ ಸುಸ್ತಾದಳು.

ಭಾನುವಾರ ರಾತ್ರಿ "ಆಗೊಲ್ಲಾಂದ್ರೆ. ಹೊಟ್ಟೇಲಿ ಯಾಕೋ ಚಳುಕಾಗುತ್ತೆ. ದಡಬಡ ಕೆಲಸ ಮಾಡೋಕಾಗೊಲ್ಲ. ಯಾರಾದರೂ ಅಡಿಗೆಯೋಳನ್ನ ನೋಡಲಾ?" ಎಂದು ಗಂಡನನ್ನು ಕೇಳಿದಳು.

ರಾಮಸ್ವಾಮಿ ಹಾಸಿಗೆ ಹಾಸುತ್ತ "ನೋಡು, ಆದರೆ ಆ ಭಾಗೀರತಮ್ಮನಂಥವರು ಮಾತ್ರ ಬೇಡ" ಎಂದು ನಕ್ಕ.

ಗೌರಿ ವಿಚಾರಿಸಿದಳು. ಆದರೆ ಯಾರೂ ಸರಿಯಾದವರು ಸಿಕ್ಕಲಿಲ್ಲ. ಎರಡು ಹೊತ್ತು ಅನ್ನ ನೀರು ಕಳೆಯುವುದು ಬಹಳ ಪ್ರಯಾಸವಾಯಿತು.

ಅವಳ ಕೆಲಸದಲ್ಲಿ ಅರ್ಧವನ್ನು ರಾಮಸ್ವಾಮಿಯೂ ಹಂಚಿಕೊಂಡ. ಒಂದೊಂದು ದಿನ ರಾತ್ರಿ ರಾಮಸ್ವಾಮಿಯೇ ಅಡಿಗೆ ಮಾಡುತ್ತಿದ್ದ. ಗೌರಿ "ಯಾಕೊ ತುಂಬ ಸುಸ್ತಾಗುತ್ತೇಂದ್ರೆ" ಎಂದು ಹಾಸಿಗೆ ಉರುಳಿಸಿಕೊಂಡು ಮಲಗಿಬಿಡುತ್ತಿದ್ದಳು.

ಒಂದು ದಿನ, ಹೊಟ್ಟೆ ನೋಯುತ್ತಿದ್ದರೂ ಏಳು ಗಂಟೆಗೇ ಎದ್ದು ಕಾಫಿ ಒಲೆ ಹೊತ್ತಿಸಿದಳು. ರಾಮಸ್ವಾಮಿ ಎಚ್ಚರವಾಗಿದ್ದರೂ ಸುಮ್ಮನೆ ಮಲಗಿಕೊಂಡಿದ್ದ. ಅದಕ್ಕೆ ಕಾರಣವೂ ಇತ್ತು.

ಹದಿನೈದು ಇಪ್ಪತ್ತು ದಿನಗಳಿಂದ ಆಫೀಸು ಕೆಲಸ ಮನೆಗೆಲಸ ಎರಡೂ ಮಾಡಿ ಅವನಿಗೆ ಬೇಜಾರಾಗಿತ್ತು. ಹಿಂದಿನ ದಿನ ಸಂಜೆ ಆಫೀಸಿನಲ್ಲಿ ಮೀಟಿಂಗ್ ಇದ್ದುದರಿಂದ ಮನೆಗೆ ತಡವಾಗಿ ಬಂದ. ಗೌರಿ ಒಂಬತ್ತು ಗಂಟೆಯಾದರೂ ಅನ್ನಕ್ಕಿಡದೆ ಸುಮ್ಮನೆ ಮಲಗಿದ್ದಳು. ಬಟ್ಟೆ ಬಿಚ್ಚುತ್ತ "ಇನ್ನೂ ಅನ್ನಕ್ಕಿಟ್ಟಿಲ್ಲಾ!" ಎಂದ. ಗೌರಿ "ನೀವು ಬರ್ತೀರೇನೋ ಅಂತ ಸುಮ್ಮನೆ ಇದ್ದೆ. ಯಾಕೊ ನೋವು ಹಾಗೇ ಇದೆ ಅಂದರೆ. ಏಳೋಕಾಗೊಲ್ಲ" ಅಂದಳು. ಹೆಂಡತಿಯ ಶುಶ್ರೂಷೆ ಮಾಡಿ ಮಾಡಿ ಸಾಕಾಗಿದ್ದ ರಾಮಸ್ವಾಮಿಗೆ ತಕ್ಷಣವೆ ರೇಗಿತು. "ಎದ್ದು ಒಂದನ್ನಕ್ಕಿಟ್ಟು ಮಲಕ್ಕೊಳ್ಳೋಕಾಗ್ತಿರಲಿಲ್ಲವೆ? ಇದ್ದಿಲೊಲೆ ಮೇಲೆ ಅದರ ಪಾಡಿಗೆ ಅದಾಗ್ತಿತ್ತು" ಎಂದ. ಗೌರಿ "ಏನ್ಮಾಡಲಿ, ನನ್ನ ಕೈಲಾಗೊಲ್ಲ" ಎಂದಳು.

ರಾಮಸ್ವಾಮಿ "ನಿನ್ನ ಕೈಲಿ ಯಾವತ್ತು ಆಗುತ್ತೆ! ಏನ್ಮಾಡೋದು, ನನ್ನ ಹಣೇಬರಹ" ಎಂದುಕೊಂಡು ಕೈಕಾಲು ತೊಳೆದುಕೊಳ್ಳಲು ಬಚ್ಚಲು ಮನೆಗೆ ಹೋದ.

ಗೌರಿಗೆ ಆ ಮಾತು ಕೇಳಿ ತುಂಬ ದುಃಖವಾಯಿತು. ಅಳುತ್ತಾ ಮಲಗಿಬಿಟ್ಟಳು.

ರಾಮಸ್ವಾಮಿ ಬೇಗ ಅನ್ನ ಮಾಡಿದ. ತಟ್ಟೆ ಹಾಕಿ ಬಡಿಸಿ "ಏಳು ಬಡಿಸಿದೀನಿ" ಎಂದು ಕರೆದ. ಗೌರಿ ಏಳಲಿಲ್ಲ. ಎರಡು ಮೂರು ಬಾರಿ ಹೇಳಿದ. ಆದರೆ ಅವಳು ಮಾತೇ ಆಡದೆ ಸುಮ್ಮನೆ ಕಣ್ಣು ಮುಚ್ಚಿಕೊಂಡು ಮಲಗಿದ್ದಳು. ಅವಳಿಗೆ ನಿದ್ದೆ ಬಂದಿರಲಿಲ್ಲ.

ರಾಮಸ್ವಾಮಿಗೆ ಮತ್ತೆ ರೇಗಿ, "ಎದ್ದರೆ ಏಳು ಬಿಟ್ಟರೆ ಬಿಡು. ನನಗೇನು" ಎಂದು ತಾನೊಬ್ಬನೇ ಊಟ ಮಾಡಿದ. ಎಲೆ ಗೋಮ ಮುಗಿಸಿ ಹಾಸಿಗೆ ಉರುಳಿಸಿಕೊಂಡು ಮಲಗಿಬಿಟ್ಟ. ಎಷ್ಟು ಹೊತ್ತಾದರೂ ಗೌರಿ ಏಳಲಿಲ್ಲ. ರಾಮಸ್ವಾಮಿ ಮತ್ತೆ "ಏ, ಏಳೆ. ಒಂದು ತುತ್ತು ಊಟ ಮಾಡಿ ಮಲಕ್ಕೊ" ಎಂದ. ಆದರೆ ಗೌರಿ ಉತ್ತರ ಕೊಡಲಿಲ್ಲ. ಎದ್ದು ಬಂದು, ಅವಳ ಮೈ ಮುಟ್ಟಿ "ಏಳು ಬಡಿಸ್ತೀನಿ. ಒಂದು ತುತ್ತು ಊಟ ಮಾಡಿ ಮಲಕ್ಕೊ" ಎಂದ. ಗೌರಿ "ಉಹ್ಞು, ಬೇಡ. ನಂಗ್ ಹಸಿವಿಲ್ಲ" ಎಂದು ಗೋಡೆಯ ಕಡೆ ಸರಕ್ಕನೆ ತಿರುಗಿಕೊಂಡಳು. ರಾಮಸ್ವಾಮಿಗೆ ಕೋಪ ಬಂತು. "ಹೋಗ್ ನಡಿ, ನಂಗೇನು. ಕೆಲಸ ಮಾಡೋಕೆ ಶಕ್ತಿ ಇಲ್ಲದಿದ್ದರೂ ಹಟ ಮಾಡೋಕೆ ಬೇಕಾದಷ್ಟಿದೆ. ನಾನೇನೀವಾಗ ಅಂದಿದ್ದು?" ಎಂದು ಕೂಗಿದ. ಗೌರಿ ಸುಮ್ಮನೆ ಮಲಗಿದ್ದಳು; ಅಲ್ಲಾಡಲಿಲ್ಲ.

ರಾಮಸ್ವಾಮಿ "ಥೂ, ಸುಡುಗಾಡು! ಒಳ್ಳೇ ಪ್ರಾರಬ್ಧ ಗಂಟು ಬಿತ್ತು!" ಎಂದು ಹೋಗಿ ಹಾಸಿಗೆಯ ಮೇಲೆ ಮಲಗಿಬಿಟ್ಟ. ಅವನು ಅವಳ ಶುಶ್ರೂಷೆಯಲ್ಲಿ ತುಂಬ ಹಣ್ಣಾಗಿದ್ದ. ತನು ಮನ ಧನ ಎಲ್ಲವನ್ನೂ ನೀಡಿ ಶ್ರಮಿಸಿದ್ದ. ದುಡಿದು ಆಯಾಸವಾಗಿದ್ದ ಆ ಮನಸ್ಸು ಅವನ ಬಾಯಿಂದ ಈ ಮಾತು ಆಡಿಸಿತು; ಆಡಿಬಿಟ್ಟ. ಆದರೆ ಅದು ಗೌರಿಯ ಮನಸ್ಸನ್ನು ತುಂಬ ನೋಯಿಸಿತು. ಎಷ್ಟು ಹೊತ್ತಾದರೂ ಅವಳಿಗೆ ನಿದ್ದೆಯೇ ಬರಲಿಲ್ಲ. ಗಂಡನ ಮಾತಿನ ಪೆಟ್ಟು ಹೊಟ್ಟೆನೋವಿಗಿಂತ ಹೆಚ್ಚು ಸಂಕಟವನ್ನುಂಟುಮಾಡಿತ್ತು. ಆದ್ದರಿಂದ ಬೆಳಗ್ಗೆ ಏಳು ಗಂಟೆಗೇ ಎದ್ದು ಅಡಿಗೆಮನೆ ಸೇರಿದ್ದಳು.

ರಾಮಸ್ವಾಮಿ ಸುಮ್ಮನಿದ್ದ. ಏನೂ ಮಾತಾಡಲಿಲ್ಲ. ಎದ್ದು ಮುಖ ತೊಳೆದುಕೊಂಡು ಕೋಣೆಗೆ ಬಂದ. ಅಷ್ಟು ಹೊತ್ತಿಗೆ ಗೌರಿ ಒಂದು ಲೋಟದ ತುಂಬ ಕಾಫಿ ತಂದು, ಕೋಣೆಯಲ್ಲಿದ್ದ ಮೇಜಿನ ಮೇಲಿಟ್ಟು ಹೊರಟುಹೋದಳು. ಅವಳೂ ಮಾತಾಡಲಿಲ್ಲ, ಅವನೂ ಮಾತಾಡಲಿಲ್ಲ. ಕಾಫಿ ಕುಡಿದು, ಸೈಕಲ್ ತಳ್ಳಿಕೊಂಡು ಹೊರಗೆ ಹೊರಟುಬಿಟ್ಟ.

ಅವನು ಒಂದು ಸುತ್ತು ಸುತ್ತಿಕೊಂಡು ಮನೆಗೆ ಬರುವ ಹೊತ್ತಿಗೆ ಹತ್ತೂಕಾಲು ಗಂಟೆಯಾಗಿತ್ತು. ಬಟ್ಟೆ ಬಿಚ್ಚಿ ಕೈಕಾಲು ತೊಳೆದುಕೊಂಡು ಅಡಿಗೆಮನೆಯ ಕಡೆ ಬಗ್ಗಿ ನೋಡಿದ. ಗೌರಿ ಮಣೆ, ತಟ್ಟೆ, ಲೋಟ ಎಲ್ಲ ಇಟ್ಟು ಗಂಡನಿಗೆ ಅನ್ನ ಬಡಿಸಲು ಸಿದ್ಧವಾಗಿ ಒಲೆಯ ಮುಂದೆ ಸುಮ್ಮನೆ ಕುಳಿತಿದ್ದಳು. ರಾಮಸ್ವಾಮಿ ಒಳಗೆ ಹೋಗಿ ಮಣೆಯ ಮೇಲೆ ಕುಳಿತು ಕೊಂಡ. ಗೌರಿ ಅನ್ನ ಬಡಿಸಿದಳು. ಸಮಯೋಚಿತವಾಗಿ 'ಸಾಕು ಬೇಕು' ಎರಡೇ ಮಾತಿನಲ್ಲಿ ಊಟ ಮುಗಿಸಿ, ರಾಮಸ್ವಾಮಿ ಎದ್ದು ಹೊರಟುಬಿಟ್ಟ. ಮನಸ್ಸಿಗೆ ಬೇಸರವಾಗಿದ್ದುದರಿಂದ, ಗೌರಿ ಎದ್ದು ಬಂದು ಎಲೆ ಅಡಕೆ ಕೊಡುವುದರೊಳಗಾಗಿ ಬಟ್ಟೆ ಹಾಕಿಕೊಂಡು ಆಫೀಸಿಗೆ ಹೊರಟುಬಿಟ್ಟ. ಸೈಕಲ್ ಸದ್ದಾದುದೂ, ಬೀದಿಯ ಬಾಗಿಲು ಮುಚ್ಚಿ ಕೊಂಡುದೂ ಅಡಿಗೆ ಮನೆಯಲ್ಲಿದ್ದ ಗೌರಿಗೆ ಕೇಳಿಸಿತು. ಆದರೆ ಅವಳು ಎದ್ದು ಬರುವ ಹಾಗಿರಲಿಲ್ಲ; ಹೊಟ್ಟೆ ಹಿಡಿದುಬಿಟ್ಟಿತ್ತು. ಒಲೆಯ ಹತ್ತಿರ ಸುಮ್ಮನೆ ಕುಳಿತುಬಿಟ್ಟಿದ್ದಳು; ತಡೆಯಲಾಗಲಿಲ್ಲ, ಅಲ್ಲೇ ಮಲಗಿ ಬಿಟ್ಟಳು.

ರಾಮಸ್ವಾಮಿಗೆ ಆಫೀಸಿನಲ್ಲಿ ಕೆಲಸಮಾಡಲು ಕೈಯೇ ಓಡಲಿಲ್ಲ. ಏಕೊ ಗಂಟಲು ಬಿಗಿಯುತ್ತಿತ್ತು. ಮನಸ್ಸಿಗೆ ಸಮಾಧಾನವಿರಲಿಲ್ಲ. ಕುರ್ಚಿಯ ಮೇಲೆ ಸುಮ್ಮನೆ ಕುಳಿತಿದ್ದ. ಮೂರು ಗಂಟೆ ಹೊತ್ತಿಗೆ ಮನೆಗೆ ಹೊರಟುಹೋಗೋಣ, ಎಂದುಕೊಂಡ. ಆದರೆ ಎರಡೂವರೆಗೇ ಸಾಹೇ ಬರು ಒಂದು ಚೀಟಿ ಕಳಿಸಿದರು. ಎದ್ದು ಹೋಗಿ ಅವರನ್ನು ನೋಡಿದ. "ಚಾಮುಂಡಿಪುರಂನಲ್ಲಿ ನಾಡಿದ್ದು ಚಾಮುಂಡೇಶ್ವರಿ ಕೊ-ಆಪರೇಟಿವ್ ಸೊಸೈಟಿ ಓಪನಿಂಗ್ ಸೆರಿಮನಿ ಇಟ್ಟುಕೊಂಡಿದಾರೆ. ರಿಜಿಸ್ಟ್ರಾರ್ ಸಾಹೇಬರು ನಾಳೆ ಸಂಜೆ ಇಲ್ಲಿಗೆ ಬರ್‍ತಾರೆ. ಅವರ ಕೈಯಲ್ಲೇ ಓಪನ್ ಮಾಡಿಸೋದು ಸೂಕ್ತವಾಗಿದೆ. ಆದ್ದರಿಂದ ಸೆಕ್ರೆಟರಿ ರಾಮಣ್ಣೋರ ಮನೇಗೆ ಹೋಗಿ ಹೇಳಿ—ನನ್ನ ಕೈಯಿಂದ ಬೇಡ, ರಿಜಿಸ್ಟ್ರಾರ್‌ನ್ನೇ ಕೇಳಿ ಕೊಂಡು ಅವರ ಕೈಯಲ್ಲೇ ಮಾಡಿಸೋಣ ಅಂತಂದರು ರಾಮಚಂದ್ರ ರಾಯ್ರು ಅನ್ನಿ.' ಗೊತ್ತಾಯ್ತೊ ನಾ ಹೇಳಿದ್ದು. ಅವರಿಗೆ ಸರಿಯಾಗಿ

ಹೇಳಬೇಕು, ಏರ್ಪಾಟು ಗೀರ್ಪಾಟೆಲ್ಲ ಸ್ವಲ್ಪ ಚೆನ್ನಾಗಿರಬೇಕೂಂತ. ನೀವೂ ನೋಡಿಕೊಂಡ್ಬನ್ನಿ ಜಾಗ ಗೀಗ ಎಲ್ಲ" ಎಂದು ಸಾಹೇಬರು ಹೇಳಿ ಕಳಿಸಿದರು.

ರಾಮಸ್ವಾಮಿ ಸೈಕಲ್ ತೆಗೆದುಕೊಂಡು ಚಾಮುಂಡಿ ಎಕ್ಸ್‌ಟೆನ್‌ಷನ್ ಕಡೆ ಹೊರಟ.

ಸೆಕ್ರೆಟರಿ ರಾಮಣ್ಣನವರೊಡನೆ ಮಾತಾಡಿಕೊಂಡು, ಸೊಸೈಟಿಯ ಕಟ್ಟಡ ಜಾಗಗೀಗ ಎಲ್ಲ ನೋಡಿಕೊಂಡು ಹೊರಡುವ ಹೊತ್ತಿಗೆ ನಾಲ್ಕೂವರೆ ಆಗಿಹೋಗಿತ್ತು. "ಐದು ಗಂಟೆ ಸಮಯ, ಇನ್ನೇನು ಮನೆಗೆ ಹೊರಡೋಣ. ಬೆಳಗ್ಗೆ ಸಾಹೇಬರನ್ನ ನೋಡಿದರಾಯ್ತು" ಎಂದುಕೊಂಡು, ಆಫೀಸಿನ ಕಡೆಗೆ ಮುಖಮಾಡಿದ್ದ ಸೈಕಲನ್ನು ವೈಸರಾಯ್‌ರಸ್ತೆಯ ಕಡೆಗೆ ತಿರುಗಿಸಿದ.

ಜೈನ್‌ಬೋರ್ಡಿಂಗ್ ಹೋಂ ದಾಟಿ, ಐದು ದೀಪದ ಕಂಬದ ಸರ್ಕಲಿಗೆ ಬಂದ. ಯಾರೋ ಚಪ್ಪಾಳೆ ಹೊಡೆದ ಹಾಗಾಯಿತು. ಯಾರಿಗೊ ಏನೊ ಎಂದುಕೊಂಡು ರಾಮಸ್ವಾಮಿ ಮುಂದೆ ಹೊರಟ. ಮತ್ತೆ ಚಪ್ಪಾಳೆಯ ಸದ್ದಾಯಿತು. ಹಿಂದೆ 'ಸಾರ್' ಎಂಬ ಕೂಗೂ ಕೇಳಿಸಿತು. ಸೈಕಲ್ ನಿಲ್ಲಿಸಿ ಕೆಳಗಿಳಿದ; ಹಿಂದಕ್ಕೆ ತಿರುಗಿ ನೋಡಿದ. ಯಾರೂ ಕಾಣಿಸಲಿಲ್ಲ. ರಸ್ತೆಯಲ್ಲಿ ಯಾರೂ ಬರುತ್ತಿರಲಿಲ್ಲ. 'ಯಾರೂ ಇಲ್ಲ' ಎಂದುಕೊಂಡು ಸೈಕಲ್ ಹತ್ತಲು ಹೊರಟ. "ಸಾರ್" ಎಂಬ ಕೂಗು ಮತ್ತೆ ಆ ಸರ್ಕಲ್‌ನಿಂದ ಬಂತು. ರಾಮಸ್ವಾಮಿ ನಿಂತು ಸರ್ಕಲ್ ಕಡೆಗೆ ತಿರುಗಿ ನೋಡಿದ. ಸರ್ಕಲಿನ ಕಲ್ಲುಗೋಡೆಯ ಮೇಲೆ, ಮಾಸಿದ ಅಂಗಿ ಹಾಕಿಕೊಂಡು ಕುಳಿತಿದ್ದ ಒಬ್ಬ ವ್ಯಕ್ತಿ ಚಪ್ಪಾಳೆ ಹೊಡೆದು "ಬನ್ನಿ ಸಾರ್!" ಎಂದು ಕರೆದ. ರಾಮಸ್ವಾಮಿ ಅಲ್ಲೇ ನಿಂತು "ಯಾಕೆ?" ಎಂದು ಕೇಳಿದ. ಆ ವ್ಯಕ್ತಿ ಕುಳಿತುಕೊಂಡೇ "ಸ್ವಲ್ಪ ಬನ್ನಿ ಸಾರ್!" ಎಂದು ಕೂಗಿದ. ರಾಮಸ್ವಾಮಿ 'ಏನೊ, ಪಾಪ' ಎಂದುಕೊಂಡು ಸೈಕಲ್ ತಿರುಗಿಸಿ, ಆ ವ್ಯಕ್ತಿಯ ಹತ್ತಿರಕ್ಕೆ ಬಂದ.

"ನೀವೇನ ನನ್ನ ಕರೆದದ್ದು ?"

"ಹೌದು."

"ಏನು?"

"ಏನೂ ಇಲ್ಲ. ಸ್ವಲ್ಪ ಆ ಸೈಕಲ್ ಹಾಗಿಡಿ" ಎಂದು ಆ ವ್ಯಕ್ತಿ ಸರ್ಕಲಿನ ಗೋಡೆಯ ಕಡೆ ಕೈ ಮಾಡಿ ತೋರಿಸಿದ. ಅವನ ನಡತೆ ವಿಚಿತ್ರವಾಗಿತ್ತು.

ರಾಮಸ್ವಾಮಿ "ಯಾಕೆ?" ಅಂದ.

ಆತ "ಅದನ್ನು ಅಲ್ಲಿಟ್ಟು ಒಂದು ನಿಮಿಷ ಬನ್ನಿ. ಒಂದು ವಿಷಯ ಹೇಳಬೇಕು ನಿಮಗೆ" ಎಂದ.

ಕೆದರಿದ ತಲೆಗೂದಲು, ಕುರುಚಲು ಗಡ್ಡ, ಮಾಸಿದ ಅಂಗಿ, ಕೈಯಲ್ಲಿದ್ದ ಹರುಕು ಕಾಕಿ ಚೀಲ ನೋಡಿ 'ಹುಚ್ಚ ಇರಬಹುದು' ಎನ್ನಿಸಿತು. ಆದರೆ ಆ ವ್ಯಕ್ತಿ ಇವನಿಗೇ ಹುಚ್ಚು ಹಿಡಿಸಿದ.

ಏನು ಹೇಳುತ್ತಾನೊ ನೋಡೋಣ, ಎಂದುಕೊಂಡು ಸೈಕಲನ್ನು ಕಲ್ಲು ಗೋಡೆಗೆ ಒರಗಿಸಿ ರಾಮಸ್ವಾಮಿ ಅವನ ಹತ್ತಿರಕ್ಕೆ ಬಂದ. ಅವನು ಏಕೊ ಸ್ವಲ್ಪ ಹೊತ್ತು ಇವನ ಮುಖವನ್ನೇ ದೃಷ್ಟಿಸಿ ನೋಡಿದ. ಇದ್ದಕ್ಕಿದ್ದಂತೆಯೇ ಕಣ್ಣು ಮುಚ್ಚಿಕೊಂಡು "ನಿಮ್ಮ ಹೆಸರೇನು?" ಎಂದು ಕೇಳಿದ. ರಾಮಸ್ವಾಮಿ 'ಓ ನಿಜ, ಇವನು ಹುಚ್ಚ' ಎಂದುಕೊಂಡ. ಆದರೂ ಅಸಮಾಧಾನ ಮಾಡಿ ಅವನನ್ನೇಕೆ ರೇಗಿಸಬೇಕೆಂದು "ನನ್ನ ಹೆಸರು ರಾಮಸ್ವಾಮಿ" ಎಂದ.

ತಕ್ಷಣವೆ ಆ ವ್ಯಕ್ತಿ ಚೀಲದಲ್ಲಿದ್ದ ಒಂದು ಹಳೆಯ ಪುಸ್ತಕ ತೆಗೆದು, ಜೇಬಿನಲ್ಲಿದ್ದ ಪುಟ್ಟ ಸೀಸದಕಡ್ಡಿ ಹಿಡಿದು ಪುಸ್ತಕದಲ್ಲಿ ಏನೇನೊ ಬರೆದ. ರಾಮಸ್ವಾಮಿ, 'ಥೆ ಇವನ ಹತ್ತಿರ ಏನು, ಮನೆಗೆ ಹೊರಡೋಣ' ಎಂದುಕೊಂಡು ಸೈಕಲ್ ಕಡೆಗೆ ಹೊರಟ. ಆ ವ್ಯಕ್ತಿ "ಅಯ್ಯೊ, ಒಂದು ನಿಮಿಷ ಬನ್ನಿ ಇಲ್ಲಿ. ನಿಮಗೆ ಒಂದು ವಿಷಯ ಹೇಳಬೇಕು. ಅದಕ್ಕೇ ಕೂತಿದೀನಿ!" ಎಂದ. ಅವನ ಮಾತು ವಿಚಿತ್ರವಾಗಿತ್ತು. ರಾಮಸ್ವಾಮಿ ಸುಮ್ಮನೆ ನಿಂತುಕೊಂಡ. ಆ ವ್ಯಕ್ತಿ ಪುಸ್ತಕವನ್ನೇ ನೋಡುತ್ತ ಕೈ ಬೆರಳು ಆಡಿಸಿ ಏನೇನೊ ಗೊಣಗಿಕೊಂಡ.

ತಕ್ಷಣವೆ "ಸಾರ್, ಈವಾಗ ನೀವು ಮನೇಗೆ ಹೊರಟ್ಹೋಗಿ. ನಿಮ್ಮ ಹೆಂಡತಿ ಸತ್ಹೋಯ್ಗ್ಬಿಟ್ಟಿದಾರೆ!" ಎಂದ.

ಆ ಮಾತು ಕೇಳಿದ ಕೂಡಲೆ ರಾಮುಸ್ವಾಮಿಗೆ ಸ್ವಲ್ಪ ಗಾಬರಿ ಯಾಯಿತು. ಆದರೆ, ಇವನು ಹುಚ್ಚ ಎಂಬುದು ನೆನಪಾದಾಗ 'ಛೆ ಸುಳ್ಳು' ಎಂದುಕೊಂಡ. ನೋಡೋಣ ಏನು ಹೇಳುತ್ತಾನೊ ಎಂದು ಕೊಂಡು "ನಿನಗೆ ಹೇಗೆ ಗೊತ್ತು?'' ಎಂದು ಕೇಳಿದ. ಅದಕ್ಕೆ ಆ ವ್ಯಕ್ತಿ "ನನಗೆ ಈಗ ಗೊತ್ತಾಯ್ತು. ನಿಮ್ಮ ಹೆಂಡತೀಗೆ ಕಾಯಿಲೆ ಆಗಿತ್ತು. ಮಲಕ್ಕೊಂಡ್ಬಿಟ್ಟಿದಾರೆ, ಇಷ್ಹೊತ್ತಿಗೆ ಸತ್ಹೋಯ್ಗ್ಬಿಟ್ಟಿದಾರೆ! ಹೋಗಿ, ಬೇಗ ಮನೇಗೆ ಹೋಗಿ. ನಂಗೊತ್ತು ಹೊರಡಿ. ಮನೇಲಿ ಯಾರೂ ಇಲ್ಲ, ಬೇಗ ಹೊರಡಿ" ಎಂದು ಆತ ಕೆಳಗೆ ಇಳಿದು, ಸೈಕಲ್ ತೆಗೆದು ಕೊಂಡು ರಾಮುಸ್ವಾಮಿಯ ಕೈಗೆ ಕೊಟ್ಟ.

ವಿಚಿತ್ರ!

ರಾಮುಸ್ವಾಮಿ ಸೈಕಲ್ ತೆಗೆದುಕೊಂಡು ಮನೆಯ ಕಡೆ ಹೊರಟ. ಅವನು ಹುಚ್ಚ; ಹುಚ್ಚುಹುಚ್ಚಾಗಿ ಹೇಳಿದಾನೆ, ಎಂದು ಮನಸ್ಸು ಅನ್ನುತ್ತಿದ್ದರೂ ಎದೆ ಏಕೊ ಡವಡವ ಬಡಿದುಕೊಳ್ಳುತ್ತಿತ್ತು. ಇದ್ದಕ್ಕಿದ್ದಂತೆ ಮೈಯೆಲ್ಲ ಬೆವರಿತು. ಸೈಕಲ್ ಹಿಡಿಯನ್ನು ಹಿಡಿದಿದ್ದ ಎರಡು ಕೈಗಳೂ ಗಡಗಡ ನಡುಗತೊಡಗಿದುವು. ಒಂದೇ ಉಸಿರಿನಲ್ಲಿ ಪೆಡ್ಲ್ ತುಳಿದ.

ಬಹಳ ಬೇಗ ಮನೆ ಬಂತು.

ಬೀದಿಯ ಬಾಗಿಲು ತೆರೆದಿತ್ತು. ಪಕ್ಕದ ಮನೆಯ ಜಯಮ್ಮನವರು ಜಗಲಿಯ ಮೇಲೆ ನಿಂತಿದ್ದರು.

ಎಂದೂ ಇವನನ್ನು ಹಾಗೆ ಮಾತಾಡಿಸದಿದ್ದ ಅವರು ತಕ್ಷಣವೆ "ನಮ್ಮ ಜಯರಾಮು ಬರಲಿಲ್ಲವೆ ನಿಮ್ಮ ಆಫೀಸಿಗೆ?" ಎಂದು ಕೇಳಿದರು. ರಾಮುಸ್ವಾಮಿಗೆ ಆ ಮಾತು ಕೇಳಿ ಗಾಬರಿಯಾಯಿತು.

"ಯಾಕ್ರಮ್ಮ! ಇಲ್ಲ. ನಾನು ಆಫೀಸಿಂದ ಬರ್ಲಿಲ್ಲ" ಎಂದ.

ಜಯಮ್ಮನವರು "ಗೌರಮ್ಮನೋರಿಗೆ ಏನೋ ಆಗಿಬಿಟ್ಟಿದೆ,

ಆದ್ದರಿಂದ ಆಗಲೆ ಹೇಳಿಕಳಿಸಿದೆ!" ಎಂದು ಒಳ
ಸ್ವಾಮಿಗೆ ಜಂಗಾಬಲವೇ ಉಡುಗಿಹೋದಂತಾಯಿತು. ಸೈಕಲನ್ನು ಅಲ್ಲೇ ಜಗಲಿಗೆ ಒರಗಿಸಿ, ಒಳಗೆ ಹೋದ.

ಗೌರಿ ಪಡಸಾಲೆಯಲ್ಲಿ ಹಾಸಿದ್ದ ಹಾಸಿಗೆಯ ಮೇಲೆ ಅಂಗಾತ ಮಲಗಿಕೊಂಡಿದ್ದಳು. ಅವಳ ಮೇಲೆ ಮುಖದ ವರೆಗೂ ಅವಳ ಕರಿಯ ಕಂಬಳಿ ಹೊದ್ದಿಸಿತ್ತು. ಅದನ್ನು ನೋಡಿದ ಕೂಡಲೆ, ಆಗತಾನೆ ಕೇಳಿದ್ದ ಭವಿಷ್ಯ ನಿಜ ಆಗಿಬಿಟ್ಟಿದೆ ಎನ್ನಿಸಿತು. ಗಾಬರಿಯಿಂದ "ಗೌರಿ!" ಎಂದ.

ಗಂಡನ ಧ್ವನಿ ಕೇಳಿ ಗೌರಿ ಬೀದಿಯ ಬಾಗಿಲ ಕಡೆಗೆ ತಿರುಗಿ ನೋಡಿದಳು, ರಾಮುಸ್ವಾಮಿಗೆ ಜೀವ ಬಂದಂತಾಯಿತು. 'ಸದ್ಯ, ಬದುಕಿದ್ದಾಳೆ' ಎಂದುಕೊಂಡ.

ಜಯಮ್ಮನವರು "ಬಹಳ ಸುಸ್ತಾಗಿಬಿಟ್ಟಿದಾರೆ. ಒಂದು ಕಾರೊ ಗಾಡೀನೊ ಮಾಡ್ಕೊಂಡು ಈಗಲೆ ಮಿಷಿನ್ ಆಸ್ಪತ್ರೆಗೆ ಕರಕೊಂಡು ಹೋಗೋದು ಒಳ್ಳೇದು" ಎಂದರು.

ರಾಮುಸ್ವಾಮಿ ಗೌರಿಯ ಹತ್ತಿರಕ್ಕೆ ಬಂದು "ಏನು ಗೌರಿ?" ಎಂದ.

ಗೌರಿ ಅಲ್ಲಾಡಲಿಲ್ಲ. ಗಂಡನ ಮುಖವನ್ನೇ ದೃಷ್ಟಿಸಿ ನೋಡಿದಳು; ಆ ಕಣ್ಣುಗಳ ತುಂಬ ಕಂಬನಿ ತುಂಬಿತ್ತು.

ರಾಮುಸ್ವಾಮಿ ಅವಳ ಹತ್ತಿರದಲ್ಲಿಯೇ ಒಂದು ನಿಮಿಷ ಕುಳಿತುಕೊಂಡ.

ಜಯಮ್ಮನವರು ಮತ್ತೆ "ಬಹಳ ಸುಸ್ತಾಗಿದಾರೆ. ಬೇಗ ಆಸ್ಪತ್ರೆಗೆ ಕರಕೊಂಡು ಹೋಗಬೇಕು. ಈಗ ತಡಮಾಡೋಹಾಗಿಲ್ಲ" ಎಂದರು.

ಜಯಮ್ಮನವರಿಗೆ ಗೌರಿಯ ಸ್ಥಿತಿ ನೋಡಿ ತುಂಬ ಗಾಬರಿಯಾಗಿತ್ತು. ಅವರ ಮಾತಿನಲ್ಲಿಯೇ ಆ ಗಾಬರಿ ವ್ಯಕ್ತವಾಗುತ್ತಿತ್ತು.

ಗೌರಿಯ ಮುಖ ನೋಡಿ ರಾಮುಸ್ವಾಮಿಗೂ ಹೆದರಿಕೆಯಾಯಿತು.

"ಸರಿ, ನಾನು ಟ್ಯಾಕ್ಸಿ ತಂದುಬಿಡ್ತೀನಿ. ಮಿಷಿನ್ ಆಸ್ಪತ್ರೇಗೇ ಹೋಗೋದು ಒಳ್ಳೇದೂಂತೀರಾ?" ಎಂದು ಜಯಮ್ಮನವರನ್ನು ಕೇಳಿದ.

ಜಯಮ್ಮನವರು "ಹೌದು, ಅಲ್ಲೇ ಸರಿ. ಚೆನ್ನಾಗಿ ನೋಡ್ತಾರೆ."

ಈ ಆಸ್ಪತ್ರೇಲಿ ಆಪರೇಷನ್ ಮಾಡೋವಾಗ ಏನೋ ಆಗಿದೆ. ಆದ್ದರಿಂದಲೇ ಈಗ ಹೀಗಾಗಿಬಿಟ್ಟಿದೆ. ಮಿಷಿನ್ ಆಸ್ಪತ್ರೇನೇ ವಾಸಿ. ಅಲ್ಲಿಗೇ ಕರಕೊಂಡು ಹೋಗಿ, ನಾನೂ ಬರ್ತೀನಿ ಬೇಕಾದರೆ" ಎಂದರು.

"ಹೌದುಹೌದು, ದಯವಿಟ್ಟು ಬನ್ನಿ, ನಾನು ಟ್ಯಾಕ್ಸಿ ತಂದುಬಿಡ್ತೀನಿ" ಎಂದು ರಾಮುಸ್ವಾಮಿ ಸೈಕಲ್ ಹಾಕಿಕೊಂಡು ವೇಗವಾಗಿ ಟ್ಯಾಕ್ಸಿ ಸ್ಟ್ಯಾಂಡಿಗೆ ಹೋದ.

ಸ್ಟ್ಯಾಂಡಿನಲ್ಲಿ ಬೇಕಾದಷ್ಟು ಟ್ಯಾಕ್ಸಿಗಳಿದ್ದುವು. ಒಂದನ್ನು ಬಾಡಿಗೆಗೆ ಗೊತ್ತುಮಾಡಿಕೊಂಡು, ಅದರ ಹಿಂದೆಯೇ ತನ್ನ ಸೈಕಲ್ ಇಡಿಸಿಕೊಂಡು ಬೇಗ ಮನೆಗೆ ಬಂದ. ಅಷ್ಟು ಹೊತ್ತಿಗೆ ಜಯಮ್ಮನವರ ಮಗ ಜಯರಾಮುವೂ ಬಂದಿದ್ದ. ರಾಮುಸ್ವಾಮಿ, ಜಯರಾಮು, ಟ್ಯಾಕ್ಸಿಯ ಡ್ರೈವರ್ ಮೂವರೂ ಸೇರಿ ಗೌರಿಯನ್ನು ಹಾಸಿಗೆ ಸಹಿತ ಎತ್ತಿ ಟ್ಯಾಕ್ಸಿಯಲ್ಲಿ ಮಲಗಿಸಿದರು. ಜಯಮ್ಮನವರು ಟ್ಯಾಕ್ಸಿ ಹತ್ತಿ ಗೌರಮ್ಮನ ಹತ್ತಿರ ಕುಳಿತುಕೊಂಡರು. ರಾಮುಸ್ವಾಮಿ ಒಂದು ಕಂಬಳಿ, ಒಂದು ದುಪಟಿ ಚೀಲದಲ್ಲಿ ಹಾಕಿಕೊಂಡು ಬೀದಿಯ ಬಾಗಿಲಿಗೆ ಬೀಗ ಸಿಕ್ಕಿಸಿ, ಮನೆಯ ಕಡೆ ಸ್ವಲ್ಪ ನಿಗ ಇರಲಪ್ಪ, ಎಂದು ಜಯರಾಮುವಿಗೆ ಹೇಳಿ ಟ್ಯಾಕ್ಸಿಯಲ್ಲಿ ಕುಳಿತುಕೊಂಡ. ಟ್ಯಾಕ್ಸಿ ವೇಗವಾಗಿ ಮಿಷಿನ್ ಆಸ್ಪತ್ರೆಯ ಕಡೆಗೆ ಓಡಿತು.

ಅದು ಆಸ್ಪತ್ರೆಯ ಪೋರ್ಟಿಕೊ ಒಳಗೆ ಹೋಗಿ ನಿಂತಾಗ ಏಳು ಗಂಟೆ. ರಾಮುಸ್ವಾಮಿ ಟ್ಯಾಕ್ಸಿಯಿಂದ ಇಳಿದು ಒಳಗೆ ಹೋಗಿ ಡಾಕ್ಟರನ್ನು ಕಂಡು ಮಾತಾಡಿದ. ತಕ್ಷಣವೆ ಅವರು ಒಬ್ಬ ನರ್ಸನ್ನು ಕರಸಿ, ಏನೊ ಹೇಳಿಕಳಿಸಿದರು. "ನೀವು ಹೋಗಿ, ಬರ್ತಾರೆ" ಎಂದು ರಾಮುಸ್ವಾಮಿಗೂ ಹೇಳಿದರು. ಸ್ವಲ್ಪ ಹೊತ್ತಿನಲ್ಲಿಯೇ ಇಬ್ಬರು ನರ್ಸುಗಳು ಒಂದು ಸ್ಟ್ರೆಚರ್ ತೆಗೆದುಕೊಂಡು ಬಂದರು.

ಏಳು ತಿಂಗಳ ಹಿಂದೆ ಸಾಗಿಸಿದಂತೆಯೇ ಗೌರಿಯನ್ನು ಸ್ಟ್ರೆಚರ್ ಮೇಲೆ ಮಲಗಿಸಿ ಆಸ್ಪತ್ರೆಯೊಳಗೆ ಸಾಗಿಸಿದ್ದಾಯಿತು. ಜಯಮ್ಮನವರು ಆ ಸ್ಟ್ರೆಚರಿನ ಹಿಂದೆಯೇ ಹೋದರು. ರಾಮುಸ್ವಾಮಿ ಸ್ವಲ್ಪ ದೂರ ಹೋಗಿ,

ಅಲ್ಲಿಯೇ ಇದ್ದ ಬೆಂಚಿನ ಹತ್ತಿರ ಸುಮ್ಮನೆ ನಿಂತುಕೊಂಡ. ನರ್ಸುಗಳು ಸ್ಟ್ರೆಚರನ್ನು ತೆಗೆದುಕೊಂಡು ಹೋಗಿ ಎದುರಿಗಿದ್ದ ಕೋಣೆಯ ಮೇಜಿನ ಮೇಲಿಟ್ಟರು. ಆ ಕೋಣೆಯ ಎರಡು ಬಾಗಿಲುಗಳೂ ತೆರೆದಿದ್ದುವು. ರಾಮಸ್ವಾಮಿ ಆ ಕಡೆಯೇ ನೋಡುತ್ತಿದ್ದ. ಜಯಮ್ಮನವರು ಹೊರಗೆ ಬಂದರು. ಪಕ್ಕದಲ್ಲಿ ಬೂಟ್ಸಿನ ಸದ್ದಾಯಿತು. ಆಗ ಮಾತಾಡಿದ ಡಾಕ್ಟರ್ ಆ ಕೋಣೆಗೆ ಹೋದರು. ತಕ್ಷಣವೆ ಯಾರೋ ಎರಡು ಬಾಗಿಲು ಗಳನ್ನೂ ಹಾಕಿದರು. ರಾಮಸ್ವಾಮಿ ನಿಟ್ಟುಸಿರುಬಿಟ್ಟು, ಬೆಂಚಿನ ಮೇಲೆ ಕೂಳಿತುಕೊಂಡ.

ಜಯಮ್ಮನವರು ಆ ಕೋಣೆಯ ಹತ್ತಿರದಲ್ಲಿಯೇ ಸುಮ್ಮನೆ ನಿಂತಿದ್ದರು.

ಒಂದೆರಡು ನಿಮಿಷಗಳಲ್ಲಿಯೇ ಕೋಣೆಯ ಬಾಗಿಲು ತೆರೆಯಿತು. ಡಾಕ್ಟರ್ ಹೊರಗೆ ಬಂದರು. ಆಕೆಗೆ ಹೇಗೆ ತಿಳಿಯಿತೊ, ನೇರವಾಗಿ ರಾಮಸ್ವಾಮಿ ಇದ್ದ ಬೆಂಚಿನ ಹತ್ತಿರಕ್ಕೇ ಬಂದರು.

ರಾಮಸ್ವಾಮಿ ಎದ್ದು ನಿಂತುಕೊಂಡ.

"ನೀವೇ ಅಲ್ಲವೆ, ಅವರ ಯಜಮಾನರು ?" ಎಂದು ಡಾಕ್ಟರ್ ಕನ್ನಡದಲ್ಲೇ ಕೇಳಿದರು.

ರಾಮಸ್ವಾಮಿ ಕನ್ನಡದಲ್ಲೇ ಉತ್ತರ ಕೊಟ್ಟ: "ಹೌದು."

ಡಾಕ್ಟರ್ "ಆಪರೇಷನ್ ಆಗಬೇಕು" ಎಂದರು.

ರಾಮಸ್ವಾಮಿ "ಏನಾಗಿದೆ ಡಾಕ್ಟರ್ ?" ಎಂದು ಕುತೂಹಲದಿಂದ ಕೇಳಿದ. ಆಗ ಡಾಕ್ಟರ್ "ಊಂಬ್ ಇದೆಯಲ್ಲ—ಗರ್ಭಕೋಶ, ಅದು ಸರಿಯಾಗಿಲ್ಲ, ಕಟ್ ಆಗಿಬಿಟ್ಟಿದೆ. ಆಪರೇಟ್‌ಮಾಡಿ ಆಮೇಲೆ ಸರಿ ಮಾಡ್ತೇವೆ. ನೀವು ಇಲ್ಲೇ ಇರಿ" ಎಂದು ಹೇಳಿ ಹೊರಟು ಹೋದರು.

ರಾಮಸ್ವಾಮಿ ಸುಮ್ಮನಿದ್ದ.

ಆ ಆಸ್ಪತ್ರೆಯಲ್ಲಿ ಹಾಕಿಸಿಕೊಂಡಂತೆಯೇ ಇಲ್ಲಿಯೂ ಒಬ್ಬ ನರ್ಸ್ ಬಂದು, ಪುಸ್ತಕದಲ್ಲಿ ರಾಮಸ್ವಾಮಿಯ ರುಜು ತೆಗೆದುಕೊಂಡಳು.

ರಾಮುಸ್ವಾಮಿ ಟ್ಯಾಕ್ಸಿಯವನಿಗೆ ಬಾಡಿಗೆ ಕೊಟ್ಟು "ನೀನು ಹೋಗಪ್ಪ ಇನ್ನು" ಎಂದು ಹೇಳಿಕಳಿಸಿ, ಬಂದು ಬೆಂಚಿನ ಮೇಲೆ ಕುಳಿತ.

ಕೋಣೆಯ ಒಳಗಿಂದ ಬಂದ ನರ್ಸ್ ಒಡನೆ ಮಾತನಾಡುತ್ತಿದ್ದ ಜಯಮ್ಮನವರು ರಾಮುಸ್ವಾಮಿಯ ಹತ್ತಿರಕ್ಕೆ ಬಂದರು.

"ಆಪರೇಷನ್ ಮಾಡ್ತಾರಂತೆ" ಎಂದರು.

ರಾಮುಸ್ವಾಮಿ "ಹೌದು, ಡಾಕ್ಟರ್ ಹೇಳಿದರು" ಎಂದ.

"ಈಗಲೇ ಮಾಡಿಬಿಡ್ತಾರಂತೆ." ದೊಡ್ಡ ಡಾಕ್ಟರ್ ಕ್ವಾರ್ಟರ್ಸ್ ನಲ್ಲಿದಾರಂತೆ, ಕರೆಯೋಕೆ ಯಾರೊ ಹೋಗಿದಾರೆ" ಎಂದು ಹೇಳಿ ಜಯಮ್ಮನವರು ಪುನಃ ಆ ಕೋಣೆಯ ಕಡೆಗೆ ಹೋದರು.

ಅಷ್ಟು ಹೊತ್ತಿಗೆ ಸರಿಯಾಗಿ, ಪಕ್ಕದ ವೆರಾಂಡಾದಿಂದ ದೊಡ್ಡ ಲೇಡಿ ಡಾಕ್ಟರ್ ಬಂದರು.

ಗೌರಿಯನ್ನು ಆಗಲೆ ಆಪರೇಷನ್ ಥೇಟರಿಗೆ ಸಾಗಿಸಿ, ಎಲ್ಲವನ್ನೂ ಸಿದ್ಧಪಡಿಸಿದ್ದರು.

ಆಪರೇಷನ್ ಆಯಿತು.

ಆದರೆ ಗರ್ಭಕೋಶವನ್ನು ಸರಿಪಡಿಸಲಾಗಲಿಲ್ಲ.

ಆಪರೇಷನ್ ಮುಗಿದ ಒಂದು ಗಂಟೆಯನಂತರ, ಅವಳನ್ನು ಆ ಕೋಣೆಯಿಂದ ಹೊರಗೆ ತಂದರು.

ಹಿಂದೆಯೇ ಹೆಡ್‌ನರ್ಸ್ ಬಂದಳು. ರಾಮುಸ್ವಾಮಿ ಎದ್ದು ಗೌರಿಯ ಹತ್ತಿರಕ್ಕೆ ಹೋದ.

ಕೇಳಬೇಕೆನ್ನಿಸಿತು. "ಆಯ್ತಾ, ಹೇಗಿದಾಳೆ?" ಎಂದು ಕುತೂಹಲ ದಿಂದ ಕೇಳಿದ.

ಹೆಡ್‌ನರ್ಸ್ "ಆಯ್ತು. ಹುಷಾರಾಗಿದಾರೆ. ಈಗ ವಾರ್ಡಿಗೆ ಅಡ್ಮಿಟ್ ಮಾಡಬೇಕು. ಸ್ಪೆಷಲ್ ವಾರ್ಡ್ ಬೇಕೊ, ಜನರಲ್ ವಾರ್ಡ್ ಸಾಕೊ?" ಎಂದು ಕೇಳಿದಳು.

ರಾಮುಸ್ವಾಮಿ "ಜನರಲ್ ವಾರ್ಡ್ ಸಾಕು ಅಲ್ಲವೆ?" ಎಂದ.

ಹೆಡ್‌ನರ್ಸ್ "ಸಾಕು. ಸ್ಪೆಷಲ್ ವಾರ್ಡೇನೂ ಬೇಕಾಗಿಲ್ಲ" ಎಂದಳು.

"ಎದ್ದಿದಾಳೊ?" ಎಂದು ರಾಮುಸ್ವಾಮಿ ಕೇಳಿದ.

"ಇಲ್ಲ, ಇನ್ನೂ ಎಚ್ಚರ ಇಲ್ಲ. ಮಾತಾಡಿಸಬೇಡಿ." ಎಂದು ಹೆಡ್ ನರ್ಸ್ ಸ್ಟ್ರೆಚರನ್ನು ತಳ್ಳಿಸಿಕೊಂಡು ಜನರಲ್ ವಾರ್ಡಿನ ಕಡೆಗೆ ನಡೆದಳು. ಜಯಮ್ಮನವರೂ ರಾಮುಸ್ವಾಮಿಯೂ ಅವರ ಹಿಂದೆ ಹೋದರು.

ಖಾಲಿ ಇದ್ದ ಒಂದು ಮಂಚದ ಮೇಲೆ ಹೊಸದಾಗಿ ಸ್ಪ್ರಿಂಗ್ ಹಾಕಿ, ಹಾಸಿಗೆ ಹಾಸಿದ್ದರು ಗೌರಿಯನ್ನು ಹೆಡ್‌ನರ್ಸ್, ರಾಮುಸ್ವಾಮಿ, ಇನ್ನಿಬ್ಬರು ನರ್ಸ್, ನಾಲ್ವರೂ ಎತ್ತಿ ಹಾಸಿಗೆಯಲ್ಲಿ ಮಲಗಿಸಿದರು. ಬಿಳಿಯ ದುಪಟಿ ಜೋಡಿಸಿದ್ದ ಕೆಂಪು ಶಾಲನ್ನು ಹೆಡ್‌ನರ್ಸ್ ಗೌರಿಯ ಮೈಮೇಲೆ ಎದೆಯ ವರೆಗೂ ಹೊದಿಸಿದಳು. ರಾಮುಸ್ವಾಮಿ ಹೆಂಡತಿಯ ಮುಖ ನೋಡಿದ. ಅವಳು ಚೆನ್ನಾಗಿ ನಿದ್ದೆ ಬಂದಿದ್ದಂತೆ ಮಲಗಿದ್ದಳು.

ಅಂದು ರಾತ್ರಿ ಜಯಮ್ಮನವರು ಆಸ್ಪತ್ರೆಯಲ್ಲಿಯೇ ಉಳಿದು ಕೊಂಡರು.

ಗೌರಿಯನ್ನು ಬಿಟ್ಟು ಮನೆಗೆ ಹೋಗಲು ರಾಮುಸ್ವಾಮಿಗೆ ಮನಸ್ಸು ಬರಲಿಲ್ಲ; ಆದರೆ ಆಸ್ಪತ್ರೆಯಲ್ಲಿಯೇ ರಾತ್ರಿ ಕಳೆಯಲು ಅವನಿಗೆ ಅನುಮತಿಯಿರಲಿಲ್ಲ. ತಾನು ತಂದಿದ್ದ ಕಂಬಳಿ ಮತ್ತು ದುಪ್ಪಟಿಯನ್ನು ಜಯಮ್ಮನವರಿಗೆ ಕೊಟ್ಟು, ಹನ್ನೆರಡು ಗಂಟೆಯ ಹೊತ್ತಿಗೆ ಮನೆಯ ಕಡೆ ಹೊರಟ; ಮನೆಯ ವರೆಗೂ ನಡೆದೇಹೋಗಬೇಕಾಯಿತು.

* * * * *

ಗೌರಿ ಇನ್ನುಮೇಲೆ ತಾಯಿ ಆಗುವಹಾಗಿಲ್ಲ, ಎಂಬುದು ಮಾರನೆಯ ದಿನ ತಿಳಿಯಿತು.

ಆದರೆ ಅದು ಅವನ ಮನಸ್ಸಿಗೆ ನೋವನ್ನುಂಟುಮಾಡಲಿಲ್ಲ.

ಗೌರಿಯ ಮನಸ್ಸಿಗೇ ತುಂಬ ನೋವನ್ನುಂಟುಮಾಡಿತ್ತು.

ಗಂಡನನ್ನು ನೋಡಿದ ಕೂಡಲೆ ಅವಳು ಅತ್ತಳು. ರಾಮುಸ್ವಾಮಿ "ಛೆ, ಯಾಕಳ್ತೀಯೆ. ಅಳಬೇಡ. ಏನು ಫರವಾಯಿಲ್ಲ. ಯೋಚನೆ

ಮಾಡಬೇಡ. ಸದ್ಯ, ಇಷ್ಟರಮಟ್ಟಿಗೆ ಆಯಿತಲ್ಲ.” ಎಂದು ಸಮಾಧಾನ ಮಾಡಿದ.

ಹೀಗಾಯಿತೆಂದು ಮಾರನೆಯ ದಿನವೇ ಹೊಳೆನರಸೀಪುರಕ್ಕೆ ಕಾಗದ ಹೋಯಿತು. ನಾಲ್ಕನೆಯ ಹೆರಿಗೆಗಾಗಿ ಹೇಮಾವತಿ ತವರು ಮನೆಗೆ ಬಂದು ಕೇವಲ ಒಂದು ತಿಂಗಳಾಗಿತ್ತು. ಅವಳಿಗೆ ಆಗಲೆ ಒಂಬತ್ತು ತಿಂಗಳು ತುಂಬಿದ್ದುದರಿಂದ ಚಿಕ್ಕಮ್ಮ ಮೈಸೂರಿಗೆ ಹೊರಡುವ ಹಾಗಿರಲಿಲ್ಲ. ಕಾಗದ ಬಂದ ಕೂಡಲೆ ಶಾಮಣ್ಣನವರೊಬ್ಬರೇ ಹೊರಟು ಬಂದರು.

ಅವರಿಗೆ ಎಲ್ಲ ತಿಳಿಯಿತು.

ಮೂರು ದಿನ ಇದ್ದು, ಗೌರಿ ಹುಷಾರಾಗಿದ್ದಾಳೆ, ಇನ್ನು ಪರವಾಯಿಲ್ಲ ಎಂದು ಗೊತ್ತಾದ ಮೇಲೆ, ಹೇಮಾವತಿಗೋಸ್ಕರ ಹೊಳೆನರಸೀಪುರಕ್ಕೆ ಹೊರಟುಹೋದರು.

ಹದಿನೈದು ದಿನ ಗೌರಿ ಆಸ್ಪತ್ರೆಯಲ್ಲಿಯೇ ಇರಬೇಕಾಯಿತು.

ರಾಮಸ್ವಾಮಿ ಇಪ್ಪತ್ತು ದಿನ ರಜಾ ತೆಗೆದುಕೊಂಡು ದಿನವೂ ಬೆಳಗ್ಗೆ ಸಾಯಂಕಾಲ ಆಸ್ಪತ್ರೆಗೆ ಹೋಗಿಬಂದ; ಆಸಕ್ತಿಯಿಂದ ಹೆಂಡತಿಯ ಶುಶ್ರೂಷೆ ಮಾಡಿದ.

ಹದಿನಾರನೆಯ ದಿನ ಗೌರಿ ನಿಶ್ಚಿಂತೆಯಾಗಿ ಮನೆಗೆ ಬಂದಳು.

## ೮

ಮೂರು ವರುಷ ಕಳೆಯಿತು. ರಾಮಸ್ವಾಮಿಗೆ ಹಾಸನಕ್ಕೆ ವರ್ಗವಾಗಿ ಒಂದು ವರುಷವಾಗಿತ್ತು. ಪಂಡಿತರ ಭವಿಷ್ಯದಂತೆ ಅವನು ಮನೆಯನ್ನು ಕಳೆದುಕೊಂಡಿರಲಿಲ್ಲ. ಬೆಂಗಳೂರಿನಲ್ಲಿದ್ದಾಗಲೂ ಮೈಸೂರಿನಲ್ಲಿದ್ದಾಗಲೂ ಪ್ರತಿ ತಿಂಗಳೂ ತಪ್ಪದೆ, ಒಟ್ಟು ಬಾಡಿಗೆ ಇಪ್ಪತ್ತೈದು ರೂಪಾಯಿ ಮನಿಯಾರ್ಡರ್ ಮೂಲಕ ಸಲ್ಲುತ್ತಿತ್ತು. ಇವನಿಗೆ ಹಾಸನಕ್ಕೆ ವರ್ಗವಾಗುವುದಕ್ಕೂ ದೊಡ್ಡಭಾಗದಲ್ಲಿದ್ದ ವಿಶ್ವನಾಥರಾಯರಿಗೆ ತುಮಕೂರಿಗೆ ವರ್ಗವಾಗುವುದಕ್ಕೂ ಸರಿಹೋಯಿತು. ರಾಮಸ್ವಾಮಿ ಗೌರಿಯ

ಸಹಿತ, ಸಾಮಾನು ಸರಂಜಾಮು ಎಲ್ಲ ತೆಗೆದುಕೊಂಡು ಒಂದೇ ಸಲಕ್ಕೆ ಮೈಸೂರು ಬಿಟ್ಟು ಹಾಸನಕ್ಕೆ ಬಂದ. ಊರಿಗೆ ಬಂದ ಎಂಟು ದಿನಗಳೊಳಗಾಗಿ ಗೌರಿಯ ಸಲಹೆಯಂತೆ ಮನೆಯ ರಿಪೇರಿ ಕೆಲಸಗಳು ನಡೆದುವು. ಸುಮಾರು ಮುನ್ನೂರು ರೂಪಾಯಿ ಖರ್ಚು ಮಾಡಿ ಆ ದೊಡ್ಡ ಭಾಗವನ್ನು ತುಂಬ ಅಚ್ಚುಕಟ್ಟಾಗಿ ಮಾಡಿದ್ದಾಯಿತು.

ಅದಾದ ಹತ್ತುದಿನಗಳೊಳಗಾಗಿ ಪಕ್ಕದ ಮನೆಯೂ ಖಾಲಿಯಾಯಿತು. ಎರಡು ವರುಷಗಳಿಂದ ಆ ಮನೆಯಲ್ಲಿದ್ದ ಮೇಡಂ ಸುಶೀಲಮ್ಮನವರಿಗೆ ನಂಜನಗೂಡಿಗೆ ವರ್ಗವಾದುದರಿಂದ ಅವರೂ ಬಿಟ್ಟು ಹೊರಟು ಹೋದರು. ಗೌರಿ ಅದನ್ನು ಬಾಡಿಗೆಗೆ ಕೊಡುವ ವಿಷಯವಾಗಿ ಮಾತಾಡಿದಾಗ, ರಾಮುಸ್ವಾಮಿ “ಬೇಡ, ನಾವೇ ಇರೋಣ. ಮಧ್ಯದ ಬಾಗಿಲು ತೆಗೆದುಬಿಟ್ಟರೆ ಆಯಿತು” ಎಂದ. ಅವಳಿಗೂ ‘ಹೌದು, ಎರಡು ಸಂಸಾರ ಏಕೆ’ ಎನ್ನಿಸಿತು. ಆದ್ದರಿಂದ ಅದಕ್ಕೂ ಸುಣ್ಣ ಬಣ್ಣ ಮಾಡಿಸಿದ ಮೇಲೆ ಮನೆಯ ಸಾಮಾನನ್ನು ಆ ಭಾಗಕ್ಕೂ ಹಂಚಿದ್ದಾಯಿತು. ಅಲ್ಲಿಯ ರೂಮು ಮತ್ತು ಪಡಸಾಲೆ ಇವರ ಡ್ರಾಯಿಂಗ್ ರೂಮು ಮತ್ತು ಬೆಡ್ ರೂಮು ಆಯಿತು. ಮನೆ ಸ್ವಲ್ಪ ದೊಡ್ಡದಾದರೂ ಅನುಕೂಲವಾಗಿತ್ತು. ಗೌರಿ ತಮ್ಮ ಸ್ವಂತ ಮನೆಯಲ್ಲಿ ಅಚ್ಚುಕಟ್ಟಾದ ಸಂಸಾರ ಶುರು ಮಾಡಿದಳು.

ಮನೆಯನ್ನು ಬಹಳ ಚೆನ್ನಾಗಿ ಇಟ್ಟುಕೊಂಡಿದ್ದಳು. ಸಾಕಷ್ಟು ಕುರ್ಚಿ ಮೇಜುಗಳಿದ್ದುದರಿಂದ ಅವುಗಳನ್ನೆಲ್ಲ ಅಣಿಯಾಗಿಟ್ಟು ಆಫೀಸು ರೂಮು, ಪಡಸಾಲೆ, ಡ್ರಾಯಿಂಗ್ ರೂಮು ಎಲ್ಲ ಚೆನ್ನಾಗಿ ಶೃಂಗರಿಸಿದ್ದಳು. ಗೋಡೆ ಬೋಳಾಗಿದ್ದುದರಿಂದ, ಒಂದು ದಿನ ರಾತ್ರಿ ಅವಳು “ದೊಡ್ಡ ಸೈಜಿಂದು ಒಂದರ್ಧ ಡಜನ್ ದೇವರ ಫೋಟೊ ತರಬೇಕೂಂದ್ರೆ. ನಮ್ಮನೇಲಿ ನೋಡಿ ಎಷ್ಟು ಚೆನ್ನಾಗಿದೆ. ಇಲ್ದೇ ಇದ್ದರೆ ಈ ಗೋಡೆಗಳನ್ನ ನೋಡೋಕಾಗೊಲ್ಲ” ಎಂದಳು. ರಾಮುಸ್ವಾಮಿಗೂ ‘ಹೌದು ನಿಜ’ ಎನ್ನಿಸಿತು. ಮಾರನೆಯ ದಿನವೇ, ಮೂವತ್ತು ರೂಪಾಯಿ ಕೊಟ್ಟು ಹನ್ನೆರಡು ದೊಡ್ಡ ಪಟಗಳನ್ನು ಜವಾನ ಜವರನ ಕೈಯಲ್ಲಿ

ಹೊರಿಸಿಕೊಂಡು ಬಂದ. ಗೌರಿ ಆ ಹನ್ನೆರಡು ಪಟಗಳಲ್ಲಿ ಎಂಟನ್ನು ಪಡಸಾಲೆಯಲ್ಲಿಯೂ, ಎರಡನ್ನು ವೆರಾಂಡಾದಲ್ಲಿಯೂ, ಉಳಿದೆರಡನ್ನು ಮಲಗುವ ಕೋಣೆಯಲ್ಲಿಯೂ ಹಾಕಿದಳು. ಆಗ ಮನೆ ತುಂಬಿದ ಹಾಗಾಯಿತು. ಸಾಯಂಕಾಲ ಗಂಡ ಮನೆಗೆ ಬಂದ ಮೇಲೆ, "ಒಂದು ಮಾರು ಹೂ ತೊಗೊಂಡು ಬನ್ನಿ. ಪಟಗಳಿಗೆಲ್ಲ ಇಡೋಣ ಇವತ್ತು" ಎಂದಳು. ರಾಮುಸ್ವಾಮಿ "ಆಗಲಿ" ಎಂದ. ಗೌರಿ "ಹಾಗೇ ಸ್ವಲ್ಪ ಊದುಕಡ್ಡಿ ತೊಗೊಂಡ್ಬನ್ನಿ, ದಿನಾ ಒಂದು ಕಡ್ಡಿ ಹಚ್ಚಿಡೋಣ. ದೇವರ ಪೂಜೇನೂ ಆದಹಾಗಾಗುತ್ತೆ. ಮನಸ್ಸಿಗೂ ಒಂದು ತರಹ ಹಿತವಾಗಿರುತ್ತೆ" ಎಂದು ನಕ್ಕಳು. ರಾಮುಸ್ವಾಮಿ ಅದಕ್ಕೂ "ಆಗಲಿ, ಅಪ್ಪಣೆ" ಎಂದ. ಸಂಜೆಯೇ ಆ ಎರಡನ್ನೂ ತೆಗೆದುಕೊಂಡು ಬಂದ. ಅವನು ಒಂದು ಮಾರು ಹೂ ತಂದಿರಲಿಲ್ಲ; ನಾಲ್ಕು ಮಾರು ತಂದಿದ್ದ. ಅದೂ ಹೊಚ್ಚ ಹೊಸ ಮಲ್ಲಿಗೆ ಮೊಗ್ಗು. ಮಲ್ಲಿಗೆಯ ಕಾಲವಾಗಿದ್ದುದರಿಂದ ಹೂವಿನ ಬೆಲೆ ಬಹಳ ಇಳಿದಿತ್ತು; ಗಂಧದ ಕಡ್ಡಿಯೂ ಚೆನ್ನಾಗಿದ್ದುದರಿಂದ ನಾಲ್ಕು ತೊಲದ ಒಂದು ಕಟ್ಟು ತೆಗೆದುಕೊಂಡಿದ್ದ. ಎರಡನ್ನೂ ನೋಡಿ ಗೌರಿ "ಇದೇನು ಹೂ ಇಷ್ಟೊಂದು ತಂದುಬಿಟ್ಟರಿ!" ಎಂದಳು. ರಾಮುಸ್ವಾಮಿ "ಅದೇನಾಗುತ್ತೆ ಇನ್ನೂ ಮೊಗ್ಗು. ಈಗೊಂದಷ್ಟು ಉಪಯೋಗಿಸು, ನಾಳೆ ಬೆಳಗ್ಗೆ ಒಂದಷ್ಟು ಉಪಯೋಗಿಸು" ಎಂದ. ಗೌರಿ ಹಾಗೆಯೇ ಮಾಡಿದಳು.

ಊಟ, ಕೆಲಸ ಆದ ಮೇಲೆ ಬಲಗೈಯಲ್ಲಿ ಅಡಕೆಲೆ ತಟ್ಟೆ ತೆಗೆದುಕೊಂಡು, ಎಡಗೈಯಲ್ಲಿ ಎರಡು ಊದುಕಡ್ಡಿ ಹೊತ್ತಿಸಿ ಹಿಡಿದುಕೊಂಡು ಗೌರಿ ಮಲಗುವ ಕೋಣೆಗೆ ಬಂದಳು. ಆ ತಿಂಗಳ 'ಕೊರವಂಜಿ'ಯನ್ನು ಓದುತ್ತಿದ್ದ ರಾಮುಸ್ವಾಮಿ "ಇದೇನು!" ಎಂದು ಅವಳ ಕೈಯಲ್ಲಿದ್ದ ಎರಡು ಊದುಕಡ್ಡಿಯನ್ನು ನೋಡಿ ನಕ್ಕ. ಗೌರಿ "ಇಬ್ಬರಿಗೂ ಒಂದೊಂದು" ಎಂದಳು. ಗಂಧದ ಕಡ್ಡಿಯನ್ನು ಸ್ಟ್ಯಾಂಡಿಗೆ ಸಿಕ್ಕಿಸಿ, ಅಡಕೆಲೆ ತಟ್ಟೆಯೊಡನೆ ಮಂಚದ ಮೇಲೆ ಬಂದು ಕುಳಿತಳು. ರಾಮುಸ್ವಾಮಿ 'ಕೊರವಂಜಿ'ಯನ್ನೇ ನೋಡುತ್ತಿದ್ದ. ಗೌರಿ "ತೊಗೊಳ್ಳಿ" ಎಂದಳು. ರಾಮುಸ್ವಾಮಿ, ಅಡಕೆ ಇರಬಹುದು ಎಂದು ಕೈ ನೀಡಿದ. ಆದರೆ ಕೈ ತಣ್ಣಗಾಯಿತು.

ನೋಡಿಕೊಂಡ. ಮಲ್ಲಿಗೆ ಹೂವಿನ ಒಂದು ಪುಟ್ಟ ದಂಡೆಯನ್ನು ಗೌರಿ ಗಂಡನ ಕೈಯಲ್ಲಿಟ್ಟಿದ್ದಳು.

ರಾಮಸ್ವಾಮಿ "ಯಾಕೆ ಚೆಂಡಾಡಬೇಕೆ?" ಎಂದು ನಕ್ಕ.

ಗೌರಿ "ಆಡಿ ಅದಕ್ಕೇನು. ಆದರೆ ಚೆಂಡಾಡೋಕಲ್ಲ ನಾನು ಕೊಟ್ಟಿದ್ದು" ಎಂದಳು.

"ಮತ್ತೆ?"

"ನಿಮ್ಮ ಕೈಲಿ ಹೂ ಮುಡಿಸಿಕೊಂಡು ತುಂಬ ದಿನ ಆಯ್ತು."

"ಸರಿ. ಅದಕ್ಕೆ ಕೂಲಿ?"

"ಆಮೇಲೆ" ಎಂದು ನಕ್ಕಳು.

ರಾಮಸ್ವಾಮಿ ಹೆಂಡತಿಗೆ ಹೂ ಮುಡಿಸಿದ. ಹೆಂಡತಿ ಕೂಲಿ ಕೊಟ್ಟಳು. ಅಡಕೆಲೆ ಸೋಕದ ಆ ತುಟಿ ಕೆಂಪಾಗಿಲ್ಲದಿದ್ದರೂ ಮಲ್ಲಿಗೆ ಹೂವಿನಂತೆ ಮೃದುವಾಗಿತ್ತು.

ಆಮೇಲೆ ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು ಎಂಟು ಎಂದು—ಗಂಡ ಹೆಂಡತಿ ಇಬ್ಬರೂ ಎಂಟು ಎಲೆ ಹಾಕಿಕೊಂಡರು. ರಾಮಸ್ವಾಮಿ ಮತ್ತೆ 'ಕೊರವಂಜಿ' ಹಿಡಿದುಕೊಂಡ.

ಗೌರಿ "ಆಗಲೆ ಹತ್ತು ಗಂಟೆ ಆಯ್ತೇನೊ. ಸಾಕು ತೆಗೆದಿಡೀಂದ್ರೆ, ಮಲಕ್ಕೊಳ್ಳೋಣ ಇನ್ನ" ಎಂದು 'ಕೊರವಂಜಿ'ಯನ್ನು ಕಿತ್ತುಕೊಂಡಳು. ಅದನ್ನು ಪಕ್ಕದ ಗೂಡಿನಲ್ಲೆಸೆದು, ಕಂಬಳಿಯನ್ನೆಳೆದುಕೊಂಡು ಮಲಗಿಬಿಟ್ಟಳು. ರಾಮಸ್ವಾಮಿ ಉರಿಯುತ್ತಿದ್ದ ದೀಪ ನೋಡಿ "ದೀಪ?" ಎಂದ. "ಯಾರು ಲೇಟಾಗಿ ಮಲಕ್ಕೊಳ್ತಾರೋ ಅವರು ಆರಿಸಬೇಕು" ಎಂದು ಗೌರಿ ಮುಸುಕೆಳೆದುಕೊಂಡಳು. ರಾಮಸ್ವಾಮಿ ಅವಳ ಮುಸುಕು ತೆಗೆದು ಕೆನ್ನೆಗೆ ಎರಡು ಏಟು ಬಿಗಿದು, ದೀಪ ಆರಿಸಿದ.

* * * * *

ಗೌರಿ ಬೆಳಗ್ಗೆ ಆರು ಗಂಟೆಗೇ ಎದ್ದು, ನೀರೊಲೆಗೆ ಉರಿ ಹಾಕಿ, ಕಾಫಿ ಒಲೆ ಹೊತ್ತಿಸಿದಳು. ಅಷ್ಟು ಹೊತ್ತಿಗೆ, ಪದ್ಧತಿಯಂತೆ ಜವಾನ ಜವರ ಬಂದ. ಅವನು ದಿನವೂ ಬೆಳಗ್ಗೆ ಹೊತ್ತು ಮನೆಗೆಲಸ ಮಾಡಿ, ಮಧ್ಯಾಹ್ನ

ಆಫೀಸಿಗೆ ಹೋಗುತ್ತಿದ್ದ. ಮನೆ ದೇವರಹಳ್ಳಿಯಲ್ಲಿದ್ದುದರಿಂದ ಹೊತ್ತಿಗೆ ಮುಂಚೆಯೇ ಹಳ್ಳಿಗೆ ಹೋಗಲು ರಾಮಸ್ವಾಮಿ ಅವನಿಗೆ ಅಪ್ಪಣೆ ಕೊಟ್ಟು ಬಿಟ್ಟಿದ್ದ. ಜವರ ಬಂದ ಕೂಡಲೆ ಗೌರಿ "ಇವತ್ತು ಸ್ವಲ್ಪ ಮೇಲೆಲ್ಲ ಗುಡಿಸಿಕೊ, ತುಂಬ ಕಸ ಆಗಿಬಿಟ್ಟಿದೆ" ಎಂದಳು. ಅವನು ಅಮ್ಮಾವರ ಅಪ್ಪಣೆಯಂತೆ ಮನೆಯೆಲ್ಲ ಕಸ ಗುಡಿಸಲು ಹೊರಟ; ಸ್ವಲ್ಪ ಹೊತ್ತಿನಲ್ಲಿಯೆ ರಾಮಸ್ವಾಮಿ ಎದ್ದು, ಜವರನಿಗೆ ಮಲಗುವ ಕೋಣೆಯನ್ನು ಬಿಟ್ಟುಕೊಟ್ಟ. ಗೌರಿ ಮಡಿ ಉಟ್ಟುಕೊಂಡು ಕಾಫಿ ಬೆರಸುತ್ತಿದ್ದಳು. ಗಂಡ ಮುಖ ತೊಳೆದುಕೊಂಡು ಬಂದ ಮೇಲೆ, "ಸ್ವಲ್ಪ ತಡೀರಿ, ದೇವರ ಪಟಗಳಿಗೆಲ್ಲ ಹೂವಿಟ್ಟುಬಿಟ್ಟು ಬರ್‍ತೀನಿ. ಆಮೇಲೆ ಕಾಫಿ ಕೊಡ್ತೀನಿ" ಎಂದು ಹೊರಟಳು. ಎಲ್ಲ ಪಟಗಳಿಗೂ ಹೂ ಇಟ್ಟು, ಗಂಧದ ಕಡ್ಡಿ ಹೊತ್ತಿಸಿ ಸ್ಟ್ಯಾಂಡಿಗೆ ಸಿಕ್ಕಿಸಿದ ಮೇಲೆ, ಕಾಫಿ ಐಟಂ ಮುಗಿಯಿತು. ರಾಮಸ್ವಾಮಿ ಸ್ನಾನ ಮಾಡಿಕೊಂಡು ಬರುವ ಹೊತ್ತಿಗೆ, ಅಮ್ಮಾವರ ಅಪ್ಪಣೆಯಂತೆ ಜವರ ಚೀಲ ತೆಗೆದುಕೊಂಡು ಶೆಟ್ಟಿ ಅಂಗಡಿಗೆ ಹೊರಟಿದ್ದ. "ರಾಯರು ಬಟ್ಟೆ ಹಾಕ್ಕೊಂಡು ಬರ್‍ತಾರೆ, ನೀನು ಮುಂಚೆ ಹೋಗಿರು" ಎಂದು ಹೇಳಿ ಗೌರಿ ಅವನನ್ನು ಕಳಿಸಿದ್ದಳು. ರಾಮಸ್ವಾಮಿ ಬಟ್ಟೆ ಹಾಕಿಕೊಂಡು ಬೀದಿಯ ಬಾಗಿಲಿಗೆ ಬರುವುದಕ್ಕೆ ಸರಿಯಾಗಿ ಪೋಸ್ಟ್ ಮ್ಯಾನ್ 'ಪೋಸ್ಟ್' ಎಂದು ಒಂದು ಕಾಗದ ಕೊಟ್ಟು ಹೊರಟುಹೋದ. ಅಡಿಗೆ ಮನೆಯಲ್ಲಿದ್ದ ಗೌರಿಗೂ 'ಪೋಸ್ಟ್' ಎಂದುದು ಕೇಳಿಸಿತು. "ಯಾರದು?" ಎಂದು ಓಡಿಬಂದಳು. ರಾಮಸ್ವಾಮಿ "ಯಾರದ್ದು ಹೇಳು ಮತ್ತೆ" ಎಂದು ಕವರು ಒಡೆದು ಕಾಗದವನ್ನು ಕೈಗೆ ತೆಗೆದುಕೊಂಡ. ಗೌರಿ "ಅಣ್ಣಂದು" ಎಂದು ಗಂಡನ ಹತ್ತಿರ ಬಂದು ನಿಂತುಕೊಂಡಳು. ರಾಮಸ್ವಾಮಿ ಓದಿಕೊಂಡ. ಗೌರಿ ಅವನ ಮುಖವನ್ನೇ ನೋಡುತ್ತ "ಏನಂತೆ, ಹೇಮಾ ಹುಷಾರಾಗಿದಾಳಂತ?" ಎಂದು ಕೇಳಿದಳು. ರಾಮಸ್ವಾಮಿ "ಹುಷಾರಾಗಿದಾಳಂತೆ. ನಿನ್ನೆ ರಾತ್ರಿ ಎಂಟು ಗಂಟೆಗೆ ಹೆರಿಗೆ ಆಯಿತಂತೆ. ಗಂಡುಮಗು. ಮಗು ಬಾಣಂತಿ ಇಬ್ಬರೂ ಆರೋಗ್ಯವಾಗಿದಾರೆ, ಅಂತ ಬರೆದಿದಾರೆ" ಎಂದು ಕಾಗದವನ್ನು ಹೆಂಡತಿಯ ಕೈಗೆ ಕೊಟ್ಟ. ಗೌರಿ "ಸದ್ಯ, ಸುಸೂತ್ರವಾಗಿ ಮೈ ಕಳೀತಲ್ಲ" ಎಂದಳು.

ರಾಮುಸ್ವಾಮಿ "ನೋಡು, ನೀನೂ ಇದೀಯಲ್ಲ" ಎಂದ. ಅವನು ಅದೇ ಮಾತನ್ನು ಎಷ್ಟೋ ಸಲ ಆಡಿದ್ದ. ಮೊದಲನೆಯ ಬಾರಿ ಆ ಮಾತು ಕೇಳಿ ಅವಳಿಗೆ ಸ್ವಲ್ಪ ನೋವಾಗಿತ್ತು, ಅಳು ಬಂದಿತ್ತು. ಆದರೆ ಈಚೆಗೆ ಗಂಡ ಹಾಗೆಂದರೆ ನಗು ಬರುತ್ತಿತ್ತು. ನಗುತ್ತಲೇ ಏನಾದರೂ ಅಂದು ಗಂಡನ ಬಾಯಿ ಮುಚ್ಚಿಸುತ್ತಿದ್ದಳು; ಗಂಡ ಹಾಸ್ಯಕ್ಕೆ ಹಾಗೆ ಹಂಗಿಸುತ್ತಾರೆ, ಎಂಬುದು ಅವಳಿಗೆ ಅರ್ಥವಾಗಿತ್ತು.

"ನೀವು ಹೀಗೇ ಅಂತಾ ಇರಿ. ನಂಗೆ ತುಂಬ ಕೋಪ ಬಂದು ಬಿಡುತ್ತೆ"

"ಏನ್ಮಾಡ್ತೀಯೆ?"

"ಏನೊ."

"ಏನ್ಮಾಡ್ತೀಯ ಹೇಳು"

"ಹೋಗಿ ನೀವು"

"ಎಲ್ಲಿಗೆ?"

"ಆಫೀಸಿಗೆ"

"ಊಟ?"

"ಇವತ್ತು ಊಟ ಇಲ್ಲ"

"ಯಾಕೆ?"

"ಯಾಕೊ, ಹಾಕೊಲ್ಲ"

"ಸರಿ, ಹಾಗಾದರೆ ಆಫೀಸಿಗೆ ಹೋಗ್ತೀನಿ" ಎಂದು ಸೈಕಲ್ ಹಿಡಿಗೆ ಕೈಹಾಕಿದ.

ಗೌರಿ "ಅಯ್ಯೊ, ನಿಮ್ಮ ದಮ್ಮಯ್ಯ! ಶೆಟ್ಟಿ ಅಂಗಡಿಗೆ ಹೋಗಿ. ಅಲ್ಲಿ ಜವರ ಕಾದ್ಕೊಂಡು ಕೂತಿರ್ತಾನೆ ಪಾಪ. ಸಾಮಾನು ತೊಗೊಂಡು ಬನ್ನಿ, ಅನ್ನ ಹಾಕ್ತೀನಿ" ಎಂದಳು.

"ಏನು ಮಾಡ್ತೀಯ ಅಡಿಗೇನ?"

"ಏನು ಮಾಡಲಿ?"

"ಹುರುಳೀಕಾಯಿ ಬಂದರೆ ತೊಗೊ. ಬಹಳ ದಿನ ಆಯ್ತು ತಿಂದು. ಒಂದು ಪಲ್ಯ, ಅನ್ನ ಸಾರು ಮಾಡು"

"ಈರುಳ್ಳಿ ಆಲೂಗೆಡ್ಡೆ ಹಾಗೇ ಕೂತಿದೆ. ಹುಳಿ ಮಾಡೋಣಾಂತಿದ್ದೆ."

"ಮಾಡು. ಈರುಳ್ಳಿ ಆಲೂಗೆಡ್ಡೆ ಹುಳಿ ಮಾಡು, ಅದು ನಿನಗಾಗುತ್ತೆ; ಹುರುಳೀಕಾಯಿ ಪಲ್ಯ ನನಗಾಗುತ್ತೆ."

"ಸರಿ. ಸ್ವಲ್ಪ ಹೊತ್ತಿಗೆ ಮುಂಚೆ ಯಾವೋಳೋ ಬುಟ್ಟೀಲಿಟ್ಕೊಂಡು ಬಂದಿದ್ದಹಾಗಿತ್ತು ಬೀದೀಲಿ. ಈರುಳ್ಳಿ ಆಲೂಗೆಡ್ಡೆ ಇದೆಯಲ್ಲಾಂತ ನಾನಾಕಡೆ ನಿಗ ಕೊಡಲಿಲ್ಲ. ಅಂದ್ಹಾಗೇ ಅದನ್ನೂ ಯಾರಾದರೂ ಬುಟ್ಟೀಲಿಟ್ಕೊಂಡು ಮಾರಿದರೆ ಒಂದು ಕೊಂಡುಕೊಂಡುಬಿಡಬಹುದು."

"ಯಾವುದನ್ನ ?"

"ಮಗೂನ!"

ಇಬ್ಬರೂ ನಕ್ಕರು. ರಾಮುಸ್ವಾಮಿ ಸೈಕಲ್ ತೆಗೆದುಕೊಂಡು ಹೊರಗೆ ಹೊರಟ.

* * * * *

ಗಂಡ ಹೇಳಿದ್ದಂತೆಯೆ ಹುರುಳೀಕಾಯಿ ಪಲ್ಯ ಮಾಡಿದಳು; ತನ್ನ ಇಷ್ಟದಂತೆ ಈರುಳ್ಳಿ ಆಲೂಗೆಡ್ಡೆ ಹಾಕಿ ಘಮಘಮ ಹುಳಿ ಮಾಡಿದಳು. ರಾಮುಸ್ವಾಮಿ ಊಟ ಮುಗಿಸಿಕೊಂಡು ಹೆಂಡತಿಯ ಕೈಯಲ್ಲಿ ಎಲೆ ಅಡಕೆ ಮಡಿಸಿಕೊಂಡು ಹನ್ನೊಂದು ಗಂಟೆಗೆ ಆಫೀಸಿಗೆ ಹೋದ. ಗೌರಿ ಗಂಡನನ್ನು ಕಳಿಸಿ ಬೀದಿಯ ಬಾಗಿಲು ಅಗಳಿ ಹಾಕಿಕೊಂಡು ಬಂದು ಊಟಕ್ಕೆ ಕುಳಿತಳು. ಪಲ್ಯ, ಹುಳಿ ಎರಡೂ ಚೆನ್ನಾಗಿದ್ದುದರಿಂದ ನಿಧಾನವಾಗಿಯೇ ಊಟ ಮಾಡಿದಳು; ಸ್ವಲ್ಪ ಹೆಚ್ಚೇ ಆಯಿತು. 'ಉಷ್ಷಪ್ಪ' ಎಂದು ಎದ್ದು ಎಲೆ ಗೋಮ ಮಾಡಿದಳು. ಮಿಕ್ಕಿದ್ದ ಸ್ವಲ್ಪ ಅನ್ನ ಹುಳಿಯನ್ನು, ಮಧ್ಯಾಹ್ನ ಪಾತ್ರೆ ತೊಳೆಯಲು ಬರುವ ನಿಂಗಿಗೆಂದು ಮುಚ್ಚಿಟ್ಟು, ಕೈ ತೊಳೆದುಕೊಂಡು ಪಡಸಾಲೆಗೆ ಬಂದಳು. ಹೊರಗಡೆ ಯಾರೋ ಹೆಂಗಸರು 'ಅಮ್ಮಾ ಅಮ್ಮಾ" ಎಂದಹಾಗಾಯಿತು.

ಗೌರಿ ಒಳಗಿನಿಂದ "ಯಾರು ?" ಎಂದಳು.

ಆಕೆ "ನಾನು ತಾಯಿ, ಸ್ವಲ್ಪ ಬಾಗಿಲು ತೆಗೀತೀರಾ ?" ಎಂದು ಕೂಗಿದಳು. ಗೌರಿ ಬಾಗಿಲು ತೆಗೆದಳು.

ಒಬ್ಬ ಹೆಂಗಸು ಆರು ತಿಂಗಳ ಮಗುವನ್ನು ಮಡಿಲಲ್ಲಿಟ್ಟುಕೊಂಡು ಬಾಗಿಲಲ್ಲಿ ನಿಂತಿದ್ದಳು.

ಗೌರಿ "ಏನಮ್ಮ ?" ಎಂದಳು.

"ಒಂದು ತುತ್ತು ಅನ್ನ ಇದ್ದರೆ ಹಾಕಿ ತಾಯಿ, ಬ್ರಾಹ್ಮಣರು; ಮೂರು ದಿನದಿಂದ ಏನೂ ಇಲ್ಲ"

"ಯಾವೂರಮ್ಮ ?"

"ಮೈಸೂರು"

"ಇಲ್ಲಿಗೆ ಯಾಕೆ ಬಂದಿರಿ ?"

"ನಮ್ಮ ಯಜಮಾನರು ಬಿಟ್ಟುಬಿಟ್ಟರು. ಇಲ್ಲಿ ನನ್ನ ಅಕ್ಕ ಇದಾಳೇ ಅಂತ ಬಂದೆ. ಇಲ್ಲಿಲ್ಲ, ಶಿವಮೊಗ್ಗಾಕ್ಕೆ ಹೊರಟ್ಹೋಗಿದಾಳೆ. ನನಗೆ ಯಾರೂ ದಿಕ್ಕಿಲ್ಲ ತಾಯಿ. ತುಂಬ ಹಸಿವಾಗುತ್ತೆ."

ಗೌರಿಗೆ 'ಛೆ, ಪಾಪ' ಎನ್ನಿಸಿತು. "ಬನ್ನೀಮ್ಮಾ ಒಳಗೆ" ಎಂದು ಬಾಗಿಲು ಪೂರ್ತ ತೆರೆದು ಕರೆದಳು.

ಆ ಹೆಂಗಸು ಮಗುವಿನೊಡನೆ ಒಳಗೆ ಬಂದಳು. ಆಕೆ ನೋಡುವುದಕ್ಕೆ ಚೆಲುವಾಗಿದ್ದಳು. ವಯಸ್ಸು ಸುಮಾರು ಮೂವತ್ತು ಮೂವತ್ತೈದು ಇರಬಹುದು. ಕೊರಳಲ್ಲಿದ್ದ ಮಾಂಗಲ್ಯ, ಹಣೆಯ ಮೇಲಿದ್ದ ಕುಂಕುಮ, ಎಂದೋ ಕೆನ್ನೆಗೆ ಹಚ್ಚಿದ್ದ ಅರಿಸಿನದ ಗುರುತು 'ಆಕೆ ಗೃಹಿಣಿ' ಎಂದು ಹೇಳುತ್ತಿದ್ದುವು. ಕಾಲುಂಗುರ, ಕೈಯಲ್ಲಿ ಎರಡೆರಡು ಗಾಜಿನ ಬಳೆ ಹೊರತು, ಅವಳ ಮೈಮೇಲೆ ಬೇರೆ ಒಡವೆಗಳಿರಲಿಲ್ಲ. ಉಟ್ಟಿದ್ದ ಹಸಿರು ಸೀರೆ ತುಂಬ ಮಾಸಿತ್ತು, ಸೆರಗು ಸ್ವಲ್ಪ ಹರಿದಿತ್ತು. ತೊಟ್ಟಿದ್ದ ಕೆಂಪು ಕುಪ್ಪಸ ಸೀರೆಯಷ್ಟೇ ಮಾಸಿತ್ತು, ಹಳೆಯದಾಗಿತ್ತು.

ಗೌರಿ "ಕೂತ್ಕೊಳ್ಳಿ. ಸ್ವಲ್ಪ ಅನ್ನ ಇದೆ, ಹಾಕ್ತೀನಿ. ಊಟ ಮಾಡಿ" ಎಂದಳು.

"ಆಗಲಿ ತಾಯಿ, ನಿಮಗೆ ಪುಣ್ಯ ಬರುತ್ತೆ" ಎಂದು ಆಕೆ ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡು, ಪಡಸಾಲೆಯಲ್ಲಿಯೇ ಬಾಗಿಲ ಹತ್ತಿರ ಕುಳಿತುಕೊಂಡಳು.

ಗೌರಿ ಅಡಿಗೆಮನೆಗೆ ಹೋಗಿ ಒಂದು ಮುತ್ತುಗದ ಎಲೆ ತಂದು ಹಾಕಿದಳು. ತಂಬಿಗೆ ತುಂಬ ನೀರು, ಲೋಟ ತಂದು ಎಲೆಯ ಹತ್ತಿರ ಇಟ್ಟಳು. ಆ ಹೆಂಗಸು ಮಗುವನ್ನು ನೆಲದ ಮೇಲೆ ಮಲಗಿಸಲು ಹವಣಿಸಿದಳು. ತೊಡೆಯ ಮೇಲಿದ್ದ ಒಂದು ಸಣ್ಣ ಬಟ್ಟೆಯನ್ನು ಎಡಗೈಯಲ್ಲಿ ಎಳೆದುಕೊಂಡು ಅದನ್ನು ನೆಲದ ಮೇಲೆ ಹಾಸಿ, ತನ್ನ ಹಸುಗೂಸನ್ನು ಮಲಗಿಸಿದಳು. ಬೆಚ್ಚಗಿದ್ದ ತಾಯಿಯ ತೊಡೆ ತಪ್ಪಿದ್ದಕ್ಕಾಗಿ ಮಗು ಕುಸಕುಸ ಮಾಡಿತು. ಆದರೆ ಆ ತಾಯಿ "ಬೇಡ ಬೇಡ. ಇಲ್ನೋಡು, ಇಲ್ನೋಡು. ಚೀ ಕಳ್ಳ!" ಎಂದಳು. ಮಗು ತಾಯಿಯ ಮುಖ ನೋಡಿ ನಕ್ಕಿತು.

ಗೌರಿ ಎಲೆಗೆ ಅನ್ನ ಬಡಿಸುತ್ತ ಮಗುವಿನ ಮುಖ ನೋಡಿದಳು. ಹರುಕು ಅಂಗಿ ಹರುಕು ಬಟ್ಟೆಯಲ್ಲಿದ್ದರೂ ಮಗು ತುಂಬ ಚೆನ್ನಾಗಿತ್ತು; ಗುಂಡುಗುಂಡಗೆ ಕೆಂಪಗೆ ಮುದ್ದಾಗಿತ್ತು ; ಕೈಕಾಲು ಆಡಿಸುತ್ತಾ, ಅದು ತನ್ನ ತಾಯಿಯ ಮುಖವನ್ನೇ ನೋಡುತ್ತಿತ್ತು.

ಗೌರಿ ಹುಳಿ ಬಡಿಸುತ್ತ "ಮಗು ನಿಮ್ಮದಾ?" ಎಂದು ಕೇಳಿದಳು.

"ಹೌದಮ್ಮ"

"ಎಂಥ ಮಗು?"

"ಗಂಡು"

"ಎಷ್ಟು ತಿಂಗಳು?"

"ಆರಾಯ್ತು"

"ಅದೇಕೆ ನಿಮ್ಮ ಯಜಮಾನರು ಬಿಟ್ಟುಬಿಟ್ಟರು?"

"ಅವರಿಗೆ ಇಬ್ಬರು ಹೆಂಡತೀರು. ಎರಡನೆಯೋಳ ಮಾತು ಕೇಳಿ ಹೀಗ್ಮಾಡಿದರು. ಈಗ ನನಗೆ ಯಾರೂ ದಿಕ್ಕಿಲ್ಲ ತಾಯಿ. ಒಬ್ಬಳೇ ಆದರೆ ಹೇಗೋ ಕಾಲ ಕಳೀತಿದ್ದೆ; ಕೈಲಾಗದಿದ್ದರೆ ಬಾವೀಗೋ ಕೆರೇಗೋ ಬಿದ್ದು

ಪ್ರಾಣ ಕಳೆದುಕೊಳ್ತಿದ್ದೆ. ಆದರೆ, ಇದೊಂದು ಬೇರೆ ಇದೆ, ಇದಕ್ಕೋಸ್ಕರ ನಾನು ಈ ಜೀವ ಇಟ್ಟುಕೊಂಡಿರಬೇಕಾಗಿದೆ" ಎಂದು ಮಗುವಿನ ಕಡೆ ತಿರುಗಿ ಹೇಳಿದಳು.

ಗೌರಿ ಅನ್ನ ಹಾಕಿ ಮಜ್ಜಿಗೆ ಬಡಿಸುತ್ತ "ಚೆನ್ನಾಗಿದೆ ಮಗು. ನೀವು ಯಾವ ಜನ?" ಎಂದು ಕೇಳಿದಳು.

"ಸ್ಮಾರ್ತರು"

"ಬಬ್ಬೂರ್‌ಕಮ್ಮೇನ?"

"ಹೌದು."

"ನೀವು ಯಾವತ್ತು ಈ ಊರಿಗೆ ಬಂದದ್ದು?"

"ನಿನ್ನೆ ರಾತ್ರಿ ಬಂದೆ ತಾಯಿ. ನಮ್ಮಕ್ಕ ಇದಾಳೇಂತ ಬಂದೆ. ಅವಳು ಇಲ್ಲಿಲ್ಲ; ಶಿವಮೊಗ್ಗಾಕ್ಕೆ ಹೊರಟ್ಹೋಗಿದಾಳೆ. ಇರೋಕೆ ಜಾಗ ಇಲ್ಲದೆ, ಆಚೆ ಬೀದಿ ರಾಮಮಂದಿರದಲ್ಲಿ ರಾತ್ರಿ ಮಲಗಿದ್ದೆ. ಬೆಳಗ್ಗೆ ಎದ್ದು ಹೀಗೇ ಹೊರಟೆ. ನಾನು ಇದುವರೆಗೆ ಭಿಕ್ಷೆ ಬೇಡಿರಲಿಲ್ಲ ತಾಯಿ. ಒಬ್ಬರನ್ನೂ ಬಾಯಿಬಿಟ್ಟು ಒಂದು ತುತ್ತು ಅನ್ನ ಕೇಳಿದೋಳಲ್ಲ, ಈಗ ಕೇಳಬೇಕಾಗಿದೆ. ಬೆಳಗ್ಗೆಯಿಂದ ಅಲೆದೆ ತಾಯಿ, ಯಾರುಯಾರನ್ನೋ ಬೇಡಿಕೊಂಡೆ, ಎಲ್ಲೂ ಒಂದು ತುತ್ತು ಅನ್ನ ಸಿಕ್ಕಲಿಲ್ಲ. ನೀವು ಹೊಟ್ಟೆ ತುಂಬ ಅನ್ನ ಹಾಕಿ ತುಂಬ ಉಪಕಾರ ಮಾಡಿದಿರಿ" ಎಂದು, ಒಂದು ತೇಗು ತೇಗಿ ಎಲೆ ಮುದುರಿದಳು.

ಗೌರಿ ಮಜ್ಜಿಗೆಯ ಪಾತ್ರೆಯನ್ನು ಒಳಗಿಟ್ಟು ಬರುವ ಹೊತ್ತಿಗೆ ಆಕೆ ಗೋಮ ಹಚ್ಚಿ ಕೈ ತೊಳೆದುಕೊಳ್ಳಲು ಹೊರಗೆ ಹೋಗಿದ್ದಳು. ಮಗು ಪಕ್ಕದ ಗೋಡೆಯ ಮೇಲಿದ್ದ ದೇವರ ಪಟವನ್ನೇ ನೋಡುತ್ತ ಆಟ ಆಡುತ್ತ ಮಲಗಿತ್ತು. ಗೌರಿ ಅದನ್ನು ನೋಡಿದಳು. ಆ ಮುದ್ದಾದ ಮುಖ ನೋಡಿದ ಕೂಡಲೆ ಅವಳ ಹೃದಯದಲ್ಲಿ ಒಂದು ಆಸೆ ಮೂಡಿತು. ಮಗುವನ್ನೇ ನೋಡುತ್ತ ನಿಂತುಕೊಂಡಳು.

ಅಷ್ಟು ಹೊತ್ತಿಗೆ ಸರಿಯಾಗಿ ಅದರ ತಾಯಿ ಕೈ ತೊಳೆದುಕೊಂಡು ಒಳಗೆ ಬಂದಳು. ಮಗುವಿನ ಕಡೆ ನೋಡಿ "ಸುತ್ತ ಬಿಳೀ ಗೋಡೆ,

ಪಟಗಿಟ ಹಾಕಿದೀರಿ ಚೆನ್ನಾಗಿದೆ. ಅದಕ್ಕೇ ಆಟ ಆಡ್ತಾ ಇದಾನೆ" ಎಂದಳು.

"ಹಾಗಾದರೆ ಅವನನ್ನ ಇಲ್ಲೇ ಬಿಟ್ಟುಬಿಡಿ. ನಮ್ಮನೇಲೇ ಇರಲಿ" ಎಂದು ಗೌರಿ ನಕ್ಕಳು.

"ಅಯ್ಯೋ, ಬಡವರ ಮನೆ ಮಗೂನ ನೀವ್ಯಾಕೆ ಇಟ್ಟುಕೊಳ್ತೀರ ತಾಯಿ! ಹಾಗೆ ಯಾರಾದರೂ ಇಟ್ಟುಕೊಂಡು ಸಾಕೋರು ಸಿಕ್ಕಿದರೆ ನನ್ನ ಪುಣ್ಯ—ಹೋಗಲಿ, ಅದಕ್ಕಾಗೋ ಅಂಥ ಒಂದಂಗಿ ಇದ್ದರೆ ಕೊಡಿ ತಾಯಿ; ಪಾಪ, ಅದೊಂದೇ ಅಂಗಿ"

"ನಮ್ಮನೇಲಿ ಎಲ್ಲಿ ಬರ್ಬೇಕಮ್ಮ, ನಾನು ಅಂಥ ಪುಣ್ಯ ಪಡೆದಿಲ್ಲ.... ಹೊಸ ಅಂಗಿ ಹಾಕ್ಕೊಂಡು ನಮ್ಮನೇಲೆ ಇದ್ದುಬಿಡ್ತಾನೆ; ಇಲ್ಲೇ ಬಿಟ್ಟುಬಿಡಿ"

"ನೀವು ತಮಾಷೆ ಮಾಡ್ತಿದೀರಾಮ್ಮ?"

"ಇಲ್ಲ. ನಿಜವಾಗೂ ಹೇಳ್ತಿದೀನಿ. ನಮಗೆ ಮಕ್ಕಳಿಲ್ಲ. ಚೆನ್ನಾಗಿ ಸಾಕ್ಕೊತೀವೆ. ನಿಮಗೂ ಅದರ ಯೋಚನೆ ತಪ್ಪುತ್ತೆ."

"ತಾವು ಹಾಗೆ ಮಾಡಿದರೆ ತುಂಬ ಉಪಕಾರ ಆಗುತ್ತೆ. ಆದರೆ, ನಾನು ಶಿವಮೊಗ್ಗಾಕ್ಕೆ ಹೋಗಬೇಕೂಂತಿದ್ದೆ."

"ಹೋಗಿ. ದುಡ್ಡು ಕೊಡ್ತೀನಿ. ಶಿವಮೊಗ್ಗಾಕ್ಕೆ ಹೋಗಿ. ನೀವು ತೊಗೊಳ್ಳೋದಾದರೆ ನನ್ನ ಒಂದು ಹಳೇ ಸೀರೆ ಇದೆ, ಎರಡು ಕುಪ್ಪಸ ಇದೆ. ಕೊಡ್ತೀನಿ. ಹೋಗಿ; ನಿಮಗೆ ಮನಸ್ಸಾದಾಗ ಬಂದು ಮಗೂನ್ನ ನೋಡಿಕೊಂಡು ಹೋಗಿ"

ಆ ಅನಾಥೆಗೆ ತನ್ನ ಭಾಗ್ಯದ ದೇವತೆಯೆ ಮುಂದೆ ನಿಂತು ಮಾತಾಡಿದ ಹಾಗಾಯಿತು. ತಕ್ಷಣವೆ "ನನ್ನ ಭಾಗದ ದೇವರು ತಾಯಿ ನೀವು. ಹಾಗೆ ಮಾಡಿದರೆ ನಿಮಗೆ ತುಂಬ ಪುಣ್ಯ ಬರುತ್ತೆ" ಎಂದು ಗೌರಿಗೆ ಅಡ್ಡಬಿದ್ದು ನಮಸ್ಕಾರ ಮಾಡಲು ಹೋದಳು. ಗೌರಿ "ಅಯ್ಯೋ ಬೇಡಿ ಬೇಡಿ, ನೀವು ದೊಡ್ಡೋರು" ಎಂದು ಮೈ ಮುಟ್ಟಿ ಎಬ್ಬಿಸಿದಳು.

ಕೋಣೆಗೆ ಹೋಗಿ ಪೆಟ್ಟಿಗೆ ತೆಗೆದು, ಐದು ರೂಪಾಯಿಯ ಒಂದು

ಹೊಸ ನೋಟು, ಉಡದೆ ಪೆಟ್ಟಿಗೆಯಲ್ಲಿಯೇ ಹಳೆಯದಾಗಿದ್ದ ಒಂದು ಸೀರೆ, ಎರಡು ಹಳೆಯ ಕುಪ್ಪಸ ತೆಗೆದುಕೊಂಡುಬಂದಳು. ಐದು ರೂಪಾಯಿಯ ನೋಟನ್ನು ಎಲೆ ಅಡಕೆಯಲ್ಲಿಟ್ಟು, ಕುಂಕುಮ ಕೊಟ್ಟು, ಅಡಕೆಲೆ ತಟ್ಟೆಯನ್ನು ಆ ಹೆಂಗಸಿನ ಮುಂದೆ ಹಿಡಿದಳು.

ಐದು ರೂಪಾಯಿಯ ಹೊಸ ನೋಟು ನೋಡಿ ಆಕೆಗೆ ತುಂಬ ಸಂತೋಷವಾಯಿತು. ಏಕೊ ಸ್ವಲ್ಪ ಹಿಂಜರಿದಳು. ಗೌರಿ "ತೊಗೊಳ್ಳಿ, ಪರವಾಯಿಲ್ಲ" ಎಂದ ಮೇಲೆ, ಕೈ ಚಾಚಿ ಎಲೆ ಅಡಕೆ ತೆಗೆದುಕೊಂಡಳು.

"ಇಷ್ಟೆಲ್ಲ ಆಯ್ತು, ನಿಮ್ಮ ಹೆಸರೇ ಹೇಳಲಿಲ್ಲ" ಎಂದು ಗೌರಿ ಸೀರೆ ಕುಪ್ಪಸಗಳನ್ನು ಆಕೆಯ ಮುಂದಿಡುತ್ತ ಕೇಳಿದಳು. ಆಕೆ "ನರಸಮ್ಮ" ಎಂದಳು.

"ನೀವು ಇವತ್ತು ರಾತ್ರೀನೇ ಹೊರಡ್ತೀರ ಶಿವಮೊಗ್ಗಾಕ್ಕೆ ?"

"ಹ್ಞ. ರಾತ್ರೀನೇ ಹೊರಡಬಹುದಲ್ಲವೆ ?"

"ಹೊರಡಬಹುದು. ಹಾಗಾದರೆ ರಾತ್ರಿ ಇಲ್ಲೀಗೆ ಊಟಕ್ಕೆ ಬನ್ನಿ. ಊಟ ಮಾಡಿಕೊಂಡು ಹೋಗಿ."

"ಆಗಲಿ ತಾಯಿ" ಎಂದು ಆಕೆ ತನ್ನ ಮಗುವಿನ ಕಡೆ ನೋಡಿದಳು. ಎತ್ತಿಕೊಳ್ಳಬೇಕೆನ್ನಿಸಿತು, ಎತ್ತಿಕೊಂಡಳು. ಮುದ್ದಾಡಬೇಕೆನ್ನಿಸಿತು, ಮುದ್ದಾಡಿದಳು. ಹಾಲು ಕೊಟ್ಟು ಆಗಲೆ ಎರಡು ಗಂಟೆಯ ಮೇಲಾಗಿದ್ದುದರಿಂದ ತೊಡೆಯ ಮೇಲೆ ಮಲಗಿಸಿಕೊಂಡು ಎದೆಯೂಡಿಸಿದಳು.

ಗೌರಿಯ ಕಣ್ಣು ಆ ಕಡೆ ಹೋಯಿತು.

ಅವಳಿಗೆ ಅದೊಂದು ಸಮಸ್ಯೆಯಾಗಿತ್ತು.

"ಹಸುವಿನ ಹಾಲು ಕುಡಿಯುತ್ತ ಮಗು ?" ಎಂದು ಕೇಳಿದಳು.

ಅದಕ್ಕೆ ಆಕೆ "ಕುಡಿಯುತ್ತೆ, ಸ್ವಲ್ಪ ನೀರು ಬೆರಸಿ ಕುಡಿಸಬೇಕು, ಅಷ್ಟೆ. ನನ್ನ ಹಾಲು ಸಾಕಾಗೋಲ್ಲ. ನಾನೂ ಊರಲ್ಲಿದ್ದಾಗ ಒಂದು ಹೊತ್ತು ಹಸುವಿನ ಹಾಲು ಕುಡಿಸ್ತಿದ್ದೆ. ಆದರೆ ಈಗ ಮೂರು ದಿನದಿಂದ ಅದು ನನ್ನ ಹಾಲಿನ ಮೇಲೇ ಇದೆ" ಎಂದಳು.

ಗೌರಿ "ಛೆ, ಪಾಪ. ನಾನು ಹಸುವಿನ ಹಾಲು ತರಿಸ್ತೀನಿ" ಎಂದು,

ಕೋಣೆಗೆ ಹೋಗಿ ಒಂದು ಚಾಪೆ ತಂದು ಪಡಸಾಲೆಯಲ್ಲಿ ಹಾಸಿದಳು. ಅದರ ಮೇಲೆ ತನ್ನ ಹಳೆಯ ಸೀರೆಯೊಂದನ್ನು ಮಡಿಸಿ ಹಾಕಿ, ಮೇಲೊಂದು ಬಿಳಿಯ ಟವಲು ಹಾಸಿದಳು. "ಇಲ್ಲಿ ಮಲಗಿಸಿ, ನಾನು ಆಡಿಸ್ತೀನಿ" ಎಂದಳು. ತಾಯಿ ಮಗುವನ್ನು ಅಲ್ಲಿ ಮಲಗಿಸಿದಳು. "ನಾನು ಬರ್ತೀನಿ ತಾಯಿ ಇನ್ನ. ಯಾವುದಾದರೂ ಬಸ್ಸು ಸಿಕ್ಕಿದರೆ ಈಗಲೇ ಶಿವಮೊಗ್ಗಾಕ್ಕೆ ಹೊರಟ್ಬಿಡ್ತೀನಿ. ಇಲ್ದೇ ಇದ್ದರೆ ರಾತ್ರಿ ರೈಲಿನಲ್ಲಿ ಹೋಗ್ತೀನಿ" ಎಂದಳು.

ಗೌರಿ "ರಾತ್ರಿ ಹೋಗೋದಾದರೆ ಬಂದು ಊಟ ಮಾಡ್ಕೊಂಡು ಹೋಗಿ" ಎಂದು ಮತ್ತೆ ಹೇಳಿದಳು.

ನರಸಮ್ಮನಿಗೆ ಇನ್ನು ಅಲ್ಲಿರಲು ಮನಸ್ಸಾಗಲಿಲ್ಲ.

ಮಗು ಕಣ್ಣೆದುರಿಗಿದ್ದರೆ ಆ ಕಡೆ ಸೆಳೆತ, ಎಂದುಕೊಂಡು ಆದಷ್ಟು ಬೇಗ ಆಕೆ ಆ ಮನೆ ಬಿಡಲು ಹಾತೊರೆಯುತ್ತಿದ್ದಳು.

"ನಾನು ಬರ್ತೀನಿ ತಾಯಿ, ನಮಸ್ಕಾರ" ಎಂದು ಹೇಳಿ ಹೊರಟು ಬಿಟ್ಟಳು.

ಗೌರಿ ಬೀದಿಯ ಬಾಗಿಲು ಹಾಕಿಕೊಂಡು, ಮಗುವಿನ ಹತ್ತಿರಕ್ಕೆ ಬಂದು ಕುಳಿತಳು. ಮುದ್ದಾದ ಆ ಮುಖ ನೋಡಿ, ಎತ್ತಿಕೊಳ್ಳಬೇಕೆನ್ನಿಸಿತು; ಎತ್ತಿಕೊಂಡಳು. ಆದರೆ ತನ್ನ ಮನೆಯಲ್ಲಿ ಆ ಮಗು ಹಾಗೆ ಕೊಳೆ ಅಂಗಿ ಹಾಕಿಕೊಂಡು ಕೊಳಕಾಗಿ ಇರುವುದು ಹಿಡಿಸಲಿಲ್ಲ. ಅಂಗಿ, ಕಾಚ ಎರಡನ್ನೂ ಬಿಚ್ಚಿದಳು. ಬಚ್ಚಲುಮನೆಗೆ ಹೋಗಿ ಒಂದು ತಂಬಿಗೆಯ ತುಂಬ ಬಿಸಿನೀರು ತಂದಳು; ಪುಟ್ಟ ಟವಲೊಂದನ್ನು ಬಿಸಿನೀರಿನಲ್ಲಿ ಅದ್ದಿ, ಮಗುವಿನ ಮೈಯೆಲ್ಲ ಒರಸಿದಳು. ತಾನು ಉಪಯೋಗಿಸುತ್ತಿದ್ದ ಪೌಡರ್ ಡಬ್ಬ ತಂದು, ಮಗುವಿನ ಮುಖ ಮೈಗೆಲ್ಲ ಪೌಡರ್ ಹಚ್ಚಿದಳು. ಅಷ್ಟು ಹೊತ್ತಿಗೆ ಒಕ್ಕಲಗಿತ್ತಿ ಸಿಂಗಿ ಬೀದಿಯ ಬಾಗಿಲು ತಟ್ಟಿದಳು. ಗೌರಿ ಅಗಳಿ ತೆಗೆದಳು. ಸಿಂಗಿ ಒಳಗೆ ಬಂದು ಮಗುವನ್ನು ನೋಡಿ, "ಯಾರದರವ್ವ ಮಗ?" ಎಂದು ಕೇಳಿದಳು.

"ನಮ್ಮದು"

"ಅಂಗಂದ್ರೆ ?"

"ನಮ್ಮನೇದು"

"ಅಂಗಂದ್ರೇನ್ರವ್ವ ?"

"ಏನೋ. ಹೋಗಲಿ ಬಿಡು. ನಾ ಒಂದು ಕೆಲಸ ಹೇಳ್ತೀನಿ ಮಾಡು."

"ಏನ್ರವ್ವ ?"

"ದುಡ್ಡು ಕೊಡ್ತೀನಿ, ಒಂದರ್ಧ ಸೇರು ಒಳ್ಳೆ ಹಸುವಿನ ಹಾಲು ತೊಗೊಂಡ್ಬರ್ತೀಯ ?"

ನಿಂಗಿ "ಆಗಲಿ ಕಣ್ರವ್ವ" ಎಂದು ಒಪ್ಪಿಕೊಂಡು ಮತ್ತೆ "ಯಾರದರವ್ವ ಮಗ?" ಎಂದು ಅಂಗಲಾಚಿ ಕೇಳಿದಳು.

ಗೌರಿ "ನಮ್ಮನೇದು ಕಣೆ. ನಿನಗರ್ಥವಾಗೊಲ್ಲ, ನೀ ಇನ್ನೂ ಹುಡುಗಿ ಹೋಗು. ಬೇಗ ಹಾಲು ತೊಗೊಂಡ್ಬಾ, ಮಗೂಗೆ ಬೇಕೂಂತ ಹೇಳಿ ಒಳ್ಳೆ ಹಾಲು ತೊಗೊಂಡ್ಬಾ" ಎಂದು ದುಡ್ಡು, ಪಾತ್ರೆ ತಂದು ಅವಳ ಮುಂದಿಟ್ಟಳು. ನಿಂಗಿ ಅರ್ಧ ಗಂಟೆಯಲ್ಲಿಯೇ ಅರ್ಧ ಸೇರು ಒಳ್ಳೆಯ ಹಸುವಿನ ಹಾಲನ್ನು ತಂದುಕೊಟ್ಟಳು.

ಆಡುತ್ತಿದ್ದ ಮಗು ಏಕೊ ಇದ್ದಕ್ಕಿದ್ದಂತೆ ಅಳುವುದಕ್ಕೆ ಮೊದಲು ಮಾಡಿತು. ಗೌರಿ ಅದನ್ನು ಎತ್ತಿಕೊಂಡು ಸಮಾಧಾನ ಮಾಡಿದಳು. ಆದರೆ ಅದು ಸುಮ್ಮನಾಗಲಿಲ್ಲ. ಸರಿಯಾದ ಅಂಗಿ ಇಲ್ಲ ಎಂದು ಮೈಗೆ ಬಿಳಿಯ ಟವಲು ಸುತ್ತಿಬಿಟ್ಟಿದ್ದಳು. ಅಂಗಿ ಇಲ್ಲದೆ ಚಳಿಯಾಗಬಹುದು. ಹಸಿವಾಗಿದ್ದರೂ ಆಗಿರಬಹುದು; ಹಾಲು ಕುಡಿಸಬೇಕೊ ಏನೊ, ಎನ್ನಿಸಿತು. ಕೂಡಲೆ, ಹಿತ್ತಲ ಕಡೆ ಮುಸುರೆ ತಿಕ್ಕುತ್ತಿದ್ದ ನಿಂಗಿಯನ್ನು ಕರೆದು "ನಿಂಗಿ, ನೀನು ಮಗೂನ ಸ್ವಲ್ಪ ಆಡಿಸ್ತಿರೆ. ನಾನು ಇಲ್ಲೇ ಹೋಗಿಬಿಟ್ಟು ಬಂದುಬಿಡ್ತೀನಿ" ಎಂದು ಹೇಳಿ, ಐದು ರೂಪಾಯಿಯ ಒಂದು ನೋಟು ತೆಗೆದುಕೊಂಡು, ಹತ್ತಿರವಲ್ಲಿಯೇ ಇದ್ದ ಪೇಟೆಬೀದಿಗೆ ಸರಸರ ಹೋದಳು. ಎರಡು ರೆಡಿ ಮೇಡ್ ಹೊಸ ಅಂಗಿ, ನಾಲ್ಕು ಕಾಚ ಕೊಂಡುಕೊಂಡು, ಶೆಟ್ಟಿ ಅಂಗಡಿಯಲ್ಲಿ ಒಂದು ಫೀಡಿಂಗ್ ಬಾಟ್ಲ್ ಖರೀದಿ ಮಾಡಿ ಬೇಗ

ಮನೆಗೆ ಬಂದಳು. ಮನೆಯ ಬಾಗಿಲ ಹತ್ತಿರ ಬಂದಾಗ, ಒಳಗೆ ಮಗು ಗಟ್ಟಿಯಾಗಿ ಅಳುತ್ತಿದ್ದುದು ಕೇಳಿಸಿತು.

ನಿಂಗಿ ಮಗುವನ್ನು ಎತ್ತಿಕೊಂಡು ಸಮಾಧಾನ ಮಾಡುತ್ತಿದ್ದಳು. ಆದರೂ ಅದು ಏಕೊ ಗಟ್ಟಿಯಾಗಿ ಅಳುತ್ತಿತ್ತು. ಗೌರಿ ಮೊದಲು ಒಲೆ ಹೊತ್ತಿಸಿ ಹಾಲು ಕಾಯಿಸಿದಳು. ಸ್ವಪ್ಪ ಹಾಲಿಗೆ ಸ್ವಲ್ಪ ನೀರು ಬೆರಸಿ, ಸಕ್ಕರೆ ಹಾಕಿ, ಫೀಡಿಂಗ್ ಬಾಟ್ಲ್ ತೊಳೆದುಕೊಂಡು ಬಂದಳು. ಮಗು ಇನ್ನೂ ಅಳುತ್ತಲೇ ಇತ್ತು. ಅದನ್ನು ಎತ್ತಿಕೊಂಡು ಅಡಿಗೆಮನೆಗೆ ಹೋದಳು. ಅಲ್ಲಿಯೇ ಕುಳಿತು ತೊಡೆಯ ಮೇಲೆ ಮಲಗಿಸಿಕೊಂಡು ಹಾಲು ಕುಡಿಸಿದಳು. ಹಾಲಿನ ಸೀಸೆ ತುಟಿಗೆ ತಗುಲಿದ ಕೂಡಲೆ ಮಗು ವಿನ ಅಳು ನಿಂತಿತು. ಗೌರಿಗೆ ಆಗ ಸಮಾಧಾನವಾಯಿತು.

ಹಾಲು ಕುಡಿಸಿದ ಮೇಲೆ ಮಗುವಿಗೆ ಹೊಸ ಅಂಗಿ ಹಾಕಿದಳು. ಅವಳು ತಂದಿದ್ದ ಬಿಳಿ ಅಂಗಿ ಅದಕ್ಕೆ ಚೆನ್ನಾಗಿ ಒಪ್ಪಿತ್ತು. ಹೊಸ ಕಾಚ ಕಟ್ಟೋಣ, ಎಂದುಕೊಂಡಿದ್ದಳು. ಅಷ್ಟರಲ್ಲೇ ಸೀರೆ ಒದ್ದೆಯಾಯಿತು. "ಹೋಗಲಿ ಬಿಡು, ಕಾಚ ಒದ್ದೆ ಆಗಲಿಲ್ಲವಲ್ಲ" ಎಂದುಕೊಂಡು ಗೌರಿ ಮಗುವಿಗೆ ಹೊಸ ಕಾಚ ಕಟ್ಟಿದಳು.

ಸ್ವಲ್ಪ ಹೊತ್ತು ಮಗು ಸುಮ್ಮನಿತ್ತು. ಆದರೆ ಮತ್ತೆ ಅಳುವುದಕ್ಕೆ ಷುರು ಮಾಡಿತು. ಗೌರಿ ಅದನ್ನೆತ್ತಿಕೊಂಡು ಪಡಸಾಲೆಯಲ್ಲಿ ಓಡಾಡಿ ದಳು. ಸುತ್ತ ಇದ್ದ ಎಲ್ಲ ದೇವರ ಪಟಗಳನ್ನೂ ಒಂದೊಂದಾಗಿ ಅದಕ್ಕೆ ತೋರಿಸಿದಳು. ಆದರೂ ಮಗು ಅಳು ನಿಲ್ಲಿಸಲಿಲ್ಲ. "ಪಾಪ, ನಿದ್ದೆ ಬಂದಿದೆಯೊ ಏನೊ" ಎಂದುಕೊಂಡು, ಹಿತ್ತಲಕಡೆ ಸೀರೆ ಒಗೆಯುತ್ತಿದ್ದ ನಿಂಗಿಯನ್ನು ಕರೆದಳು. ಒಂದು ಬಿಳಿಯ ಮಪಟೆ ತೆಗೆದುಕೊಂಡು ಇಬ್ಬರೂ ಸೇರಿ, ಮಲಗುವ ಕೋಣೆಯಲ್ಲಿ ಜೋಣಲಿ ಕಟ್ಟಿದರು. ಮಗು ವನ್ನು ಅದರಲ್ಲಿ ಮಲಗಿಸಿ ತೂಗಿದ್ದಾಯಿತು. ಐದು ನಿಮಿಷ ತೂಗಿದ ಮೇಲೆ ಮಗು ಮಲಗಿಕೊಂಡಿತು.

ಗೌರಿ, ಮಗು ಮಲಗಿತು ಎಂದುಕೊಂಡು ಅಡಿಗೆಮನೆಗೆ ಹೋದಳು. ಗಂಡ ಬಂದರೆ ಏನು ಹೇಳಬೇಕು, ಅವರು ಇದಕ್ಕೆ ಏನನ್ನಬಹುದು,

ಅವರ ಕೈಯಿಂದ ಏನೇನು ಸಾಮಾನು ತರಿಸಬೇಕು ಎಂಬುದನ್ನೇ ಯೋಚಿಸುತ್ತ ಅವಳು ಕಾಫಿ ತಿಂಡಿ ಮಾಡಲು ಎಲ್ಲ ಸಿದ್ಧಪಡಿಸಿಕೊಳ್ಳು ತ್ತಿದ್ದಳು. ಆದರೆ ಇದ್ದಕ್ಕಿದ್ದಂತೆ ಮಗು ಚೀರಿದ ಹಾಗಾಯಿತು. ತಕ್ಷಣವೆ ಕೋಣೆಗೆ ಓಡಿಹೋಗಿ ನೋಡಿದಳು. ಮಗು ಗಟ್ಟಿಯಾಗಿ ಅಳುತ್ತಿತ್ತು. ಪಾಪ, ಅದಕ್ಕೆ ಜೋಣಲಿಯಲ್ಲಿ ಮಲಗಿ ಅಭ್ಯಾಸವಿಲ್ಲವೊ ಏನೊ, ಎಂದುಕೊಂಡು "ಬೇಡ ಮರಿ ಅಳಬೇಡ. ನಾಳೆ ನಿನಗೆ ಒಳ್ಳೆ ತೊಟ್ಟಿಲು ತರಿಸ್ತೀನಿ" ಎಂದು ಹೇಳಿ ಮಗುವನ್ನು ಎತ್ತಿಕೊಂಡಳು. ಮಗು ಅಳು ವನ್ನು ನಿಲ್ಲಿಸಲಿಲ್ಲ. ಹಿತ್ತಲಕಡೆಗೆ ಕರೆದುಕೊಂಡು ಹೋಗಿ, ಜವರ ಹಾಕಿದ್ದ ಹೂ ಗಿಡಗಳನ್ನೆಲ್ಲ ತೋರಿಸಿದಳು. ಆ ಗಿಡಗಳ ತುಂಬ ಪುಟ್ಟಪುಟ್ಟ ಬಣ್ಣಬಣ್ಣದ ಹೂಗಳು ತುಂಬಿದ್ದುವು. ಆದರೆ ಮಗು ಆ ಕಡೆ ನೋಡಲಿಲ್ಲ. ಸುಮ್ಮನೆ ಅಳುತ್ತಿತ್ತು. ಬೀದಿಯ ಕಡೆಗೆ ಕರೆದುಕೊಂಡು ಹೋದಳು; ಸುಮ್ಮನಾಯಿತು. ಮಗುವನ್ನೆತ್ತಿ ಕೊಂಡು ಸ್ವಲ್ಪ ಹೊತ್ತು ಅವಳು ಅಲ್ಲೇ ನಿಂತಿದ್ದಳು. ಈ ಗಲಾಟೆಯಲ್ಲಿ, ಐದು ಗಂಟೆಯಾದರೂ ಗಂಡನಿಗೆ ಕಾಫಿ ತಿಂಡಿ ಮಾಡಲಾಗಲಿಲ್ಲ.

ರಾಮುಸ್ವಾಮಿ ಐದೂವರೆ ಗಂಟೆಗೆ ಮನೆಗೆ ಬಂದ. ಗೌರಿ ಬಾಗಿಲ ಲ್ಲಿಯೇ ಮಗುವನ್ನೆತ್ತಿಕೊಂಡು ನಿಂತಿದ್ದಳು. ಗಂಡನ ಮುಖ ನೋಡಿ ನಕ್ಕಳು. ರಾಮುಸ್ವಾಮಿಯೂ ನಕ್ಕು "ಏನು ?" ಎಂದ. ಗೌರಿ "ಮಗು ನೋಡಿ, ಹೇಗಿದೆ ?" ಎಂದಳು. ರಾಮುಸ್ವಾಮಿ ಒಳಗೆ ಬಂದ.

"ಯಾರ ಮನೇದು ?"

"ನಮ್ಮನೇದು"

"ಯಾವತ್ತಿಂದ ?"

"ಇವತ್ತಿಂದ"

"ಎಷ್ಟೊತ್ತಿನ ವರೆಗೆ ?"

"ಯಾವಾಗಲೂ ನಮ್ಮನೇದೆ"

"ಯಾರು ದಾನ ಕೊಟ್ಟೋರು ?"

"ಬೀದೀಲಿ ಒಬ್ಬಳು ಬುಟ್ಟಿ ತುಂಬ ಮಕ್ಕಳನ್ನಿಟ್ಟುಕೊಂಡು ಮಾರ್ರೋಕೆ ಬಂದಿದ್ದಳು. ಒಂದಿರಲೀಂತ ಕೊಂಡುಕೊಂಡೆ"

"ಅದ್ಯಾವೋಳಪ್ಪ ಪುಣ್ಯಾತಗಿತ್ತಿ ಈ ವ್ಯಾಪಾರಕ್ಕೆ ಹೊರಟೋಳು! ಹೋಗಲಿ, ಎಷ್ಟು ಕೊಟ್ಟೆ?"

"ಐದು ರೂಪಾಯಿ, ಒಂದು ಸೀರೆ, ಎರಡು ಕುಪ್ಪಸ."

"ಎಂಥ ಮಗು"

''ಗಂಡು ಮಗು''

"ಇನ್ನೊಂದ್ಹೈದು ರೂಪಾಯಿ, ಒಂದು ಸೀರೆ, ಎರಡು ಕುಪ್ಪಸ ಕೊಟ್ಟು ಒಂದು ಹೆಣ್ಣು ಮಗೂನೂ ತೊಗೋಬೇಕಾಗಿತ್ತು. ಹೋಗಲಿ, ಅದೇನಾಯ್ತೊ ನಿಜ ಹೇಳು."

ಗೌರಿ ನಿಜ ಹೇಳಿದಳು.

ಆದರೆ ರಾಮುಸ್ವಾಮಿ ನಂಬಲಿಲ್ಲ. "ಅದ್ಯಾವೋಳಪ್ಪ ಪುಣ್ಯಾತ ಗಿತ್ತಿ" ಎಂದುಕೊಂಡು ಮಲಗುವ ಕೋಣೆಗೆ ಹೋದ. ಅಲ್ಲಿದ್ದ ಜೋಣಲಿ, ಬಟ್ಟೆ ಸ್ಟ್ಯಾಂಡಿನ ಮೇಲಿದ್ದ ಮಗುವಿನ ಹೊಸ ಅಂಗಿ, ಹತ್ತಿರದಲ್ಲಿಯೇ ಬಿದ್ದಿದ್ದ ಒದ್ದೆ ಬಟ್ಟೆ ಎಲ್ಲ ನೋಡಿ ಗೌರಿಯ ಕತೆಯಲ್ಲಿ ನಂಬಿಕೆ ಹುಟ್ಟಿತು. ಅಡಿಗೆಮನೆಗೆ ಬಂದು ನೋಡಿದಮೇಲಂತೂ ಚೆನ್ನಾಗಿ ನಂಬಿಕೆಯುಂಟಾಯಿತು. ತೊಳೆಯದೆ ಹಾಗೆಯೇ ಇಟ್ಟಿದ್ದ ಫೀಡಿಂಗ್ ಬಾಟ್ಲ್ ಕಾಫಿ ಒಲೆಯ ಹತ್ತಿರ ಕುಳಿತಿತ್ತು.

ರಾಮುಸ್ವಾಮಿ ಮುಖ ತೊಳೆದುಕೊಂಡು ಬಂದು, "ಏನು ಮಾಡಿದೀಯ ತಿಂಡಿ?'' ಎಂದು ಕೇಳಿದ.

ಗೌರಿ "ಏನೂ ಇಲ್ಲ. ಕರಕೊಳ್ಳಿ ನಿಮ್ಮ ಮಗೂನ'' ಎಂದು ಅದನ್ನು ಗಂಡನ ಕೈಗೆ ಕೊಡಲು ಹೋದಳು. ರಾಮುಸ್ವಾಮಿ ಆ ಎಳೆಯ ಮಗುವನ್ನು ಎತ್ತಿಕೊಳ್ಳಲು ಸ್ವಲ್ಪ ಹಿಂಜರಿದ. ಹೆಂಡತಿ "ಪರವಾಯಿಲ್ಲ ಎತ್ತಿಕೊಳ್ಳಿ. ಈಗತಾನೆ ನನ್ನ ಸೀರೆ ಒದ್ದೆ ಆಗಿದೆ? ನಿಮ್ಮ ಷರಟೇನು ಒದ್ದೆ ಆಗೊಲ್ಲ" ಎಂದಳು. ರಾಮುಸ್ವಾಮಿ ಮಗುವನ್ನು ಎತ್ತಿಕೊಂಡ.

ಗೌರಿ ಅಡಿಗೆಮನೆಗೆ ಹೋದಳು. ಬೇಗ ಒಲೆ ಹೊತ್ತಿಸಿ ಹಾಲು ಕಾಯಿಸಿ ಗಂಡನಿಗೆ ಒಂದು ಲೋಟ ಓವಲ್‌ಟಿನ್ ಮಾಡಿಕೊಟ್ಟಳು. ರಾಮುಸ್ವಾಮಿ ಮಗುವನ್ನು, ಚಾಪೆಯ ಮೇಲೆ ಹಾಸಿದ್ದ ಬಟ್ಟೆಯ ಮೇಲೆ

ಮಲಗಿಸಿ, ಓವಲ್‌ಟಿನ್ ತೆಗೆದುಕೊಂಡ. ಮಗು ಒಂದೆರಡು ನಿಮಿಷ ಆಡುತ್ತಿತ್ತು. ಆದರೆ ಮತ್ತೆ ಅಳುವುದಕ್ಕೆ ಮೊದಲುಮಾಡಿತು.

ರಾಮಸ್ವಾಮಿ "ಯಾಕೊ ಅಳುತ್ತಲ್ಲೇ!" ಎಂದ. ಗೌರಿ "ನೀವು ಎತ್ತಿಕೊಂಡಿರಬೇಕೂಂತ ಕಾಣುತ್ತೆ. ಎತ್ತಿಕೊಂಡಿರಿ. ಹಾಲು ಬಿಸಿ ಮಾಡಿಸಿ ಕುಡಿಸ್ತೀನಿ" ಎಂದು ಅಡಿಗೆಮನೆಗೆ ಹೋದಳು. ರಾಮಸ್ವಾಮಿ ಮಗುವನ್ನು ಎತ್ತಿಕೊಂಡು ಪಡಸಾಲೆಯಲ್ಲಿ ಓಡಾಡಿದ. ಅದು ಸುಮ್ಮನಾಗಲಿಲ್ಲ. "ಹೊರಗಡೆ ಹೋಗೋಣ ಬಾ, ಹೊರಗಡೆ" ಎಂದು ವೆರಾಂಡಾಕ್ಕೆ ಹೋದ. ಮಗು ಸುಮ್ಮನಾಯಿತು!

ಗೌರಿ ಹಾಲು ಬೆರಸಿಕೊಂಡು ಪಡಸಾಲೆಗೆ ಬಂದಳು. ಗಂಡನನ್ನು ಕುರಿತು "ಇಲ್ಲಿ ತನ್ನಿ, ಹಾಲು ಕುಡಿಸೋಣ" ಎಂದಳು. ರಾಮಸ್ವಾಮಿ ಒಳಗೆ ಬಂದು, ಮಗುವನ್ನು ಹೆಂಡತಿಯ ಕೈಗೆ ಕೊಟ್ಟ. ಗೌರಿ ಮಗುವಿಗೆ ಹಾಲು ಕುಡಿಸುತ್ತ,

"ನೀವು ತುಂಬ ಸಾಮಾನು ತರಬೇಕು ನಮ್ಮ ಮಗೂಗೆ."

"ಏನೇನು?"

"ಒಂದು ಪಟ್ಟಿ ಮಾಡ್ಕೊಡ್ತೀನಿ, ಆಮೇಲೆ."

"ಅದೇನೇನು ತರಬೇಕೊ ಹೇಳು. ಆಮೇಲೆ ಪಟ್ಟಿ ಮಾಡಿ ಕೊಡ್ತೀಯಂತೆ."

"ಒಂದು ತೊಟ್ಟಿಲು, ಒಂದು ಗಿಲ್ಕಿ, ಎರಡು ಸಿಲ್ಕ್ ಅಂಗಿ, ನಾಲ್ಕು ದಿನಾ ಹಾಕ್ಕೊಳ್ಳೋ ಅಂಗಿ, ಒಂದರ್ಧ ಡಜನ್ ಕಾಜ, ಒಂದು ಉಲ್ಲನ್ ಟೋಪಿ, ಒಂದು ಪುಟ್ಟ ಸ್ವೆಟರು, ಪುಟ್ಟ ಕಾಲುಚೀಲ, ಪೌಡರ್ ಡಬ್ಬ—ಸದ್ಯಕ್ಕೆ ಇಷ್ಟು ತಂದಿರಿ."

"ಆಗಲಿ. ಅದೇನೇನು ಬೇಕೊ, ಎಲ್ಲ ನೀನೇ ತೊಗೊಂಡ್ಬಿಡು. ನಾನು ದುಡ್ಡು ಕೊಟ್ಟುಬಿಡ್ತೀನಿ"

"ಯಾಕೆ, ನಾನೇ ಎಲ್ಲ ಮಾಡಿದೀನೀಂತಲೊ?"

"ಇಲ್ಲ. ನಂಗೊತ್ತಾಗೊಲ್ಲ, ಆದ್ದರಿಂದ."

"ಹಾಗಾದರೆ ನೀವೂ ಬನ್ನಿ"

"ಬರೋಣ, ಅದಕ್ಕೇನು."

"ಈಗಲೇ ಹೋಗೋಣ."

"ಈಗ ಬೇಡ. ನಾಳೆ ಆಫೀಸಿಂದ ಮುಂಚೆ ಬರ್ತೀನಿ, ಹೋಗೋಣ"

"ಸರಿ" ಎಂದು ಗೌರಿ ಮಗುವನ್ನು ರಾಮುಸ್ವಾಮಿಯ ಕೈಗೆ ಕೊಟ್ಟು, ಫೀಡಿಂಗ್ ಬಾಟ್ಲ್ ಮತ್ತು ಹಾಲಿನ ಲೋಟ ತೊಳೆಯಲು ಬಚ್ಚಲುಮನೆಗೆ ಹೋದಳು.

ಮಗು ಸ್ವಲ್ಪ ಹೊತ್ತು ಸುಮ್ಮನಿತ್ತು; ಪುನಃ ಅಳುವುದಕ್ಕೆ ಷುರು ಮಾಡಿತು. ರಾಮುಸ್ವಾಮಿ ಸಮಾಧಾನ ಮಾಡಲಾಗದೆ ಅದನ್ನು ಹೆಂಡತಿಯ ಕೈಗೆ ಕೊಟ್ಟ.

ಗೌರಿ ಮಗುವನ್ನು ಸಮಾಧಾನ ಮಾಡಿದಳು; ಆದರೆ ಅದು ಅಳುವನ್ನು ನಿಲ್ಲಿಸಲಿಲ್ಲ. "ಹೊರಗಡೆ ಕರಕೊಂಡ್ಹೋದರೆ ಅಳು ನಿಲ್ಲಿಸುತ್ತೆ, ಎಷ್ಟಾದರೂ ಗಂಡಸು! ಹೊರಗಡೆ ಹೋಗಬೇಕೂಂತ" ಎಂದು ಹೊರಗಡೆಗೆ ಹೋದಳು.

ರಾಮುಸ್ವಾಮಿ "ಏನು ಹೆಸರಿಟ್ಟಿದಾರೆ?" ಎಂದು ಕೇಳಿದ.

"ಅಯ್ಯೋ, ಅದನ್ನೇ ಕೇಳಲಿಲ್ಲಾಂದ್ರೆ. ಮರೆತ್ಬಿಟ್ಟೆ. ಈಗ ನಾವೇ ಇಡಬೇಕು. ನೀವು ತೊಟ್ಟಿಲು ತಂದಮೇಲೆ ನಾಳೆ ಇಡೋಣ." ಎಂದು ಗೌರಿ ನಕ್ಕಳು.

"ಸರಿ. ಏನು ಇಡಬೇಕೂಂತ?"

"ನೀವೇ ಹೇಳಿ, ಏನಿಡಬೇಕೊ" ಎಂದು ಗೌರಿ ಒಳಗೆ ಬಂದಳು.

ಬಾಗಿಲಲ್ಲಿಯೇ ನಿಂತಿದ್ದ ರಾಮುಸ್ವಾಮಿ "ನೀನು ಹೆಸರುಗಳನ್ನ ಹೇಳು, ನಾನು ಆರಿಸ್ತೀನಿ" ಎಂದ.

ಗೌರಿ "ಶ್ರೀನಾಥ್, ಪ್ರಕಾಶ್, ವಸಂತ, ಮೋಹನ, ಆನಂದ," ಎಂದು ಒಂದೊಂದಾಗಿ ಹೇಳಿದಳು; ಅಳುತ್ತಿದ್ದ ಮಗು ಏಕೊ ನಕ್ಕಿತು.

ರಾಮುಸ್ವಾಮಿ "ಸಾಕು ಸಾಕು. ನಗುತ್ತೆ ನೋಡು ಮಗು. 'ಆನಂದ!' ಸರಿಯಾಗಿದೆ. ಅದೇ ಹೆಸರು ಇಡೋಣ" ಎಂದ.

ಗೌರಿ "ಹೌದೂಂದ್ರೆ, ಅದೇ ಸರಿಯಾಗಿದೆ. ನಮ್ಮಿಬ್ಬರಿಗೂ

ಆನಂದ" ಎಂದು ನಗುತ್ತ ಮಗುವನ್ನು ಮುದ್ದಾಡಿ ಹೊರಗಡೆಗೆ ಕರೆದುಕೊಂಡುಹೋದಳು.

ಆದರೆ, ಆನಂದ ಉಂಟಾಗಲಿಲ್ಲ.

ಸಂಜೆ ಎಲ್ಲಿಯಾದರೂ ಒಂದು ಸುತ್ತು ಹೋಗಿಬರುತ್ತಿದ್ದ ರಾಮಸ್ವಾಮಿ ಗೌರಿಗೆ ಸಹಾಯಕನಾಗಿ ಮನೆಯಲ್ಲಿಯೇ ಉಳಿಯ ಬೇಕಾಯಿತು.

ರಾತ್ರಿ ಗೌರಿ ಒಂದು ಅನ್ನ ಸಾರು ಮಾಡುವುದೇ ಕಷ್ಟವಾಯಿತು. ಮಗು ಅಳುವುದನ್ನು ನಿಲ್ಲಿಸಲೇ ಇಲ್ಲ. ದೃಷ್ಟಿ ತೆಗೆದು ಒಂದು ಪೊರಕೆ ಹಂಚಿಕಡ್ಡಿ ಸುಟ್ಟಳು, ಐದಾರು ಮೆಣಸಿನಕಾಯಿ ನಿವಾಳಿಸಿ, ಒಲೆಗೆ ಹಾಕಿದಳು. ಆದರೂ ಮಗು ಸುಮ್ಮನಾಗಲಿಲ್ಲ.

ಗಂಡ ಊಟಮಾಡಿದ ಮೇಲೆ, ಮಗುವನ್ನು ಜೋಣಲಿಯಲ್ಲಿ ಹಾಕಿ ತೂಗಿದಳು. ರಾಮಸ್ವಾಮಿ ತಮ್ಮಿಬ್ಬರ ಹಾಸಿಗೆ ಹಾಸಿದ. ಎಷ್ಟು ತೂಗಿದರೂ ಮಗು ಸುಮ್ಮನಾಗಲಿಲ್ಲ. ಗೌರಿ ಯಾಕೊ ಏನೊ ಪಾಪ, ಎಂದು ಒಂದು ಚಿಟಿಕೆ ಸಕ್ಕರೆ ತಂದು ಮಗುವಿನ ಬಾಯಿಗೆ ಹಚ್ಚಿದಳು. ಆನಂದ ಅದನ್ನು ಚಪ್ಪರಿಸಿ ಸುಮ್ಮನಾದ.

"ಮಗು ಸುಮ್ಮನಾಗಿದೆ. ನೀವು ಸ್ವಲ್ಪ ತೂಗ್ತಾ ಇರಿ. ನಾನು ಬೇಗ ಊಟ ಮಾಡಿಕೊಂಡು, ಎಲ್ಲ ಮುಚ್ಚಿಟ್ಟು ಬಂದುಬಿಡ್ತೀನಿ" ಎಂದು ಅಡಿಗೆಮನೆಗೆ ಹೊರಟಳು. ಆದರೆ ಆನಂದ ಮತ್ತೆ ಅಳತೊಡಗಿದ. ಗೌರಿ ಬೇಗಬೇಗ ಊಟ ಮಾಡಿ, ಎಲ್ಲ ಮುಚ್ಚಿಟ್ಟು ಕೋಣೆಗೆ ಬಂದಳು.

ರಾಮಸ್ವಾಮಿಗೆ ಸಾಕಾಗಿ, ಹಾಸಿಗೆಯ ಮೇಲೆ ಸುಮ್ಮನೆ ಮಲಗಿ ಬಿಟ್ಟ.

ಗೌರಿ ತನಗೆ ಬಂದಿದ್ದ ಹಾಡನ್ನೆಲ್ಲ ಹೇಳಿದಳು. ಮಗು ಸುಮ್ಮನಾ ಗಲಿಲ್ಲ. ಹೊಟ್ಟೆ ನೋಯುತ್ತೊ, ಏನೊ, ಎಂದು ಹೊಟ್ಟೆಗೆ ಹರಳೆಣ್ಣೆ ಸವರಿ, ನೀವಿದಳು. ಆದರೂ ಮಗು ಅಳುವನ್ನು ನಿಲ್ಲಿಸಲಿಲ್ಲ. 'ಛೆ, ತಾಯಿ ಇಲ್ಲಿಲ್ಲ. ಅದಕ್ಕೇ ಅಳುತ್ತಿದೆ. ಪಾಪ, ನಾನೆಂಥ ಕೆಟ್ಟ ಕೆಲಸ ಮಾಡಿದೆ. ನರಸಮ್ಮ ಊರಿಗೆ ಹೊರಟು ಹೋಗಿರಬೇಕು; ಇಲ್ಲದಿದ್ದರೆ ಆಕೆ ರಾತ್ರಿ

ಊಟಕ್ಕೆ ಬರುತ್ತಿದ್ದರು. ಇದನ್ನು ಬೇಗ ಸಮಾಧಾನ ಮಾಡುತ್ತಿದ್ದರು’ ಎಂದುಕೊಂಡಳು. ಮಗು ಅತ್ತು ಅತ್ತು ಸಾಕಾಗಿ ಬೆಳಗಿನ ಜಾವದ ಹೊತ್ತಿಗೆ ಸುಮ್ಮನೆ ಮಲಗಿಕೊಂಡಿತು. ಸ್ವಲ್ಪ ಹೊತ್ತಾದ ಮೇಲೆ ಗೌರಿ ಎದ್ದು ಜೋಣಲಿಯೊಳಕ್ಕೆ ತಲೆ ಹಾಕಿ ನೋಡಿದಳು. ಮಗು ನಿದ್ರಿಸುತ್ತಿತ್ತು. ಆದರೆ ನಿದ್ದೆಗಣ್ಣಿನಲ್ಲಿಯೂ ಸಹ ಅದು ಬಿಕ್ಕಿಬಿಕ್ಕಿ ಅಳುತ್ತಿತ್ತು.

* * * * *

ಬೆಳಗ್ಗೆ ರಾಮಸ್ವಾಮಿಯೇ ಮೊದಲು ಎದ್ದು ನೀರೊಲೆಗೆ ಉರಿ ಹಾಕಿದ. ಕಾಫಿ ಒಲೆ ಹೊತ್ತಿಸಿದ. ಜವಾನ ಜವರನಿಗೆ ಬೀದಿಯ ಬಾಗಿಲು ತೆರೆದ; ಗೌರಿ ಎಂಟು ಗಂಟೆಗೆ ಎದ್ದಳು. ದೇವರ ಪಟಕ್ಕೆ ಕೈಮುಗಿದು ಜೋಣಲಿಯಲ್ಲಿ ನೋಡಿದಳು. ಮಗು ಇನ್ನೂ ಮಲಗಿ ನಿದ್ರಿಸುತ್ತಿತ್ತು. “ಪಾಪ, ರಾತ್ರಿಯೆಲ್ಲ ಅತ್ತು ಅತ್ತು ಸುಸ್ತಾಗಿದೆ, ಮಲಗಿರಲಿ. ಚೆನ್ನಾಗಿ ನಿದ್ದೆ ಮಾಡಲಿ” ಎಂದುಕೊಂಡು ಹಾಸಿಗೆ ಸುತ್ತಿ ಅಡಿಗೆಮನೆಗೆ ಹೋದಳು.

ಅಷ್ಟು ಹೊತ್ತಿಗಾಗಲೆ ಗಂಡನ ಸ್ನಾನ ಕಾಫಿ ಆಗಿತ್ತು. ತಾನೂ ಸ್ನಾನ ಮಾಡಿ ಕಾಫಿ ಕುಡಿದು, ಗಂಡನನ್ನು ಕುರಿತು “ಇದೇನು ಇವತ್ತು ?” ಎಂದು ಕೇಳಿದಳು.

ರಾಮಸ್ವಾಮಿ “ಏನು ?” ಎಂದ.

“ಬೇಗ ಎದ್ದು ಒಲೆ ಉರಿ ಹಾಕಿ, ಕಾಫಿ ಮಾಡಿ, ಸ್ನಾನ ಮಾಡಿ....”

“ಹೌದು ಮತ್ತೆ. ನೀನೇಳಲಿಲ್ಲ, ಆದ್ದರಿಂದ.”

“ನಾನೇನು ಮಾಡಲಿ ಹೇಳಿ. ನೀವೇನೊ ಮಲಕ್ಕೊಂಡ್ಬಿಟ್ಟಿರಿ. ಮೂರು ಗಂಟೆ ಆದರೂ ಮಗು ಮಲಕ್ಕೊಳ್ಳಲಿಲ್ಲ.”

“ಸರಿ.—ನಾನು ಹೊರಡ್ತೀನಿ. ಇವತ್ತು ಆಫೀಸಿನಲ್ಲಿ ಸ್ವಲ್ಪ ಅರ್ಜೆಂಟ್ ಕೆಲಸ ಇದೆ. ಒಂದು ಗಂಟೆ ಹೊತ್ತಿಗೆ ಊಟಕ್ಕೆ ಬರ್ತೀನಿ. ನನಗೋಸ್ಕರ ನೀನೇನು ಕಾಯಬೇಡ. ನಿನ್ನ ಪಾಡಿಗೆ ನೀನು ಊಟ ಮಾಡು. ಕಸ ಗುಡಿಸಿದ್ದಾದ ಕೂಡಲೆ ಜವರನ್ನ ಆಫೀಸ್ ಹತ್ತಿರ ಕಳಿಸು.”

“ಆಗಲಿ—ಹಾಗಾದರೆ ಸಾಯಂಕಾಲ ಹೋಗೋಣವಾ ?”

“ಹೋಗೋಣ. ನಾಲ್ಕು ಗಂಟೇಗೇ ನಾನು ಆಫೀಸಿಂದ ಬಂದ್ಬಿಡ್ತೀನಿ”

ಎಂದು ರಾಮುಸ್ವಾಮಿ ಸೈಕಲ್ ತೆಗೆದುಕೊಂಡು ಆಫೀಸಿನ ಕಡೆಗೆ ಹೊರಟ.

ಜವರ ಕೋಣೆಯನ್ನು ಗುಡಿಸುತ್ತಿದ್ದ. ಎಲ್ಲ ಕಸ ಗುಡಿಸಿದ್ದಾದ ಮೇಲೆ ಗೌರಿ ಜವರನನ್ನು ಆಫೀಸಿನ ಕಡೆಗೆ ಕಳಿಸಿ, ಬೀದಿಯ ಬಾಗಿಲನ್ನು ಮುಂದಕ್ಕೆ ಮಾಡಿಕೊಂಡು ಬಂದಳು.

ಸ್ವಲ್ಪ ಹೊತ್ತಿನಲ್ಲಿಯೇ, ಯಾರೋ ಬೀದಿಯ ಬಾಗಿಲು ತಳ್ಳಿದ ಹಾಗಾಯಿತು.

ಗೌರಿ "ಯಾರು ?" ಎಂದು ಅಡಿಗೆಮನೆಯಿಂದ ಹೊರಗೆ ಬಂದಳು.

ಆ ಮಗುವಿನ ತಾಯಿ ನರಸಮ್ಮ ಬಾಗಿಲಲ್ಲಿ ಅಳುತ್ತಾ ನಿಂತಿದ್ದಳು.

ನಿನ್ನೆ ಗೌರಿ ಕೊಟ್ಟಿದ್ದ ಐದು ರೂಪಾಯಿಯ ನೋಟು, ಆಕೆಯ ಬಲಗೈಯಲ್ಲಿತ್ತು ; ಸೀರೆ ಕುಪ್ಪಸಗಳು ಎಡ ಕಂಕುಳಲ್ಲಿದ್ದುವು.

ಗೌರಿ "ಬನ್ನೀಮ್ಮ ಒಳಗೆ. ನೀವು ಊರಿಗೆ ಹೊರಟುಹೋದಿರಿ ಅಂತ ತಿಳಿದಿದ್ದೆ" ಎಂದಳು.

ಆಕೆ "ಇಲ್ಲ ತಾಯಿ, ನಾನು ಹೇಗೆ ಹೋಗಲಿ. ದಯವಿಟ್ಟು ಇದನ್ನ ತೊಗೊಂಡು ನನ್ನ ಮಗೂನ ಕೊಡಿ. ನಾನು ಅದನ್ನ ಬಿಟ್ಟಿರ ಲಾರೆ" ಎಂದು ಅಲ್ಲಿಯೇ ನಿಂತು, ಅಳುತ್ತಾ ಹೇಳಿದಳು.

ಗೌರಿಯ ಬಾಯಿಂದ ಮಾತೇ ಹೊರಡಲಿಲ್ಲ.

ಕಷ್ಟಪಟ್ಟು, "ಪರವಾಯಿಲ್ಲ, ಒಳಗೆ ಬನ್ನೀಮ್ಮಾ" ಎಂದು ಪುನಃ ಆಕೆಯನ್ನು ಕರೆದಳು.

ನರಸಮ್ಮ ಒಳಗೆ ಬಂದು, ಐದು ರೂಪಾಯಿಯ ನೋಟನ್ನೂ ಸೀರೆ ಕುಪ್ಪಸದ ಗಂಟನ್ನೂ ನೆಲದ ಮೇಲಿಟ್ಟು "ನಾನು ನಿಮಗೆ ತುಂಬ ತೊಂದರೆ ಕೊಟ್ಟೆ. ದಯವಿಟ್ಟು ನನ್ನ ಮಗೂನ ವಾಪಸು ಕೊಡಿ. ರಾತ್ರಿಯೆಲ್ಲ ನನಗೆ ನಿದ್ದೆಯಿಲ್ಲ. ಎಲ್ಲಿ ನನ್ನ ಮಗು ?" ಎಂದು ಪಡಸಾಲೆಯ ಸುತ್ತ ನೋಡಿದಳು.

ಗೌರಿ ಮಾತಾಡದೆ, ನೇರವಾಗಿ ಮಲಗುವ ಕೋಣೆಗೆ ಹೋದಳು. ಜೋಣಲಿಯಲ್ಲಿದ್ದ ಮಗುವನ್ನೆತ್ತಿಕೊಂಡು ಬಂದು ಅದರ ತಾಯಿಯ ಕೈಯಲ್ಲಿಟ್ಟಳು. ಹಾಲುಬಿಳುಪಿನ ಹೊಸ ಅಂಗಿ, ಹೊಸ ಕಾಚ ಕಟ್ಟಿ

ಕೊಂಡಿದ್ದ ತನ್ನ ಮಗುವನ್ನು ಆ ತಾಯಿ ಬೇಗ ಬಾಚಿ ತಬ್ಬಿಕೊಂಡಳು. ಮಗುವಿಗೆ ಎಚ್ಚರವಾಯಿತು; ಕಣ್ಣು ಬಿಟ್ಟು ನೋಡಿತು. ತಾಯಿ "ನನ್ನ ಕ್ಷಮಿಸು ಕಂದಾ" ಎಂದು ಅದರ ಕೆನ್ನೆಗೆ ಒಂದು ಮುತ್ತು ಕೊಟ್ಟಳು. ಗೌರಿ ಶಿಲೆಯಂತೆ ನಿಂತು ಆ ತಾಯಿ ಮಗುವನ್ನೇ ನೋಡುತ್ತಿದ್ದಳು. ಮಗು ತಾಯಿಯ ಮುಖ ನೋಡಿ ನಕ್ಕಿತು.

ನರಸಮ್ಮ ಗೌರಿಯ ಕಡೆಗೆ ತಿರುಗಿ "ದಯವಿಟ್ಟು ನನ್ನನ್ನ ಕ್ಷಮಿಸಿ ತಾಯಿ. ನಿಮಗೆ ತುಂಬ ತೊಂದರೆ ಕೊಟ್ಟೆ" ಎಂದು ಮಗುವಿನ ಹೊಸ ಅಂಗಿಯನ್ನು ಬಿಚ್ಚತೊಡಗಿದಳು.

ಗೌರಿ "ಬೇಡಿ ಬೇಡಿ. ಆ ಅಂಗಿ ಅದರದ್ದೇ. ಅವನಿಗೋಸ್ಕರವೇ ತಂದದ್ದು. ಅದು ಹಾಗೇ ಇರಲಿ" ಎಂದಳು.

ನರಸಮ್ಮ ತಲೆಯೆತ್ತಿ ನೋಡಿದಳು.

ಗೌರಿಯ ಕಣ್ಣು ತುಂಬ ಕಂಬನಿ ತುಂಬಿತ್ತು.

ಮತ್ತೆ "ನಿಮ್ಮ ಮನಸ್ಸಿಗೆ ತುಂಬ ಬೇಜಾರು ಮಾಡಿದೆ. ತಾಯಿ, ನನ್ನನ್ನ ಕ್ಷಮಿಸಿ, ನಾನು ಬರ್ತೀನಿ. ಇದನ್ನ ತೊಗೊಳ್ಳಿ" ಎಂದು ನರಸಮ್ಮ ಆ ಸೀರೆ ಕುಪ್ಪಸದ ಗಂಟು, ಐದು ರೂಪಾಯಿಯ ನೋಟು ನೋಡಿ ಹೇಳಿ ಎದ್ದಳು.

ಗೌರಿ "ಬೇಡಬೇಡ, ತೊಗೊಳ್ಳಿ. ಸಲ್ಪ ತಡೀರಿ" ಎಂದು ಒಳಗೆ ಹೋಗಿ ಮಗುವಿನ ಇನ್ನೊಂದು ಹೊಸ ಅಂಗಿ, ಮೂರು ಕಾಚ, ಫೀಡಿಂಗ್ ಬಾಟ್ಲ್ ಎಲ್ಲ ತಂದು ನರಸಮ್ಮನ ಮುಂದಿಟ್ಟಳು; "ಇದೆಲ್ಲ ಅವಂದೇ, ದಯವಿಟ್ಟು ತೊಗೊಂಡ್ಹೋಗಿ" ಎಂದು ಕೇಳಿಕೊಂಡಳು.

ನರಸಮ್ಮ ಮತ್ತೆ ಗೌರಿಯ ಮುಖ ನೋಡಿದಳು.

ಮುಖ ಕೆಂಪಡರಿತ್ತು, ತುಟಿ ಅದುರುತ್ತಿತ್ತು, ಗಂಟಲು ದುಃಖ ತುಂಬಿ ಉಬ್ಬಿಕೊಂಡಿತ್ತು, ಕಂಬನಿ ಕಣ್ಣು ತುಂಬಿ ಕೆನ್ನೆಯ ಮೇಲೆ ಇಳಿಯುವುದರಲ್ಲಿತ್ತು.

ನರಸಮ್ಮ "ನನಗೆ ಬೇಡ ತಾಯಿ, ಇವೆಲ್ಲ ಯಾಕೆ?" ಎಂದಳು.

ಗೌರಿ "ನನ್ನ ಸಂತೋಷಕ್ಕೆ ತೊಗೊಂಡ್ಹೋಗಿ" ಎಂದು ಎಲ್ಲ ಗಂಟು

ಕಟ್ಟಿ ಕೈಗೆ ನೀಡಿದಳು; ಗೂಡಿನಲ್ಲಿದ್ದ ಕುಂಕುಮದ ಬಟ್ಟಲನ್ನು ತಂದು ಮುಚ್ಚಳ ತೆಗೆದು ಮುತ್ತೈದೆಗೆ ಕುಂಕುಮ ಕೊಟ್ಟಳು.

ನರಸಮ್ಮ ಮೂಕಿಯಾದಳು. ಎಷ್ಟು ನೋಡಿ, ಅವಳ ಬಾಯಿಂದ ಮಾತೇ ಹೊರಡಲಿಲ್ಲ. ಕಷ್ಟದಿಂದ "ಬರ್ತೀನಿ ತಾಯಿ" ಎಂದು ಹೇಳಿ ಹೊರಟಳು.

ಗೌರಿ ಆಕೆಯ ಹಿಂದೆಯೆ ಜಗಲಿಯ ವರೆಗೂ ಹೋದಳು.

ನರಸಮ್ಮ ಮರೆಯಾಗುವ ವರೆಗೂ ಆ ಕಡೆಯೇ ನೋಡುತ್ತಿದ್ದಳು. ತಾಯಿ ಹಾಗೆ ಹೋಗುತ್ತಿದ್ದರೂ ಭುಜದ ಮೇಲಿದ್ದ ಮಗುವಿನ ಮುಖ ಗೌರಿಯ ಕಡೆಗೇ ಇತ್ತು.

ನರಸಮ್ಮ ಮರೆಯಾದಳು.

ಗೌರಿ ಒಂದು ನಿಟ್ಟುಸಿರು ಬಿಟ್ಟು, ಒಳಗೆ ಬಂದಳು.

# ರಾ. ವೆಂ. ಶ್ರೀನಿವಾಸರ ಕೃತಿಗಳು

| | | | |
|---|---|---|---|
| ಮಲಮಗಳು | (ಕಾದಂಬರಿ) | .... | ೧ ೧೨ ೦ |
| ಸವತಿ | ( ,, ) | .... | ೧ ೧೨ ೦ |
| ಹೆಣ್ಣಿನ ಕಣ್ಣು | ( ,, ) | .... | ೧ ೧೫ ೦ |
| ಬಿಸಿಲುಗುದುರೆ | ( ,, ) | .... | ೩ ೮ ೦ |
| ರಾಜ ರಾಣಿ ಗುಲಾಮ | ( ,, ) | .... | ಅಚ್ಚಿನಲ್ಲಿ |
| ದುಃಖಸೇತು | ( ಕತೆಗಳು ) | .... | ೧ ೪ ೦ |
| ಚೀನಾದ ಪ್ರಣಯ ಕತೆಗಳು | | .... | ಅಚ್ಚಿನಲ್ಲಿ |
| ರಸನಿಮಿಷ | ( ಕತೆಗಳು ) | .... | ಅಚ್ಚಿನಲ್ಲಿ |
| ಪುನರ್ಜನ್ಮ | ( ಪ್ರಹಸನ ) | .... | ೦ ೬ ೦ |
| ಭಾನುವಾರದ ಬಯಕೆ | ( ,, ) | .... | ೦ ೮ ೦ |